**HASTHA SAMUDRIKA SASTRA** an Astrology book written by Vidvan K. Chandra Shekar, Published by M/s T. Narayana Iyengar, Book Seller and Publisher, Balepet, Bangalore 560 053. Ph. 2259944

ಪ್ರಥಮ ಮುದ್ರಣ: 1996



D.T.P. By Laser Line Graphics, Bangalore 560 053.

ಮುದ್ರಣ: ಕ್ರೋಮೋಗ್ರಾಫಿಕ್ಸ್, ಬೆಂಗಳೂರು.

# ಮುನ್ನುಡಿ

ಹಸ್ತರೇಖೆಗಳಿಂದ ಮಾನವರ ಗುಣ, ಅವಗುಣ, ಕರ್ಮ, ಭಾಗ್ಯ, ರೋಗ, ಶಿಕ್ಷಣ, ಭೂತ–ಭವಿಷ್ಯಗಳ ಸಂಪೂರ್ಣ ಸೂಚನೆ ಪ್ರಾಪ್ತವಾಗುತ್ತದೆ.

ರೇಖೆಗಳು ಹಸ್ತದಲ್ಲಿ ಉದಿತವಾಗುವುದು ಮನುಷ್ಯನ ಜೀವನಶಕ್ತಿಯ ಕಾರ್ಯ. ರೇಖೆಗಳೇ ಅಂಗಗಳಿಗೆ ಶಕ್ತಿಯನ್ನು ನೀಡುತ್ತವೆ, ವಿಕಾಸಗೊಳಿಸುತ್ತವೆ ಮತ್ತು ರೇಖೆಗಳು ತಮ್ಮ ಯಥಾರ್ಥ ಸ್ವರೂಪವನ್ನು ಧರಿಸಿಕೊಳ್ಳುತ್ತವೆ.

ಹಸ್ತರೇಖೆಗಳ ಬಗ್ಗೆ ಎಲ್ಲರೂ ಸರಳವಾಗಿ ತಿಳಿದುಕೊಳ್ಳಬೇಕೆಂಬ ಉದ್ದೇಶದಿಂದ ನಾನು ಈ ಕೃತಿಯನ್ನು ಪಾಠಕರಿಗೆ ಅರ್ಪಿಸುತ್ತಿದ್ದೇನೆ.

ಈ ಕೃತಿಯನ್ನು ಪ್ರಕಟಿಸುತ್ತಿರುವ ಮೆಸರ್ಸ್ ಟಿ. ನಾರಾಯಣ ಅಯ್ಯಂಗಾರ್ ಅವರಿಗೆ ನನ್ನ ವಂದನೆಗಳು. ಅಂದವಾದ ಮುಖಚಿತ್ರವನ್ನು ಹಾಗೂ ಇತರ ಚಿತ್ರಗಳನ್ನು ರಚಿಸಿ ಕೊಟ್ಟ ಕಲಾವಿದರಿಗೂ, ಅಚ್ಚುಕಟ್ಟಾಗಿ ಮುದ್ರಣಕಾರ್ಯ ನೆರವೇರಿಸಿ ಕೊಟ್ಟ ಪ್ರೆಸ್‌ನವರಿಗೂ ನಾನು ಆಭಾರಿಯಾಗಿದ್ದೇನೆ.

ಈ ಕೃತಿಯ ಸಫಲತೆ ಮತ್ತು ಅಸಫಲತೆಯ ಭಾರವನ್ನು ನಾನು ಓದುಗರಿಗೇ ಒಪ್ಪಿಸುತ್ತಿರುವೆ.

13-6-1994 ಇತಿ ನಿಮ್ಮವನೇ ಆದ

ಬೆಂಗಳೂರು **ವಿದ್ವಾನ್ ಕೆ. ಚಂದ್ರಶೇಖರ್**

# ವಿಷಯ ಸೂಚಿ

## ಅಧ್ಯಾಯ 1

# ಹಸ್ತದ ಪರಿಚಯ

ಸಾಮಾನ್ಯವಾಗಿ ರಚನೆಯ ಆಧಾರದ ಮೇಲೆ ಪ್ರತಿಯೊಂದು ಆಕೃತಿಯ ಕೈಯನ್ನು ಕೆಳಕಂಡಂತೆ ಪ್ರಮುಖವಾಗಿ ವಿಭಾಜಿಸಬಹುದು.

ಹಸ್ತ ಅನೇಕ ಚಿಕ್ಕ ಚಿಕ್ಕ ಮೂಳೆಗಳಿಂದ ಮಾಡಲ್ಪಟ್ಟದುದಾಗಿದೆ. ಹಸ್ತದಲ್ಲಿ ಸುಮಾರು 14–15 ಪ್ರಕಾರದ ಮೂಳೆಗಳು ಪರಸ್ಪರ ಸೇರಿಸಲ್ಪಟ್ಟಿರುತ್ತದೆ. ಮುಂಬದಿಯ ಭಾಗದಲ್ಲಿ 3–3 ಮೂಳೆಗಳಿಂದ ಬೆರಳುಗಳು ಮತ್ತು ಎರಡು ಮೂಳೆಗಳಿಂದ ಹೆಬ್ಬೆರಳಿನ ನಿರ್ಮಾಣವಾಗಿರುತ್ತದೆ. ಈ ಮೂಳೆಗಳ ಮೇಲ್ಭಾಗ ಉಗುರುಗಳಿಂದ ಸುರಕ್ಷಿತವಾಗಿರುತ್ತದೆ.

ಈ ಭಾಗ ಮಣಿಕಟ್ಟು ಎಂದು ಕರೆಯಲ್ಪಡುತ್ತದೆ. ಮಣಿಕಟ್ಟಿನಿಂದ ಬೆರಳುಗಳ ತುದಿಭಾಗದವರೆಗಿನ ಸಂಪೂರ್ಣ ಪಂಜಾ (ಅಂಗೈ ಸಹಿತ ಐದು ಬೆರಳು), ಹಸ್ತ ಪೃಷ್ಠ ಅಂದರೆ ಹಸ್ತದ ಬೆನ್ನಿನ ಭಾಗ, ಅಂಗೈ ಅಂದರೆ ಮಣಿಕಟ್ಟಿನಿಂದ ಬೆರಳುಗಳ ಜಡದವರೆಗಿನ ಭಾಗ, ಹೆಬ್ಬೆರಳು, ಬೆರಳುಗಳು, ಉಗುರು ಇವೆಲ್ಲವುಗಳಲ್ಲಿ ವಿಭಿನ್ನ ಪ್ರಕಾರದ ಸ್ಪಷ್ಟ ಅಥವಾ ಅಸ್ಪಷ್ಟರೇಖೆಗಳಿರುತ್ತವೆ.

ಈ ಕೆಳಕಂಡಂತೆ ನಾವು ಹಸ್ತವನ್ನು ಏಳು ಭಾಗವಾಗಿ ವಿಭಾಗ ಮಾಡಬಹುದು.

1. **ಮಣಿಕಟ್ಟು**
2. **ಮಣಿಕಟ್ಟಿನಿಂದ ಬೆರಳುಗಳ ತುದಿಯ ಭಾಗದವರೆಗಿನ ಸಂಪೂರ್ಣ ಪಂಜಾ.**
3. **ಹಸ್ತಪೃಷ್ಠ (ಹಸ್ತದ ಬೆನ್ನಿನ ಭಾಗ)**
4. **ಅಂಗೈ (ಮಣಿಕಟ್ಟಿನಿಂದ ಬೆರಳುಗಳ ಜಡದವರೆಗಿನ ಭಾಗ)**
5. **ಹೆಬ್ಬೆರಳು**
6. **ಬೆರಳು**
7. **ಉಗುರು**

ಹಸ್ತದ ಬೆನ್ನಿನ ಭಾಗ ಮಾನವ ಮನಸ್ಸಿನ ಸ್ವಭಾವ ಸ್ಪಷ್ಟಪಡಿಸುವುದಕ್ಕೆ ಸಹಾಯಕವಾಗುತ್ತದೆ. ಅವನ ಪ್ರವೃತ್ತಿ ವೃತ್ತಿ ಮತ್ತು ಬೌದ್ಧಿಕ ವಿಕಾಸದ ಅಂದಾಜು ಇದರಿಂದಲೇ ಹೊಂದಿಕೊಂಡಿರುತ್ತದೆ. ಕಾರ್ಯ–ವೃತ್ತಿಗಳಲ್ಲಿ ಆಸಕ್ತಿ, ಧೈರ್ಯ, ಅಧ್ಯವಸಾಯ, ಪರಿಶ್ರಮ,

ಆಲಸ್ಯ, ಅಧೈರ್ಯ, ನಿಶ್ಶಕ್ತಿ ವಿದ್ಯೆ – ಅವಿದ್ಯೆ, ಶೀಲ – ಅಶ್ಲೀಲ, ಸೌಮ್ಯತೆ – ಕ್ರೂರತೆ ಇತ್ಯಾದಿ ಗುಣಾವಗುಣಗಳ ಸಂಪೂರ್ಣ ವಿವರ ಇದರಿಂದ ತಿಳಿದುಬರುತ್ತದೆ. ತ್ರಿಕೋಣ, ಚತುಷ್ಕೋಣ, ನಕ್ಷತ್ರ, ಶಿಲುಬೆ ಮುಂತಾದವುಗಳಿಂದ ಅಂಗೈ, ಮಣಿಕಟ್ಟು, ಹೆಬ್ಬೆರಳು ಅಥವಾ ಬೆರಳುಗಳ ಮೇಲೆ ಎಲ್ಲಿಯಾದರೂ ಕಂಡುಬರುತ್ತವೆ. ಆದ್ದರಿಂದ ಈ ಚಿಹ್ನೆಗಳಿಗೂ ಸಹ ಮಹತ್ವ ಕೊಡಬೇಕಾದುದು ಆವಶ್ಯಕವಾಗಿರುತ್ತದೆ.

ಎಲ್ಲಾ ಸೇರಿ ಅಂಗೈನಲ್ಲಿ ನಾವು ಕೆಳಗಂಡಂತೆ ವಿಭಾಗಿಸಿ ಅವುಗಳ ಅಧ್ಯಯನ ಮಾಡಬಹುದು.

**1. ಸೂರ್ಯಕ್ಷೇತ್ರ**
**2. ಚಂದ್ರಕ್ಷೇತ್ರ**
**3. ಮಂಗಳ ಕ್ಷೇತ್ರ ಪ್ರಥಮ**
**4. ಮಂಗಳ ಕ್ಷೇತ್ರ ದ್ವಿತೀಯ**
**5. ಬುಧ ಕ್ಷೇತ್ರ**
**6. ಬೃಹಸ್ಪತಿ ಕ್ಷೇತ್ರ**
**7. ಶುಕ್ರ ಕ್ಷೇತ್ರ**
**8. ಶನಿಕ್ಷೇತ್ರ**
**9. ರಾಹುಕ್ಷೇತ್ರ**
**10. ಮಣಿಕಟ್ಟು – ಕೇತುಕ್ಷೇತ್ರ**
**11. ಜೀವನ ರೇಖೆ**
**12. ಹೃದಯ ರೇಖೆ**
**13. ಮಸ್ತಿಷ್ಕ ರೇಖೆ**
**14. ಭಾಗ್ಯ ರೇಖೆ**
**15. ಆರೋಗ್ಯ ರೇಖೆ**
**16. ಪರ್ವತ**
**17. ಸೂಕ್ಷ್ಮ ರೇಖೆಗಳು**
**18. ಕಂಡುಬರುವ ಚಿಹ್ನೆಗಳು**

ಹಸ್ತದ ಆಕೃತಿ ಅಥವಾ ಆಕಾರ ಪ್ರಕಾರದ ನಿರ್ಣಯ ಎತ್ತರ, ಉದ್ದ, ಕುಳ್ಳುತನದಿಂದ ಮಾಡಲಾಗುವುದಿಲ್ಲ. ಏಕೆಂದರೆ ಅನೇಕ ಉದ್ದ ಹಸ್ತಗಳು ದೊರೆಯುತ್ತವೆ. ಅದೂ ಅಲ್ಲದೆ ಸಮಾನ ಆಕಾರದ ಹಸ್ತಗಳಲ್ಲಿ ಎಲ್ಲಾ ಅವಯವಗಳು ಸಮಾನವಾಗಿರುವುದು ಸಹ ಸಂಭವವಿರುವುದಿಲ್ಲ.

ಭಾರತೀಯ ವಿದ್ವಾಂಸರುಗಳಿಗೆ ವಿಭಿನ್ನ ವ್ಯಕ್ತಿಗಳ ಕೈಗಳ ರಚನೆಯನ್ನು ವಿಭಿನ್ನ ವರ್ಗಗಳಲ್ಲಿ ವಿಭಾಜಿಸಿದ್ದಾರೆ.

1. **ಯಾವ ಕೈ ಉಷ್ಣವಾಗಿರುತ್ತದೋ ಅಂದರೆ ಕೈ ಸ್ಪರ್ಶಿಸುವುದರಿಂದ ಬಿಸಿ ತಟ್ಟುವುದೋ ಅಂಥಹ ಕೈ**
2. **ಅರುಣ ವರ್ಣದ ಕೈ**
3. **ಬೆವರು ರಹಿತ ಕೈ**
4. **ಛಿದ್ರ ರಹಿತ ಕೈ (ಅಂದರೆ ತಮ್ಮ ಎಲ್ಲಾ ಬೆರಳುಗಳನ್ನು ಪರಸ್ಪರ ಸೇರಿಸಿದಾಗ ಸಂದಿ ಬಿಡದಂಥಹ ಹಸ್ತ)**
5. **ನುಣುಪು ಕೈ**

6. **ಮಾಂಸಯುಕ್ತ (ಹೃಷ್ಟಪುಷ್ಟ) ಕೈ**
7. **ಶ್ಲಕ್ಷ್ಣ್ ಅಂದರೆ ದೊಡ್ಡದಾಗಿರದ ಕೈ**
8. **ತಾಮ್ರವರ್ಣ ಉಗುರಿನಿಂದ ಕೂಡಿದ ಕೈ**
9. **ಉದ್ದನೆಯ ಬೆರಳುಗಳುಳ್ಳ ಕೈ**
10. **ವಿಪುಲ ಕೈ ಅರ್ಥಾತ್ ಹರಡಿಕೊಂಡಿರುವ ಕೈ**

(ಈ ವ್ಯಕ್ತಿ ಬಹಳ ಪ್ರಶಂಸನೀಯನೂ ಸಹ ಆಗಿರುತ್ತಾನೆ)

ವಾನರನಂತೆ ಸಮನಾದ ಕೈ ರಚನೆಯುಳ್ಳ ವ್ಯಕ್ತಿ ಅರ್ಥಾತ್ ಬೆರಳುಗಳ ತೆಳುವಾಗಿ ಉದ್ದವಾಗಿ ಮತ್ತು ತುದಿಭಾಗದ ಕಡೆಗೆ ಸುಂದರವಾಗಿರುವ ವ್ಯಕ್ತಿಗಳು ಪ್ರಾಯಃ ಬಹಳ ಶ್ರೀಮಂತರಾಗಿರುತ್ತಾರೆ.

ಯಾರ ಕೈನ ಆಕೃತಿ ಹುಲಿಯ ಪಂಜರದಂತೆ ಇರುತ್ತದೋ ಅವರು ಪಾಪಕರ್ಮಿಗಳು ಮತ್ತು ದುಷ್ಟರು ಆಗಿರುತ್ತಾರೆ.

ಶಾರೀರಿಕ ಶ್ರಮವನ್ನು ಹೆಚ್ಚು ಮಾಡದೇ ಇರುವ ಕಾರಣದಿಂದಲೂ ಸಹ ವ್ಯಕ್ತಿಯ ಕೈ ಕಠೋರವಾಗಿರುತ್ತದೆ ಮತ್ತು ಅಧಿಕವಾಗಿ ಓಡಾಡುವುದರಿಂದೂ ಸಹ ಕಾಲು ಕೋಮಲವಾಗಿರುತ್ತದೆ. ಇಂತಹ ವ್ಯಕ್ತಿ ಸುಖವಾಗಿ ಆನಂದಮಯ ಜೀವನವನ್ನು ಕಳೆಯುತ್ತಾನೆ.

ಯಾವ ಸ್ತ್ರೀಯರ ಎರಡೂ ಕೈಗಳ ಆಕೃತಿ, ಹೆಬ್ಬೆರಳು ಮತ್ತು ಬೆರಳುಗಳನ್ನು ನೇರ ಮಾಡಿ ಸೇರಿಸಿದಾಗ ಕಮಲಪುಷ್ಪದ ಪರಿಪಕ್ವವದ ಮೇಲೆ ಅರಳಿದ ಮೊಗ್ಗಿನ ರೀತಿ ಕಂಡುಬರುವುದೋ ಅವರು ವಿಪುಲ ಸುಖಗಳನ್ನು ಭೋಗಿಸುವವರು, ಐಶ್ವರ್ಯ ಶಾಲಿಗಳು, ಭೋಗಪ್ರಿಯರು ಆಗಿರುತ್ತಾರೆ.

ಯಾವ ಸ್ತ್ರೀಯರ ಕೈ ಒಣಗಿರುವುದೋ ಮತ್ತು ಯಾರ ಪೃಷ್ಠಭಾಗದ ಮೇಲೆ ನರಗಳ ಜಾಲ ಉಬ್ಬಿರುತ್ತದೋ, ಯಾರದು ಅಸಮಾನ ಆಕೃತಿಯದಾಗಿರುತ್ತದೋ, ಆ ಸ್ತ್ರೀಯರು ನಿರ್ಧನಿಗಳು ಮತ್ತು ದುಃಖಿಗಳು ಆಗಿರುತ್ತಾರೆ.

ಅಸ್ಪಷ್ಟ ಮಣಿಕಟ್ಟು ಯಾವ ಸ್ತ್ರೀಯರ ಕೈಯಲ್ಲಿರುತ್ತದೋ ಅರ್ಥಾತ್ ಯಾವುದರಲ್ಲಿ ಜೋಡಿ ಕಂಡುಬರುವುದಿಲ್ಲವೋ ಮತ್ತು ಹೊಸ ಕಮಲ ಪುಷ್ಪದ ಪರಾಗದ ರೀತಿ ವರ್ಣದ ರಕ್ತಾಂಬ-ಕೆಂಪಾಗಿರುವುದೋ ಆ ಸ್ತ್ರೀಯರು ಪೂರ್ಣ ಐಶ್ವರ್ಯಶಾಲಿಗಳು ಮತ್ತು ದೊಡ್ಡ ಮನೆತನದವರಾಗಿರುತ್ತಾರೆ.

ಹಿಂದಿನ ವಿದ್ವಾಂಸರು ಕೈಯನ್ನು ಮೂರು ಭಾಗವಾಗಿ

ವಿಂಗಡಿಸುತ್ತಾರೆ. ಅವು ಯಾವುವೆಂದರೆ

**1. ಸಾತ್ವಿಕ, 2. ರಾಜಸ, 3. ತಾಮಸ**

ಮತ್ತು ಇದರಲ್ಲಿ ಮಿಶ್ರಿತ ಮತ್ತೊಂದು ಕೈ ಇರುತ್ತದೆ ಅದಕ್ಕೆ "ಮಿಶ್ರಿತ ಕೈ" ಎಂದು ಹೆಸರು.

ಆದರೆ ಪಾಶ್ಚಾತ್ಯ ವಿದ್ವಾಂಸರು ಈ ಕೆಳಕಂಡಂತೆ ಕೈಯನ್ನು ವಿಂಗಡಿಸಿದ್ದಾರೆ.

**1. ನಿಕೃಷ್ಟ ಕೈ (Elementary or Lowest type hand)**



**2. ವರ್ಗಾಕಾರ ಕೈ ಅಥವಾ ಸಮಕೋಣ ಕೈ (Square or Useful Hand)**



3. ದಾರ್ಶನಿಕ ಕೈ (Philosophic or Kuotty Hand)



4. ಚಮತ್ಕಾರ ಅಥವಾ ಕರ್ಮಠ ಕೈ (Spatulate or Active Nervous type Hand)

5. ಕಲಾಪ್ರಧಾನ ಅಥವಾ ವ್ಯಾವಸಾಯಿಕ ಕೈ (Artistic or Comic Hand)



**6. ವಿಷಮ ಅಥವಾ ಆದರ್ಶವಾದಿ ಕೈ (Psychic or Idealistic Hand)**

**7. ಮಿಶ್ರಿತ ಕೈ (Mixed type Hand)**

ಇನ್ನೂ ಕೆಲವು ವಿದ್ವಾಂಸರು ಕೈಗಳ ವರ್ಗೀಕರಣವನ್ನು ಈ ಕೆಳಗಂಡಂತೆ ಮಾಡಿದ್ದಾರೆ.

**1. ಅತ್ಯಂತ ಚಿಕ್ಕದಾದ ಕೈ, 2. ಚಿಕ್ಕ ಕೈ, 3. ಅತ್ಯಂತ ಉದ್ದವಾದ ಕೈ, 4. ಉದ್ದ ಕೈ, 5. ಸಾಮಾನ್ಯ ಕೈ**

ಈ ಕೈನ ವರ್ಗೀಕರಣದ ವಿಷಯವಾಗಿ ತಿಳಿದುಕೊಳ್ಳುವುದಕ್ಕೆ ಮುಂಚೆ ಮಣಿಕಟ್ಟಿನ ಬಗ್ಗೆ ತಿಳಿದುಕೊಳ್ಳೋಣ.

## ಮಣಿಕಟ್ಟು

ಕೈನ ಪ್ರಾರಂಭ ಮಣಿಕಟ್ಟಿನಿಂದಲೇ ಆಗುತ್ತದೆ. ಆದ್ದರಿಂದ ಕೈನ ಪ್ರಥಮ ಭಾಗ ಈ ಮಣಿಕಟ್ಟೇ ಆಗಿರುತ್ತದೆ. ಇದಕ್ಕೆ ಸಂಸ್ಕೃತದಲ್ಲಿ "ಪಾಣಿಮೂಲ" ಎಂದು ಕರೆಯುತ್ತಾರೆ.

ಆಕೃತಿ, ಸ್ವರೂಪ, ಗಂಟಿನ ಆಧಾರದ ಮೇಲೆ ವಿದ್ವಾಂಸರು ಮಣಿಕಟ್ಟನ್ನು ಈ ಕೆಳಗಂಡಂತೆ ವಿಂಗಡಿಸಿದ್ದಾರೆ.

**1. ನಿಗೂಢ, 2. ದೃಢ, 3. ಸುಶ್ಲಿಷ್ಟ ಸಂಧಿ, 4. ಹೀನ, 5. ಶಿಥಿಲ, 6. ಸಶಬ್ದ**

1. **ನಿಗೂಢ:** ಇಂಥಹ ಮಣಿಕಟ್ಟು ಯಾವುದರ ಸಂಧಿ ಅರ್ಥಾತ್ ಸಂದು ಕಾಣಿಸದೆ ಹೋಗುವುದೋ ಅದನ್ನು ನಿಗೂಢ ಮಣಿಕಟ್ಟೆಂದು ಹೇಳಬಹುದು. ಇಂಥಹ ಮಣಿಕಟ್ಟಿನವರಲ್ಲಿ ಸ್ಥಾನದ ಮೇಲೆ ಮಾಂಸ ಅಧಿಕವಾಗಿರುತ್ತದೆ ಮತ್ತು ಇದೇ ಕಾರಣದಿಂದ ಅಂಗೈ ಮತ್ತು ಮಣಿಕಟ್ಟು ಸಮತಲ ಆಕಾರದಂತೆ ಪ್ರತೀತವಾಗುತ್ತದೆ.
2. **ದೃಢ:** ಆ ಮಣಿಕಟ್ಟಿನ ಯಾರ ಗಂಟು ಮತ್ತು ಆಕೃತಿ ಪುಷ್ಟ ಮತ್ತು ಸದೃಢವಾಗಿ ಇರುತ್ತದೆ ಮತ್ತು ನೋಡಲು ಅದು ಬಹು ಸುಂದರವಾಗಿ ಕಾಣುತ್ತದೆ.
3. **ಸುಶ್ಲಿಷ್ಟ ಸಂಧಿ:** ಯಾವ ಮಣಿಕಟ್ಟಿನ ಸಂದುಗಳು ಚೆನ್ನಾಗಿ ಸೇರಿಕೊಂಡಿರುವುದೋ ಅದನ್ನು ಸುಶ್ಲಿಷ್ಟ ಸಂಧಿ ಎಂದು ಕರೆಯುತ್ತಾರೆ.
4. **ಹೀನ:** ಯಾವ ಮಣಿಕಟ್ಟಿನಲ್ಲಿ ಕೈನ ಸಂದು ಗೊತ್ತಾಗುವುದೇ

ಇಲ್ಲವೋ ಅದನ್ನು ಹೀನ ಅಥವಾ ಶೂನ್ಯ ಮಣಿಕಟ್ಟು ಎಂದು ಕರೆಯುತ್ತಾರೆ.

5. **ಶಿಥಿಲ:** ಯಾವ ಮಣಿಕಟ್ಟಿನ ಸಂದು ಸಡಿಲವಾಗಿರುತ್ತದೋ ಅದನ್ನು ಶಿಥಿಲ ಎಂದು ಕರೆಯುತ್ತಾರೆ. ಇಂಥಹ ಮಣಿಕಟ್ಟು ಸ್ವಲ್ಪ ಜಗ್ಗುವಿಕೆಯಿಂದಲೇ ಕೆಳಗೆ ಇಳಿದುಬಿಡುತ್ತವೆ.
6. **ಸಶಬ್ದ:** ಕೈಯನ್ನು ಅಲ್ಲಾಡಿಸುವ, ಮೇಲೆ, ಕೆಳಗೆ ಮಾಡುವ ಸಮಯದಲ್ಲಿ ಮಣಿಕಟ್ಟಿನ ಸ್ಥಾನದಲ್ಲಿ ಕಟ್–ಕಟ್ ಎಂದು ಶಬ್ದವಾಗುತ್ತದೆ ಅದನ್ನು ಸಶಬ್ದ ಮಣಿಕಟ್ಟು ಎಂದು ಕರೆಯುತ್ತಾರೆ.

ಈ ಮಣಿಕಟ್ಟಿನ ಬಗ್ಗೆ ಸಂಸ್ಕೃತದಲ್ಲಿ ಒಂದು ಶ್ಲೋಕವನ್ನು ಹಿಂದಿನ ವಿದ್ವಾಂಸರು ರಚಿಸಿದ್ದಾರೆ. ಅದು ಈ ಕೆಳಕಂಡಂತಿದೆ.

ಮಣಿಬಂಧ್ ನೈನಿಗೂಢೈಟ್ಟೈ ಢೈಶ್ಚ್ ಸುಶ್ಲಿಷ್ಟ ಸಂಧಿಭಿರ್ಭೂಯಾಃ ।
ಹೀನೈ ಟ್ರೈಸ್ತಚ್ಛೇದಾಃ ಶ್ಲಥ್ಯೆಃ ಸಶಬ್ದೈಶ್ಚ ನಿರ್ದ್ರವ್ಯಾಃ ।।

ಅರ್ಥಾತ್ ನಿಗೂಢ, ದೃಢ ಮತ್ತು ಸುಶ್ಲಿಷ್ಟ ಸಂಧಿ ಮಣಿಕಟ್ಟಿನ ಜಾತಕದವರು ರಾಜನ ಸಮಾನ ಐಶ್ವರ್ಯ ಮತ್ತು ಸುಖವನ್ನು ಪಡೆದುಕೊಳ್ಳುತ್ತಾರೆ. ಹೀನ ಮಣಿಕಟ್ಟಿನವರ ಕೈ ಕತ್ತರಿಸಲ್ಪಡುತ್ತದೆ. ಶಿಥಿಲ ಮತ್ತು ಸಶಬ್ದ ಮಣಿಕಟ್ಟಿನ ವ್ಯಕ್ತಿಗಳು ನಿರ್ಧನರಾಗಿರುತ್ತಾರೆ.

ಇದೇ ಪ್ರಕಾರ ಪ್ರಾಚೀನ ವಿದ್ವಾಂಸರು ಕೆಳಗಂಡಂತೆ ಆರು ಪ್ರಕಾರದ ಮಣಿಕಟ್ಟುಗಳ ಬೇರೆ ಬೇರೆ ಪ್ರಭಾವವನ್ನು ತಿಳಿಸಿದ್ದಾರೆ.

1. **ನಿಗೂಢ ಮಣಿಕಟ್ಟು:** ಸುಖ, ಸೌಭಾಗ್ಯ, ಐಶ್ವರ್ಯ, ಆನಂದ, ಪ್ರತಿಷ್ಠೆ ಮತ್ತು ಕೀರ್ತಿಯ ಪ್ರತೀಕವಾಗಿದೆ.
2. **ದೃಢಮಣಿಕಟ್ಟು:** ಸರ್ವಸುಖ, ಧನ, ಐಶ್ವರ್ಯ, ಸಂಪತ್ತು, ಉದ್ಯೋಗ ಮತ್ತು ಮಹತ್ವಾಕಾಂಕ್ಷಿಗಳಾಗಿರುವುದರ ಪ್ರತೀಕವಾಗಿದೆ.
3. **ಸುಶ್ಲಿಷ್ಟ ಮಣಿಕಟ್ಟು:** ಪರಾಕ್ರಮ; ಕೀರ್ತಿ, ವಿದ್ವತ್ತು, ನೀತಿಜ್ಞತ, ನ್ಯಾಯಪ್ರಿಯತೆ, ರಾಜ್ಯಪದ ದಾತ್ರದ ಪ್ರತೀಕವಾಗಿದೆ.
4. **ಹೀನ ಮಣಿಕಟ್ಟು:** ಇವರು ಸದಾ ದುಃಖಿಗಳು, ಅಪರಾಧಿಗಳು, ದರಿದ್ರರು, ಹೀನರು, ರಾಜ್ಯದಂಡ ಪಡೆಯುವವರಾಗಿರುತ್ತಾರೆ.
5. **ಶಿಥಿಲ ಮಣಿಕಟ್ಟು:** ಅಶುಭ ಮತ್ತು ದುಃಖಕಾರಕ
6. **ಸಶಬ್ದ ಮಣಿಕಟ್ಟು:** ದರಿದ್ರತೆ ಮತ್ತು ದುಃಖಕಾರಕ

ಸ್ತ್ರೀ ಜಾತಕರ ಮಣಿಕಟ್ಟಿನ ಬಗ್ಗೆ ವಿದ್ವಾಂಸರು ಈ ಕೆಳಕಂಡಂತೆ ತಿಳಿಸಿದ್ದಾರೆ.

ಯಾವ ಸ್ತ್ರೀಯರ ಮಣಿಕಟ್ಟು ನಿಗೂಢವಾಗಿರುತ್ತದೋ ಮತ್ತು ಕೈ ಪರಿಪಕ್ವ ಪದ್ಮಪುಷ್ಪದ ಒಳಭಾಗದಂತೆ ಕೋಮಲ ಮತ್ತು ರಕ್ತ ವರ್ಣವಾಗಿರುತ್ತದೋ ಅವರು ಮಹಾರಾಣಿಯಂತೆ ಸುಖ ಮತ್ತು ಐಶ್ವರ್ಯವನ್ನು ಪಡೆದುಕೊಳ್ಳುತ್ತಾರೆ. ಜೀವನದ ಸಮಸ್ತ ಭೌತಿಕ ಸುಖ ಅಂಥವರಿಗೆ ದೊರೆಯುತ್ತದೆ.

**1. ನಿಕೃಷ್ಟ ಕೈ (Elementary or Lowet type Hand)**

ಯಾರ ಮಾನಸಿಕ ವಿಕಾಸ ಅಥವಾ ಬುದ್ಧಿ ಲಬ್ಧಿ ನ್ಯೂನತಮವಾಗಿರುತ್ತದೋ ಅಂಥಹ ವ್ಯಕ್ತಿಗಳಿಗೆ ಈ ರೀತಿಯ ಕೈ ಇರುತ್ತದೆ. ಮಾನವ ವಿಕಾಸದಲ್ಲಿ ಇಂಥವರು ಉಪಲಬ್ಧಿ ಶೂನ್ಯವಾಗಿರುತ್ತದೆ. ಒಟ್ಟಾರೆ ಇಂಥಹ ವ್ಯಕ್ತಿಗಳನ್ನು ಪಶುಪ್ರವೃತ್ತಿಯವರೆಂದು ಕರೆಯಬಹುದು. ಈ ಕೈ ಕುರೂಪದ್ದು, ಕಿರಿತ ಉಳ್ಳದ್ದು, ಅಭದ್ರವಾದುದ್ದು ಮತ್ತು ದಪ್ಪ ಚರ್ಮದ್ದಾಗಿರುತ್ತದೆ. ದಪ್ಪ



ಚಿಕ್ಕ ಕಠೋರ ಬೆರಳುಗಳು, ಹೆಬ್ಬೆರಳು ಚೆನ್ನಾಗಿ ಅಂಗೈಗೆ ಹೂತುಕೊಂಡಂತೆ ಇರುತ್ತದೆ. ರೇಖೆಗಳು ಅಭದ್ರ ಅಗಲ ಹಾಗೂ ಕುರೂಪವಾಗಿರುತ್ತವೆ. ಉಗುರು ಚಿಕ್ಕವಾಗಿಯೂ, ಹೆಬ್ಬೆರಳು ದಪ್ಪವಾಗಿಯೂ, ರೇಖೆಗಳು ಬಹಳ -

ಕಡಿಮೆಯಾಗಿಯೂ ಇರುತ್ತವೆ.

ತಾಮಸ ಪ್ರವೃತ್ತಿಯ ಈ ಜನಗಳ ಸ್ವಭಾವ ಅಸಭ್ಯತೆಯಿಂದ, ಅಭದ್ರತೆಯಿಂದ, ಜಡತೆಯಿಂದ, ಮೂರ್ಖತೆಯಿಂದ, ಅಸಂಸ್ಕೃತರಂತೆ ಕೂಡಿರುವುದಾಗಿರುತ್ತದೆ ಹಾಗೂ ಅನುಶಾಸನರಹಿತವಾಗಿರುತ್ತದೆ. ಇವರು ವಿಚಾರ ಮತ್ತು ತರ್ಕಶಕ್ತಿ ಇಲ್ಲದವರಾಗಿರುತ್ತಾರೆ. ಭೋಜನ, ಭೋಗ ಮತ್ತು ಕಾಮವಾಂಛೆಯಲ್ಲಿ ಯಾವಾಗಲೂ ಲಿಪ್ತರಾಗಿರುತ್ತಾರೆ. ಅಂಜುಬುರುಕರು, ಹೇಡಿಗಳು, ಸೋಮಾರಿಗಳು ಮತ್ತು ಕೆಲಸ ಮಾಡದವರೂ ಇವರಾಗಿರುತ್ತಾರೆ. ಇವರು ಪ್ರಾಯಃ ಶಾರೀರಿಕ ಶ್ರಮವನ್ನು ಮಾಡಬಲ್ಲರು. ಆದರೆ ಮಾನಸಿಕ ಶ್ರಮವನ್ನು ಎಂದೂ ಮಾಡಲಾರರು. ಮಹತ್ವಾಕಾಂಕ್ಷೆಯ ಭಾವನೆ ಇವರಲ್ಲಿ ಎಳ್ಳಷ್ಟೂ ಇರುವುದಿಲ್ಲ. ಸಾಮಾಜಿಕ, ಆರ್ಥಿಕ, ರಾಜನೈತಿಕ, ಶಾಸಕೀಯ, ಸಾಂಸ್ಕೃತಿಕ ಗತಿ ವಿಧಿಗಳು ಇವರಲ್ಲಿ ಇರುವುದಿಲ್ಲ. ಸಾಧಾರಣ ದಿನಚರ್ಯೆ ಮತ್ತು ನಿದ್ರೆ ಮಾಡುವುದರಲ್ಲಿ ಇವರಿಗೆ ಹೆಚ್ಚು ಆನಂದ ಉಂಟಾಗುತ್ತದೆ. ಇವರು ಶಾರೀರಿಕ ಶ್ರಮದ ಕೆಲಸವನ್ನು ಮಾಡಿಯೇ ತಮ್ಮ ಜೀವನ ನಡೆಸುತ್ತಾರೆ.



ಇವರು ತಮ್ಮ ಭಾವನೆಗಳ ಮೇಲೂ ನಿಯಂತ್ರಣ ಇಟ್ಟುಕೊಳ್ಳಲಾರರು. ಇವರು ರೂಪ ಬಣ್ಣದ ಸೌಂದರ್ಯ ಪ್ರೇಮಿಗಳಾಗಿರುತ್ತಾರೆ.

ಇವರು ಕ್ಷಣಕಾಲ ಕೋಪಿಷ್ಠರಾಗಿಯೂ ಕ್ಷಣಕಾಲ ಸಂತುಷ್ಟರಾಗಿಯೂ ಇರುತ್ತಾರೆ. ಇವರು ಸಾಹಸಿಗಳು, ಆದರ್ಶಹೀನರು, ಸಿದ್ಧಾಂತ ಹೀನರು ಆಗಿರುತ್ತಾರೆ. ಇವರು ಉತ್ತೇಜನೆಗೆ ಒಳಗಾಗಿ ಒಳ್ಳೆಯದು-ಕೆಟ್ಟದು ಆಡುತ್ತಾರೆ. ಇವರಿಗೆ ತಮ್ಮವರು, ಪರರು ಎಂಬುದರ ಗಮನವಿರುವುದಿಲ್ಲ. ಇಂಥಹ ವ್ಯಕ್ತಿಗಳ ಅಂಗೈ ಎಷ್ಟು ಅಧಿಕ ಅಗಲ ಹಾಗೂ ಭಾರವಾಗಿರುತ್ತದೋ ಪಶುಪ್ರವೃತ್ತಿ ಅಷ್ಟೇ ಅಧಿಕವಾಗಿರುತ್ತದೆ.

ಇಂಥಹ ವ್ಯಕ್ತಿಗಳ ಕೈನಲ್ಲಿ ಹೆಬ್ಬೆರಳಿನ ಮೊದಲನೇ ಪರ್ವ ದಪ್ಪದಾಗಿ, ಭಾರಿಯಾಗಿ ಮತ್ತು ಚೌಕಾಕಾರವಾಗಿರುತ್ತದೆ. ಆಕಾರದಲ್ಲಿಯೂ ಸಹ ಹೆಬ್ಬೆರಳು ಚಿಕ್ಕದಾಗಿ ಮತ್ತು ಬಹಳವಾಗಿ ದಪ್ಪವಾಗಿ ಇರುತ್ತದೆ. ಇವರನ್ನು ಪುಸಲಾಯಿಸಿ ಶೀಘ್ರವೇ ಮೂರ್ಖರನ್ನಾಗಿಸಬಹುದು. ಉತ್ತೇಜಿತಗೊಳಿಸಿ ಇವರಿಂದ ಎಂಥಹದೇ ಕೆಟ್ಟ ಕಾರ್ಯವನ್ನು ಮಾಡಿಸಬಹುದು. ಇಂಥಹ ವ್ಯಕ್ತಿಗಳು ಬಹುಶಃ ಕೂಲಿಗಳಾಗಿ, ನಾವಿಕರಾಗಿ, ಸೈನಿಕರಾಗಿ, ಶ್ರಮಿಕರಾಗಿ, ಅಪರಾಧಿ ವೃತ್ತಿ ಮಾಡುವವರಾಗಿರುತ್ತಾರೆ.

## 2. ವರ್ಗಾಕಾರ ಅಥವಾ ಸಮಕೋಣ ಕೈ (Square or Useful Hand)

ಇಂಥಹ ಕೈಗಳ ರಚನೆ ಚೌಕಾಕಾರವಾಗಿರುತ್ತದೆ. ಬೆರಳುಗಳು ಚಿಕ್ಕವಾಗಿಯೂ ಮತ್ತು ಮೇಲಿನಿಂದ ಚೌಕಾಕಾರವಾಗಿರುತ್ತದೆ. ಅಂಗೈ ಪ್ರಾಯಃ ಗುಲಾಬಿ ಬಣ್ಣದ್ದು ಮತ್ತು ಅಂಗೈನ ಉದ್ದ ಮತ್ತು ಅಗಲ ಸಮಾನವಾಗಿರುತ್ತದೆ. ಮಣಿಕಟ್ಟಿನಲ್ಲಿ ಸಂದು ಮತ್ತು ಬೆರಳುಗಳ ತುದಿ ಎರಡು ಸಮಾನಾಂತರ ತಳಗಳ ರೂಪದಲ್ಲಿ ಮತ್ತು ಅಂಗೈನ ಉಳಿದ ಎರಡು ಭಾಗ ಅದರ ಪಕ್ಕದ ಸಮಾನಾಂತರ ತಳದಲ್ಲಿ ಇರುತ್ತದೆ. ಬೆರಳುಗಳು ಹೆಚ್ಚು ಉದ್ದವಾಗಿರುವುದಿಲ್ಲ ಮತ್ತು ಅವಿಕಸಿತವಾಗಿಯೂ ಇರುವುದಿಲ್ಲ ಹಾಗೂ ಹೆಚ್ಚು ಚಿಕ್ಕದಾಗಿಯೂ ಹೆಚ್ಚು ದಪ್ಪದಾಗಿಯೂ ಅಧಿಕ ತೆಳುವಾಗಿಯೂ ಇರುವುದಿಲ್ಲ. ಹೆಬ್ಬೆರಳು ಸಹ ಪ್ರಾಯಃ ಉದ್ದವಾಗಿ ಮತ್ತು ಸದೃಢವಾಗಿ ಹಾಗೂ ಅಂಗೈ ಮೇಲೆ ಸ್ವಲ್ಪ ಮೇಲ್ಭಾಗದ ಕಡೆಗೆ ಸ್ಥಿತವಾಗಿರುತ್ತವೆ ಮತ್ತು ಅಂಗೈನ ಹೊರಭಾಗದ ಕಡೆಗೆ ಹೊರಟಿರುವಂತೆ ಕಾಣುತ್ತದೆ. ಉಗುರುಗಳು ಚಿಕ್ಕವಾಗಿರುತ್ತವೆ.

ವರ್ಗಾಕಾರ ಕೈನ ವ್ಯಕ್ತಿಗಳು ಪೂರ್ಣವಾಗಿ ವ್ಯಾವಹಾರಿಕಸ್ತರು ಮತ್ತು ಭೌತಿಕತಾವಾದಿಗಳೂ ಆಗಿರುತ್ತಾರೆ. ಆದರ್ಶದ ನೆಪವನ್ನು ಇವರು

ರಚಿಸುವುದಿಲ್ಲ. ವ್ಯರ್ಥ ಕಲ್ಪನೆಯ ಹಾರಾಟವನ್ನು ಮಾಡುವುದಿಲ್ಲ. ತರ್ಕ, ನ್ಯಾಯ ಮತ್ತು ಪ್ರಮಾಣದ ಹೊರತು ಒಂದು ಹೆಜ್ಜೆಯನ್ನು ಮುಂದಿಡುವುದಿಲ್ಲ. ಉಜ್ವಲ ಮಸ್ತಿಷ್ಕದ ಶ್ರೀಮಂತರೂ ಮತ್ತು ಪ್ರಶಾಸಕೀಯ ಕಾರ್ಯಗಳಲ್ಲಿ ಒಳ್ಳೆಯ ಸಫಲತೆಯನ್ನು ಪಡೆಯುತ್ತಾರೆ.

ಇವರು ಸ್ವಭಾವದಿಂದ ಸ್ವಲ್ಪ ಒರಟು ಮತ್ತು ಜನಗಳೊಂದಿಗೆ ಹೆಚ್ಚಾಗಿ ಬೆರೆಯಲು ಇಷ್ಟಪಡದವರೂ ಆಗಿರುತ್ತಾರೆ. ಉಚಿತ ರೀತಿ ನೀತಿಯಿಂದ, ಅನುಶಾಸಿತ ರೀತಿಯಿಂದ ಕಾರ್ಯ ನಿರ್ವಹಿಸಲು ಇವರು ಇಷ್ಟಪಡುತ್ತಾರೆ. ಹೊಣೆಗಾರಿಕೆಯ ನಿರ್ವಹಣೆಯನ್ನು ಶೋಭಾಯಮಾನ ರೀತಿಯಲ್ಲಿ ಇವರು ಮಾಡುತ್ತಾರೆ. ಕರ್ತವ್ಯದ ಪ್ರತಿ ಜಾಗರೂಕತೆಯಿಂದ, ಎಚ್ಚರದಿಂದ ಮತ್ತು ನಿಷ್ಠಾವಂತರಾಗಿರುತ್ತಾರೆ. ಇವರು ಸ್ವತಂತ್ರತಾ ಪ್ರೇಮಿಗಳು ಪ್ರಬಲ ಮನೋಬಲ ಮತ್ತು ಇಚ್ಛಾಶಕ್ತಿಯುಕ್ತ ದೃಢ ವಿವೇಕಿಗಳು, ನ್ಯಾಯಪ್ರೇಮಿಗಳು, ಕಷ್ಟಕಾರ್ಪಣ್ಯಗಳನ್ನು ಸಹಿಸಿ ಕೊನೆಗೆ ತಮ್ಮ ಗುರಿಯನ್ನು ತಲುಪೇ ತಲುಪುತ್ತಾರೆ. ಪ್ರತಿಯೊಂದು ಕಾರ್ಯವನ್ನು ಸರಿಯಾದ ರೀತಿಯಲ್ಲಿ ಮತ್ತು ಸರಿಯಾದ ಸಮಯದಲ್ಲಿ ಮಾಡುತ್ತಾರೆ.

ಇವರು ತಮ್ಮ ಮೇಲು ಅಧಿಕಾರಿಗಳಿಗೆ ಗೌರವ ಕೊಡುತ್ತಾರೆ. ತಮ್ಮ ಕೆಳಗಿನ ಕೆಲಸಗಾರರು ಸಹ ತಮಗೆ ಗೌರವ ನೀಡಬೇಕೆಂದು ಇವರು ಇಚ್ಛಿಸುತ್ತಾರೆ. ಒಟ್ಟಿನಲ್ಲಿ ಇವರಿಗೆ ಗೌರವದ ಆಕಾಂಕ್ಷೆ ಅಧಿಕವಾಗಿರುತ್ತದೆ. ಕಾನೂನಿನ ಕ್ಷೇತ್ರದಲ್ಲಿ ಇಂಥಹ ವ್ಯಕ್ತಿಗಳು ಹೆಚ್ಚಾಗಿ ದೊರೆಯುತ್ತಾರೆ. ಪ್ರಾಚೀನ ವ್ಯವಸ್ಥೆಯ ಪಕ್ಷಪಾತಿಗಳು, ತರ್ಕದ ಮೇಲೆ ಜಗಳವಾಡುವವರಲ್ಲ ಅಥವಾ ವಿವಾದಿಗಳೂ ಇವರಲ್ಲ. ಇವರು ಹಠ ಸ್ವಭಾವದವರಲ್ಲ. ಆದರೆ ಕಾವ್ಯ ಅಥವಾ ಕಲೆಯ ಬಗ್ಗೆ ಇವರಿಗೆ ಆಸಕ್ತಿ ಇಲ್ಲ. ಇವರು ವ್ಯಾವಹಾರಿಕ ಕಾರ್ಯಗಳಲ್ಲಿ ಅಧಿಕ ಸಫಲತೆಯನ್ನು ಪಡೆಯುತ್ತಾರೆ. ಇವರಲ್ಲಿ ಮೌಲಿಕತೆಯ ಅಭಾವವಿದ್ದರೂ ಸಹ ಹಣಕಾಸನ್ನು ಸಂಪಾದಿಸುವ ಕಾರ್ಯವನ್ನು ಬಹಳ ಸರಳವಾಗಿ ಮಾಡುತ್ತಾರೆ. ಮನೆ, ಪರಿವಾರ ಅಥವಾ ಕುಟುಂಬಕ್ಕಾಗಿ ಇವರು ಏನನ್ನು ಬೇಕಾದರೂ ಮಾಡಲು ಸಿದ್ಧರಾಗಿರುತ್ತಾರೆ. ಚಾರಿತ್ರಿಕ ರೂಪದಲ್ಲಿ ದೃಢರು ಮತ್ತು ಪ್ರಾಮಾಣಿಕರು ಇವರಾಗಿರುತ್ತಾರೆ. ಇವರು ಕೊಟ್ಟ ಮಾತಿಗೆ ತಪ್ಪುವರಲ್ಲ. ಇವರು ಒಳ್ಳೆಯ ಅಥವಾ ನಿಜವಾದ ಮಿತ್ರರೆನಿಸಿಕೊಳ್ಳುತ್ತಾರೆ. ಇಂಥಹ ವ್ಯಕ್ತಿಗಳು ರಜೋಗುಣ ಪ್ರಧಾನರಾಗಿರುತ್ತಾರೆ. ಪರಿಶ್ರಮ ಮತ್ತು ದೃಢತೆಯಲ್ಲಿ ಇವರ ಸಫಲತೆಯ ರಹಸ್ಯ ಅಡಗಿಕೊಂಡಿರುವುದು.

ಇವರು ಯಾವುದೇ ಕೆಲಸ ಮಾಡುವುದಕ್ಕೆ ಮುಂಚೆ ಸೋಲು–ಗೆಲುವು, ಕೀರ್ತಿ–ಅಪಕೀರ್ತಿ, ನಷ್ಟ–ಲಾಭ, ಸುಖ–ದುಃಖ, ತಮ್ಮವರು–ಬೇರೆಯವರು ಎಂಬುದರ ಬಗ್ಗೆ ಚೆನ್ನಾಗಿ ಯೋಚಿಸಿ ನಿರ್ಣಯ ತೆಗೆದುಕೊಳ್ಳುತ್ತಾರೆ. ಇವರು ಧಾರ್ಮಿಕರು, ವ್ಯಾವಸಾಯಿಕರು, ಸ್ವಾರ್ಥಿ ಧನರಕ್ಷಕರು, ಕಾರ್ಯದಕ್ಷತೆಯುಳ್ಳವರು, ಬುದ್ಧಿವಂತರು, ದೃಢತೆಯುಳ್ಳವರು, ಸಮಯವನ್ನು ಗುರುತಿಸಿ ಕೆಲಸ ಮಾಡುವವರು ಮತ್ತು ದೃಢಮತಾವಲಂಬಿಗಳು ಆಗಿರುತ್ತಾರೆ. ಧೈರ್ಯವೇ ಇವರ ಬಲವಾಗಿರುತ್ತದೆ. ಎಲ್ಲದರಲ್ಲಿಯೂ ನಿರಭಿಮಾನಿಗಳಾಗಿದ್ದು ಗೆಲುವು ಪಡೆಯುತ್ತಾರೆ. ಇವರಿಗೆ ಪ್ರದರ್ಶನ ಮಾಡುವುದರ ಬಗ್ಗೆ ಅಸಹ್ಯವಿರುತ್ತದೆ.

ಇಂಥಹ ಕೈ ಪುರೋಹಿತರು, ವಕೀಲರು, ಡಾಕ್ಟರ್‌ಗಳು, ಇಂಜನಿಯರ್‌ಗಳು, ನ್ಯಾಯಾಧೀಶರು ಮತ್ತು ವೈಜ್ಞಾನಿಕರು ಮುಂತಾದವರಲ್ಲಿ ಕಾಣಬಹುದು. ಗಡಸು ಅಂಗೈ ಹೆಚ್ಚಾಗಿ ಸಫಲತೆಯ ಪರಿಚಯ ನೀಡುತ್ತದೆ. ಯಾವುದೇ ಕಾರ್ಯವನ್ನಾದರೂ ಸಹ ಇಂಥವರು ಬಹಳ ಆಳವಾಗಿ ಪರೀಕ್ಷಿಸಿಯೇ ಮುಂದುವರೆಯುತ್ತಾರೆ. ಇವರು ತಮ್ಮ ಸಿದ್ಧಾಂತಗಳಲ್ಲಿ ದೃಢರು ಮತ್ತು ಅದರ ಪಾಲನೆ ಮಾಡುವುದರಲ್ಲಿ ದಯೆ, ಪ್ರೀತಿ, ಅಹಿಂಸೆ, ಶಾಂತಿಯ ಬಗ್ಗೆ ಮಹತ್ವ ನೀಡುವವರೂ ಆಗಿರುತ್ತಾರೆ. ಅತಿ ಪ್ರಶಂಸೆ, ದೈನ್ಯತೆ, ಸುಳ್ಳು ಪ್ರಶಂಸೆ ಇವರಿಗೆ ಹಿಡಿಸುವುದಿಲ್ಲ. ಕೋಪ ಮಾಡಿಕೊಂಡ ನಂತರ ಇವರು ಪಶ್ಚಾತ್ತಾಪಪಟ್ಟುಕೊಳ್ಳುತ್ತಾರೆ ಮತ್ತು ಕ್ಷಮೆ ಕೇಳುವುದಕ್ಕೂ ಹಿಂಜರಿಯುವುದಿಲ್ಲ.

ಬೆರಳುಗಳ ಆಧಾರದ ಮೇಲೆ ವಿದ್ವಾಂಸರು ವರ್ಗಾಕಾರ ಕೈಯನ್ನು ಸಹ ಏಳು ಭಾಗವಾಗಿ ವಿಂಗಡಿಸಿದ್ದಾರೆ.

i. **ಚಿಕ್ಕ ವರ್ಗಾಕಾರದ ಬೆರಳುಗಳು**
ii. **ಉದ್ದ ವರ್ಗಾಕಾರದ ಬೆರಳುಗಳು**
iii. **ಗಂಟುಳ್ಳ ಬೆರಳುಗಳು**
iv. **ಮುಂಭಾಗದ ಕಡೆಗೆ ಹರಡಿಕೊಂಡಿರುವ ಬೆರಳುಗಳು**
v. **ಮುಂಭಾಗದ ಕಡೆಗೆ ಚೂಪಾದ ಬೆರಳುಗಳು**
vi. **ಹೆಚ್ಚು ಚೂಪಾದ ಬೆರಳುಗಳು**
vii. **ವಿಭಿನ್ನ ಆಕಾರ ಪ್ರಕಾರದ ಬೆರಳುಗಳು**

i. **ಚಿಕ್ಕ ವರ್ಗಾಕಾರದ ಬೆರಳುಗಳು:** ಇಂಥಹ ಕೈನಲ್ಲಿ ಅಂಗೈ ಮತ್ತು

ಬೆರಳುಗಳ ಆಕೃತಿಗಳು ವರ್ಗಾಕಾರವಾಗಿರುತ್ತದೆ. ಇಂಥಹ ವ್ಯಕ್ತಿಗಳು ಎಲ್ಲಾ ಪ್ರಕಾರದಿಂದ ವ್ಯಾವಹಾರಿಕರು, ಹಣ ಸಂಪಾದಿಸುವುದರಲ್ಲಿ ಬುದ್ಧಿವಂತರು, ವ್ಯಾಪಾರಸ್ಥರು, ಕಡಿಮೆ ಹಠದವರು, ಕಡಿಮೆ ಉದಾರಿಗಳು, ಭೌತಿಕವಾದಿಗಳು, ಹಣ ಗಳಿಸುವುದರಲ್ಲಿ ಮತ್ತು ಕೂಡಿಸುವುದರಲ್ಲಿ ಪ್ರವೀಣರು ಮತ್ತು ಜಿಪುಣರೂ ಆಗಿರುತ್ತಾರೆ.

ii **ಉದ್ದ ವರ್ಗಾಕಾರದ ಬೆರಳುಗಳು:** ಇಂತಹ ಜನಗಳಲ್ಲಿ ಉದಾರತೆ ಮತ್ತು ಮಾನಸಿಕ ಶಾಂತಿ ಹೆಚ್ಚಾಗಿ ಕಾಣಬಹುದು. ಇಂತಹ ಕೈ ಉಳ್ಳ ಜನರು ತಾರ್ಕಿಕರು, ಕರ್ತವ್ಯನಿಷ್ಠರು, ಜಾಗರೂಕತೆ ಉಳ್ಳವರು, ಪ್ರತಿಯೊಂದು ಕಾರ್ಯವನ್ನು ಚೆನ್ನಾಗಿ ಯೋಚಿಸಿ ಮಾಡುವಂಥವರು, ಅವಿಶ್ವಾಸಿಗಳು ಮತ್ತು ಸಂದೇಹಶೀಲರೂ ಆಗಿರುತ್ತಾರೆ. ವೈಜ್ಞಾನಿಕ ಮತ್ತು ಯೋಜನಬದ್ಧ ಕಾರ್ಯ ಇದೇ ಕ್ಷೇತ್ರದಲ್ಲಿ ಬರುತ್ತದೆ.

iii. **ಗಂಟುಳ್ಳ ಬೆರಳುಗಳು:** ಈ ಪ್ರಕಾರದ ಕೈನಲ್ಲಿ ಅಂಗೈ ವರ್ಗಾಕಾರವಾಗಿರುತ್ತದೆ ಮತ್ತು ಬೆರಳುಗಳು ಸ್ವಲ್ಪ ಉದ್ದವಾಗಿಯೂ ಮತ್ತು ಗಂಟುಳ್ಳದ್ದಾಗಿಯೂ ಇರುತ್ತದೆ ಅರ್ಥಾತ್ ಬೆರಳುಗಳ ಗಂಟು ಅಧಿಕ ಮೇಲೆದ್ದಿರುತ್ತದೆ. ಇಂಥಹ ಕೈ ಉಳ್ಳ ವ್ಯಕ್ತಿಗಳು ಸೂಕ್ಷ್ಮದೃಷ್ಟಿಗಳು, ಪ್ರತಿಯೊಂದು ವಿಷಯದ ಆಳಕ್ಕೆ ತಲುಪುವ ಗಣಕ ಯಂತ್ರಗಳು, ಯಂತ್ರ ಕಾರ್ಖಾನೆಗಳನ್ನು ಸ್ಥಾಪಿಸುವುದರಲ್ಲಿ ಕುಶಲರು, ನಿರ್ಮಾಣ ಕಾರ್ಯದಲ್ಲಿ ಸಿದ್ಧಹಸ್ತರು ಮತ್ತು ವ್ಯಕ್ತಿಗತ ರೂಪದಿಂದ ಗಮನ ನೀಡುವ ಇವರು ಪ್ರತಿಯೊಂದು ಕಾರ್ಯದಲ್ಲಿಯೂ ಸಫಲತೆಯನ್ನು ಪಡೆಯುತ್ತಾರೆ.

iv. **ಮುಂಭಾಗದ ಕಡೆಗೆ ಹರಡಿಕೊಂಡಿರುವ ಬೆರಳುಗಳು:** ಈ ರೀತಿಯ ಕೈ ಉಳ್ಳ ಮನುಷ್ಯರು ಸಂಶೋಧಕರು, ಬುದ್ಧಿಸಂಪನ್ನರು, ಮದಬರುವ ವಸ್ತು ಸೇವಿಸುವವರು, ವ್ಯಾವಹಾರಿಕರು, ಯಂತ್ರಕಾರ್ಯದಲ್ಲಿ ದಕ್ಷರು, ಮನೆ ಕೆಲಸಕ್ಕೆ ಬರುವ ವಸ್ತುಗಳ ಆವಿಷ್ಕಾರಕರು ಮತ್ತು ನಿರ್ಮಾಣ ಹಾಗೂ ಉದ್ಯಮದಲ್ಲಿ ಸಫಲರು ಮತ್ತು ವ್ಯಾವಸಾಯಿಕ ಕಾರ್ಯಗಳಲ್ಲಿ ಹೆಚ್ಚು ಸಫಲರೂ ಆಗಿರುತ್ತಾರೆ.

v. **ಮುಂಭಾಗದ ಕಡೆಗೆ ಚೂಪಾದ ಬೆರಳುಗಳು:** ಇಂತಹ ವ್ಯಕ್ತಿಗಳು ಕಲಾಪ್ರೇಮಿಗಳು, ಸಂಗೀತಗಾರರು, ಸಾಹಿತ್ಯಕಾರರು ಆಗಿರುತ್ತಾರೆ.

ಆದರೆ ಸಾಹಿತ್ಯ ಮತ್ತು ಕಲೆಯಲ್ಲಿ ಹಣ ಸಂಪಾದಿಸಲು ಇವರಿಂದ ಸಾಧ್ಯವಾಗುವುದಿಲ್ಲ. ಇವರಲ್ಲಿ ಕಲಾತ್ಮಕ ಯೋಗ್ಯತೆ ಇದ್ದರೂ ಸಹ ಹೊಟ್ಟೆಪಾಡಿಗಾಗಿ ಬೇರೊಂದು ಉದ್ಯೋಗ ಅಥವಾ ಕೆಲಸಕ್ಕೆ ಮೊರೆಹೋಗುತ್ತಾರೆ. ಇವರು ಕಲಾಕಾರರಾಗಿದ್ದರೂ ಸಹ ವ್ಯಾವಹಾರಿಕರಾಗಿರುತ್ತಾರೆ.

vi. **ಹೆಚ್ಚು ಚೂಪಾದ ಬೆರಳುಗಳು:** ಇಂತಹ ಕೈಗಳು ಪ್ರಾಯಃ ಬಹಳ ಕಡಿಮೆ ಕಾಣಲು ಸಿಗುತ್ತದೆ. ಆದರೆ ಇಂತಹ ಕೈ ಉಳ್ಳ ವ್ಯಕ್ತಿಗಳು ಯಾವುದೇ ಕಾರ್ಯ ಅಥವಾ ಉದ್ಯೋಗವನ್ನು ಕೊನೆಯವರೆಗೂ ನಿರ್ವಹಿಸುವುದರಲ್ಲಿ ಅಸಮರ್ಥರಾಗಿರುತ್ತಾರೆ. ಇವರು ತಮ್ಮ ಉದ್ಯೋಗ ಮತ್ತು ಕಲೆಯ ಸಂಬಂಧದ ಕಾರ್ಯವನ್ನು ಬಹಳ ಹುರುಪಿನಿಂದ ಆರಂಭಿಸುತ್ತಾರೆ ಆದರೆ ಮಧ್ಯದಲ್ಲಿ ಸ್ವಲ್ಪ ತೊಂದರೆ ಬಂದರೂ ಸಹ ಉತ್ಸಾಹಭಂಗರಾಗಿ ಅಪೂರ್ಣವಾಗಿ ಬಿಟ್ಟು ನಿರಾಶರಾಗಿ ಕುಳಿತುಕೊಳ್ಳುತ್ತಾರೆ. ಆದ್ದರಿಂದ ಕಲೆ ಅಥವಾ ಉದ್ಯಮದ ಯಾವುದೇ ಕ್ಷೇತ್ರದಲ್ಲಿಯೂ ಇವರು ಪೂರ್ಣ ಸಫಲರಾಗುವುದಿಲ್ಲ.

vii. **ವಿಭಿನ್ನ ಆಕಾರ ಪ್ರಕಾರದ ಬೆರಳುಗಳು**

ಯಾವುದಾದರೂ ಬೆರಳು ಚತುಷ್ಕೋಣವಾಗಿದ್ದರೆ ಮತ್ತೊಂದು



ಬೆರಳು ಚೂಪಾದುದಾಗಿರುತ್ತದೆ. ಯಾವುದಾದರೂ ಬೆರಳು ಮುಂಭಾಗದ ಕಡೆಗೆ ಹರಡಿಕೊಂಡಿದ್ದರೆ ಮತ್ತ್ಯಾವುದಾದರೂ ಬೆರಳು

ಮೊನೆಯುಳ್ಳದ್ದಾಗಿರುತ್ತದೆ ಮತ್ತು ಹೆಬ್ಬೆರಳು ಪ್ರಾಯಃ ಬಳುಕುವಂತಿರುತ್ತದೆ ಹಾಗೂ. ಮಧ್ಯಭಾಗದಿಂದ ಹಿಂಬದಿಯ ಕಡೆಗೆ ತಿರುಗಿಸುವಂಥಾಗಿರುತ್ತದೆ. ಬೆರಳುಗಳಲ್ಲಿ ತೋರುಬೆರಳು ಮತ್ತು ಕಿರುಬೆರಳು ಚೂಪಾಗಿದ್ದು ಮಧ್ಯದ ಬೆರಳು ಹಾಗೂ ಉಂಗುರದ ಬೆರಳು ಮುಂಭಾಗದ ಕಡೆಗೆ ಹರಡಿಕೊಂಡಿರುತ್ತದೆ. ಇಂಥಹ ಕೈಯುಳ್ಳ ವ್ಯಕ್ತಿಗಳು ಸಾಹಿತ್ಯ, ಕಲೆ, ವಿಜ್ಞಾನ, ವ್ಯವಸಾಯ ಮುಂತಾದ ಎಲ್ಲಾ ಕಾರ್ಯಗಳನ್ನು ಬಹಳ ಅಚ್ಚುಕಟ್ಟಾಗಿ ನಿರ್ವಹಿಸುತ್ತಾರೆ. ಯೋಗ್ಯತೆಯ ಗಣಿಗಳು ಮತ್ತು ಭಿನ್ನ ಭಿನ್ನ ಕಾರ್ಯವನ್ನು ಮಾಡುವಂಥವರಾಗಿರುತ್ತಾರೆ. ಇವರು ಬಾರಿ ಬಾರಿಗೂ ತಮ್ಮ ಉದ್ಯಮವನ್ನು ಬದಲಿಸುತ್ತಿರುತ್ತಾರೆ.

### 3. ಚಮಚಾಕಾರ ಅಥವಾ ಕರ್ಮಠ ಕೈ (Spatulate or Active Nervous Type Hand)

ಈ ಪ್ರಕಾರದ ಕೈನಲ್ಲಿ ಬೆರಳುಗಳಲ್ಲಿ ತುದಿಭಾಗ ಔಷಧಿ ಬೆರೆಸುವ ಚಮಚದ ರೀತಿ ಮುಂದಿನಿಂದ ಹರಡಿಕೊಂಡಿರುತ್ತದೆ ಮತ್ತು ಅಂಗೈ ಸಹ ಹರಡಿಕೊಂಡಿರುವಂತೆ ಕಾಣಿಸುತ್ತದೆ. ಈ ಕೈ ನೋಡಲು ಅಸ್ತವ್ಯಸ್ತ ಮತ್ತು ಕುರೂಪವಾಗಿರುತ್ತದೆ. ಅಂಗೈನ ಗಾದಿ ಮಾಂಸಯುಕ್ತವಾಗಿರುತ್ತದೆ. ವರ್ಗಾಕಾರದ ಕೈ ಮತ್ತು ಚಮಚಾಕಾರದ ಕೈನಲ್ಲಿ ಬೆರಳುಗಳ ರಚನೆಯೇ ಮುಖ್ಯವಾದ ವ್ಯತ್ಯಾಸವಾಗಿರುತ್ತದೆ. ಇವು ಅಂಗೈ ಅಥವಾ ಮಣಿಕಟ್ಟಿನ ಸಮೀಪ ಅಗಲವಾಗಿಯೂ ಮತ್ತು ಮೇಲ್ಭಾಗದ ಕಡೆಗೆ ಸಂಕೀರ್ಣವಾಗಿರುತ್ತದೆ ಅಥವಾ ಇದರ ತದ್ವಿರುದ್ಧ ಬೆರಳುಗಳ ಜಡ ಅಗಲವಾಗಿಯೂ ಮತ್ತು ಮಣಿಕಟ್ಟಿನ ಹತ್ತಿರ ಸಂಕೀರ್ಣವಾಗಿರುತ್ತದೆ.

ಇಂಥಹ ಕೈಗಳಿಂದ ಸಂಪನ್ನ ಜನಗಳಲ್ಲಿ ಕಾರ್ಯದಕ್ಷತೆ ಮತ್ತು ಜೀವನ ಶಕ್ತಿ ಚೆನ್ನಾಗಿರುತ್ತದೆ. ಇಂತಹ ವ್ಯಕ್ತಿಗಳು ಉತ್ಸಾಹಿಗಳಾಗಿರುತ್ತಾರೆ. ಆದರೆ ತಕ್ಷಣವೇ ಕೋಪಗೊಳ್ಳುವಂಥವರಾಗಿರುತ್ತಾರೆ. ಇಂತಹ ವ್ಯಕ್ತಿಗಳು ಸದಾ ಕ್ರಿಯಾಶೀಲರಾಗಿರುತ್ತಾರೆ. ವಿಶ್ರಾಂತಿ ಪಡೆಯುವ ಇಚ್ಛೆ ಇವರಲ್ಲಿ ಇಲ್ಲವೆಂದೇ ಹೇಳಬಹುದು. ಇವರ ವಿಚಾರ ಪ್ರಗತಿಶೀಲವಾದುದಾಗಿರುತ್ತದೆ. ಮೌಲಿಕತೆ ಮತ್ತು ಅಪರಿಮಿತ ಕ್ಷಮಾಶೀಲತೆ ಇವರಲ್ಲಿ ಇರುತ್ತದೆ. ಇವರು ಸ್ವತಂತ್ರತಾ ಪ್ರಿಯರು ಆಗಿರುತ್ತಾರೆ. ತಮ್ಮ ಜೀವನದಲ್ಲಿ ಇವರು ಅನೇಕ ಮಹತ್ವಪೂರ್ಣ ಕಾರ್ಯಗಳನ್ನು ಮಾಡಿಹೋಗುತ್ತಾರೆ. ತಮ್ಮ ಸ್ವತಂತ್ರ ಪ್ರಕೃತಿಯ ಕಾರಣದಿಂದಾಗಿ ಇವರು ಸಮಾಜದಲ್ಲಿ ಹಠ ಸ್ವಭಾವದವರು,

ಉದಾರವಿಲ್ಲದವರು ಕುರುಡು ನಂಬಿಗೆಯುವರೆಂದು ಕರೆಯಲ್ಪಡುತ್ತಾರೆ. ಆದರೆ ವಾಸ್ತವಿಕತೆ ಇದರ ವಿರುದ್ಧವಾಗಿರುತ್ತದೆ. ಸ್ನೇಹಕ್ಕಾಗಿ ಇವರು ಏನು ಬೇಕಾದರೂ ಮಾಡಲು ಸಿದ್ಧರಾಗಿರುತ್ತಾರೆ. ಯಾವುದೇ ಕಾರ್ಯದ ಆರಂಭದಿಂದ ಮೊದಲ್ಗೊಂಡು ಅಂತ್ಯದವರೆಗೆ ಸ್ಥಿರವಾಗಿರುತ್ತಾರೆ ಮತ್ತು ಪರಿಣಾಮವನ್ನು ತಲುಪೇ ತಲುಪುತ್ತಾರೆ.

ಇವರಲ್ಲಿ ರಜೋಗುಣದ ಪ್ರಧಾನತೆ ಇರುತ್ತದೆ. ಇವರ ಮನಸ್ಸಿನಲ್ಲಿ ಉತ್ಸಾಹ, ಉತ್ತೇಜನ ಮತ್ತು ಹುರುಪು ಬಹಳಷ್ಟಿರುತ್ತದೆ. ಇವರು ತಮ್ಮ ಮನಸ್ಸನ್ನು ಸ್ಥಿರವಾಗಿ ಇಟ್ಟುಕೊಳ್ಳಲಾರರು. ಇದರ ವಿರುದ್ಧವಾಗಿ ಕೈ ಒಂದು ವೇಳೆ ಮೃದುವಾಗಿದ್ದರೆ ಮತ್ತು ಮಾಂಸದಲ್ಲಿ ಸಡಿಲತೆಯ ಜ್ಞಾತವಾದರೆ ಆ ಮನುಷ್ಯನ ಮನಸ್ಸಿನ ಅಸ್ಥಿರತೆ ಮತ್ತು ಶೀಘ್ರಕೋಪತನದ ಸೂಚನೆ ದೊರೆಯುತ್ತದೆ. ಈ ಜನಗಳು ಸತತ ಪರಿಶ್ರಮಿಗಳು, ಧೈರ್ಯಪ್ರವೃತ್ತಿಯವರೂ ತಂತ್ರಜ್ಞರೂ ಆಗಿರುತ್ತಾರೆ. ಇವರು ಕಾರ್ಯದ ಆರಂಭವನ್ನು ಬಹಳ ಹುರುಪಿನಿಂದ ಮಾಡುತ್ತಾರೆ ಆದರೂ ಸಹ ಆ ಕಾರ್ಯವನ್ನು ಅರ್ಧಕ್ಕೇ ಬಟ್ಟು ದೂರ ಸರಿದುಹೋಗುತ್ತಾರೆ. ಆದ್ದರಿಂದ ಕಾರ್ಯದಲ್ಲಿ ಅಸಫಲತೆ ಮಾತ್ರವೇ ದೊರಕುತ್ತದೆ.

ಇವರು ಅನ್ವೇಷಕ ಪ್ರವೃತ್ತಿಯವರಾಗಿರುತ್ತಾರೆ. ಸಮುದ್ರಯಾತ್ರೆ ಮತ್ತು ಸಾಹಸಿಕ ಕಾರ್ಯಗಳಲ್ಲಿ ಸಮಯ ಕಳೆಯುತ್ತಾರೆ. ಇವರು



ಯಾವಾಗಲೂ ಹೊಸದನ್ನು ಹುಡುಕುವುದರಲ್ಲಿ ತೊಡಗಿರುತ್ತಾರೆ. ಇವರು ಸ್ವತಂತ್ರತೆ ಹಾಗೂ ಮೌಲಿಕ ಪ್ರತಿಭೆಯನ್ನು ಎಂದೂ ಕಳೆದುಕೊಳ್ಳುವುದಿಲ್ಲ. ಇವರು ತಮ್ಮ ಜೀವನದಲ್ಲಿ ಏನಾದರೊಂದು ಕೆಲಸ

ಮಾಡುತ್ತಲೇ ಇರುತ್ತಾರೆ. ಅತ್ಯಂತ ಸಾಧಾರಣ ಶ್ರೇಣಿಯಲ್ಲಿ ಜನಿಸಿ ಇವರು ತಮ್ಮ ಪರಿಶ್ರಮದಿಂದ ತಮ್ಮ ಸ್ಥಿತಿಯನ್ನು ಸುಧಾರಿಸಿಕೊಳ್ಳುತ್ತಾರೆ. ಇವರಲ್ಲಿ ಕರ್ಮಠತೆಯೇ ಪ್ರಧಾನ ಗುಣವಾಗಿರುತ್ತದೆ. ಇದೇ ಗುಣದಿಂದಾಗಿ ಇವರು ಜೀವನದಲ್ಲಿ ಪ್ರಸಿದ್ಧಿ, ಗೌರವ ಮತ್ತು ಹಣವನ್ನು ಗಳಿಸುತ್ತಾರೆ.

**ಬೆರಳುಗಳ ಜಡದಲ್ಲಿ ಹರಡಿಕೊಂಡಿರುವ ಅಂಗೈ :**

ಇಂತಹ ವ್ಯಕ್ತಿಗಳು ಆವಿಷ್ಕಾರಕ ಪ್ರವೃತ್ತಿಯವರು, ಉಪಯೋಗಿ ಕಾರ್ಯವಾಹಕರು, ವ್ಯಾವಹಾರಿಕರೂ ಆಗಿರುತ್ತಾರೆ. ಇವರು ಜೀವನದಲ್ಲಿ ಸಫಲತೆಯನ್ನು ಪಡೆಯುತ್ತಾರೆ. ಸಾರ್ವಜನಿಕರ ಉಪಯೋಗಕ್ಕೆ ಬರುವಂಥಹ ಯಂತ್ರಗಳ ಆವಿಷ್ಕಾರವನ್ನು ಇವರು ಮಾಡುತ್ತಾರೆ. ರೈಲು, ಹಡಗು, ಮೋಟಾರು, ವಿಮಾನ, ರೇಡಿಯೋಗಳ ಪ್ರಯೋಗಾರ್ಥ ಯಂತ್ರ ನಿರ್ಮಾಣ ಮಾಡಿ ಧನ, ಕೀರ್ತಿ ಗಳಿಸುತ್ತಾರೆ.

**ಮಣಿಕಟ್ಟಿನ ಹತ್ತಿರ ಹರಡಿಕೊಂಡಿರುವ ಅಂಗೈ:** ಇಂತಹ ವಕ್ತಿಗಳು ತಮ್ಮ ಆವಿಷ್ಕಾರಕ ಬುದ್ಧಿಯ ಪ್ರಯೋಗವನ್ನು ಮಾನಸಿಕ ಮತ್ತು ವೈಚಾರಿಕ ಕ್ಷೇತ್ರಗಳಲ್ಲಿ ಹೆಚ್ಚು ಮಾಡುತ್ತಾರೆ. ನವೀನ ಸಾಹಿತ್ಯಿಕ ಅನುಸಂಧಾನವನ್ನು ಮಾಡುತ್ತಾರೆ. ಹೊಸ ಹೊಸ ವೈಜ್ಞಾನಿಕ ಸಂಶೋಧನೆಯನ್ನು ಮಾಡುತ್ತಾರೆ ಮತ್ತು ಈ ಪ್ರಕಾರದ ಆವಿಷ್ಕಾರಗಳಲ್ಲಿ ಹೆಚ್ಚು ಆಸಕ್ತಿಯನ್ನು ವಹಿಸುತ್ತಾರೆ. ಹೊಸ ಹೊಸ ಕಾರ್ಯಗಳನ್ನು ಮಾಡಿ ಸಂತೋಷದ ಅನುಭವ ಹೊಂದುತ್ತಾರೆ. ಆರ್ಥಿಕ ದೃಷ್ಟಿಯಿಂದ ಮತ್ತು ಕೀರ್ತಿಯ ದೃಷ್ಟಿಯಿಂದ ಇವರು ಹೆಚ್ಚು ಸಫಲತೆಯನ್ನು ಪಡೆಯುವುದಿಲ್ಲ.

**4. ದಾರ್ಶನಿಕ ಕೈ (Philosophic Hand)**

ಈ ಕೈ ಉದ್ದವಾಗಿಯೂ, ತೆಳುವಾಗಿಯೂ ಮತ್ತು ಊದಿರುವ ಗಂಟುಗಳ ಜೋಡಣೆಯಿಂದ ಕೂಡಿರುತ್ತದೆ ಮತ್ತು ಅಸ್ಥಿ ಪ್ರಧಾನವಾಗಿರುತ್ತದೆ. ಇವರು ಸತೋಗುಣ ಮತ್ತು ರಜೋಗುಣದಿಂದ ಮಿಶ್ರಿತವಾದ ಸ್ವಭಾವದವರಾಗಿರುತ್ತಾರೆ. ಬೆರಳುಗಳ ಜೋಡಣೆಯಲ್ಲಿ ಸ್ವಲ್ಪ ಗಂಟುಗಳಿರುತ್ತವೆ. ಉಗುರುಗಳು ಸಹ ಚೆನ್ನಾಗಿ ವಿಕಸಿತಗೊಂಡಿರುತ್ತವೆ. ಇಂತಹ ಜನಗಳ ಅಂಗೈ ಸ್ವಲ್ಪ ಉದ್ದವಾಗಿಯೂ ಮತ್ತು ಅದರ ಮೇಲೆ ರೇಖೆಗಳು ಸ್ವಲ್ಪ ಆಳವಾಗಿಯೂ ಇರುತ್ತವೆ. ಬೆರಳುಗಳ ಪೃಷ್ಠಭಾಗದಲ್ಲಿ ಮೂರನೇ ಪರ್ವತ ಪ್ರದೇಶದಲ್ಲಿ ಪ್ರಾಯಃ ಕೂದಲುಗಳಿರುತ್ತವೆ. ಬೆರಳುಗಳು ಸ್ವಲ್ಪ ಉದ್ದವಾಗಿರುವುದರ ಜೊತೆಗೆ ಸ್ವಲ್ಪ ವಕ್ರವಾಗಿಯೂ ಇರುತ್ತವೆ. ಹಾಗೂ ಕೈ ಒಂದು ಕಡೆಗೆ

ಬಾಗಿಕೊಂಡಿರುತ್ತದೆ.

ದಾರ್ಶನಿಕ ಕೈ ಉಳ್ಳವರ ಸ್ವಭಾವ ಬೇರೆ ಜನಗಳಿಗಿಂತ ಭಿನ್ನವಾಗಿರುತ್ತದೆ. ಈ ಜನಗಳು ಮೇಲ್ಮಟ್ಟದ ವಿಚಾರಕರು, ದಾರ್ಶನಿಕರು, ಜ್ಞಾನದಾಹ ಉಳ್ಳವರೂ ಆಗಿರುತ್ತಾರೆ. ಧನಾಗಮನದ ಬಗ್ಗೆ ಈ ಜನಗಳು



ಎಂದೂ ಲೆಕ್ಕಿಸುವುದಿಲ್ಲ. ತೊಂದರೆಗಳನ್ನು ಸಹಿಸಿಯೂ ಸಹ ತಮ್ಮ ವಿಚಾರ ಪ್ರಧಾನತೆಯ ಮತ್ತು ಬೌದ್ಧಿಕ ಅನ್ವೇಷಣೆಯ ಕಾರ್ಯದಲ್ಲಿ ತೊಡಗಿರುತ್ತಾರೆ. ರಹಸ್ಯವಾದವೂ ಸಹ ಇವರ ಜೀವನದಲ್ಲಿ ಪ್ರಾಮುಖ್ಯತೆಯನ್ನು ಪಡೆದಿರುತ್ತದೆ. ಅಂತರ್ಮುಖಿ ಪ್ರವೃತ್ತಿಯ ದ್ಯೋತಕರಾದ ಇವರು ಧೈರ್ಯವಂತರು, ಕಷ್ಟ ಸಹಿಷ್ಣುಗಳು, ಸಂವೇದನ ಶೀಲ ಭಾವುಕರು ಮತ್ತು ನೀತಿಜ್ಞರಾಗಿರುತ್ತಾರೆ. ಎಲ್ಲಾ ಕಾರ್ಯವನ್ನು ಚೆನ್ನಾಗಿ ಆಲೋಚಿಸಿಯೇ ಮಾಡುತ್ತಾರೆ.

ಇವರು ಮಿತಭಾಷಿಗಳು, ಮೃದುಭಾಷಿಗಳು, ಏಕಾಂತ ಪ್ರೇಮಿಗಳು, ಅಧ್ಯಯನಶೀಲ ವಿಶೇಷರು, ಪ್ರತಿ ಕ್ಷಣ ಜ್ಞಾನಗಂಗೆಯಲ್ಲಿ ಮುಳುಗೇಳುವರು. ಆಧ್ಯಾತ್ಮ ಚಿಂತನೆ, ಮನನ ಮಾಡುವ ಧರ್ಮಾತ್ಮರು, ಸಾಹಿತ್ಯಕಾರರು, ಕವಿಗಳು, ಪ್ರತಿಭಾಶಾಲಿಗಳು, ಸ್ವತಂತ್ರ ವಿಚಾರಕರು, ಸದ್ಗುಣಶಾಲಿಗಳು ಆಗಿರುತ್ತಾರೆ. ಬೇರೆಯವರ ಅಧಿಕಾರಕ್ಕೆ ಒಳಪಟ್ಟು ತಮ್ಮ ಜೀವನ ಸಾಗಿಸುವುದಿಲ್ಲ. ಹಠ ಮತ್ತು ಬಲವಂತದಿಂದ ಇವರಿಂದ ಯಾವುದೇ ಕಾರ್ಯವನ್ನು ಮಾಡಿಸಲಾಗುವುದಿಲ್ಲ.

ಯಾವುದೇ ವಿಷಯವನ್ನು ತಕ್ಷಣವೇ ನಂಬುವುದಿಲ್ಲ. ಯಾವುದೇ ವ್ಯಕ್ತಿಯ ಒಳ್ಳೆಯದಕ್ಕೆ, ಕೆಟ್ಟದಕ್ಕೆ ಯೋಚಿಸದೆ ಕೆಲಸ ಮಾಡುವಂಥವರಲ್ಲ.

ಅವಶ್ಯಕತೆಗಿಂತ ಹೆಚ್ಚು ವಾದ ವಿವಾದದಲ್ಲಿ ತೊಡಗಿ ತಮ್ಮ ಲಾಭದ ಸುವರ್ಣಾವಕಾಶವನ್ನು ಕಳೆದುಕೊಳ್ಳುತ್ತಾರೆ. ಸ್ನೇಹ ಮತ್ತು ಪ್ರೀತಿ ಸ್ಥಾಯೀ ರೂಪದಲ್ಲಿ ಇರುವುದಿಲ್ಲ. ಆದರೆ ಯಾವಾಗಲಾದರೂ ಮಿತ್ರರನ್ನು ಮಾಡಿಕೊಳ್ಳುವಾಗ ಆದರ್ಶಪ್ರೇರಿತರಾಗಿ ಮಾಡಿಕೊಳ್ಳುತ್ತಾರೆ. ಭಾವುಕತೆಯಲ್ಲಿ ಮುಳುಗಿ ಎಂಥಹ ದೊಡ್ಡ ತ್ಯಾಗವನ್ನು ಮಾಡಲೂ ಸಹ ಸಿದ್ಧರಾಗುತ್ತಾರೆ.

ಇವರು ಉಜ್ವಲ ಬುದ್ಧಿಯವರಾದರೂ ಸಹ ತಮಗಾಗಿ ಏನೊಂದೂ ಕೂಡಿಸಿಡಲಾರರು. ಉದಾರತೆ ಮತ್ತು ಪರೋಪಕಾರದ ಕಾರಣದಿಂದ ಖರ್ಚು ಮಾಡಲು ಸದಾ ಮುಂದಿರುತ್ತಾರೆ.

ಇವರು ಪ್ರತ್ಯಕ್ಷ, ಪ್ರಮಾಣ ಮತ್ತು ತರ್ಕಸಿದ್ಧ ಮಾತನ್ನು ಒಪ್ಪಿಕೊಳ್ಳುವಂಥವರಾಗಿರುತ್ತಾರೆ. ಪ್ರತ್ಯಕ್ಷ ಪ್ರಮಾಣದ ಅಭಾವದಿಂದಾಗಿ ಶಾಸ್ತ್ರಗಳನ್ನೂ ಸಹ ಇವರು ನಂಬುವುದಿಲ್ಲ. ವ್ಯರ್ಥವಾಗಿ ಕುಳಿತುಕೊಳ್ಳುವುದನ್ನು ಇವರು ಬಯಸುವುದಿಲ್ಲ. ಧಾರ್ಮಿಕ, ಆಧ್ಯಾತ್ಮಿಕ, ಲೋಕೋಪಕಾರಕ ಮತ್ತು ಸಮಾಜಕ್ಕೆ ಹಿತಕಾರಿಯಾಗುವ ಕಾರ್ಯಗಳನ್ನು ಮಾಡಲು ಇವರಿಗೆ ವಿಶೇಷ ಆಸಕ್ತಿ ಇರುತ್ತದೆ. ಇವರು ದಯಾಳುಗಳು, ಉಪಕಾರಿಗಳು, ದಾನಿಗಳು, ಶಾಂತರು, ಗಂಭೀರರು, ಧೈರ್ಯವಂತರೂ ಮತ್ತು ಬಡವರಿಗೆ ಆಶ್ರಯದಾತರೂ ಆಗಿರುತ್ತಾರೆ. ಧರ್ಮಶಾಲೆ, ದೇವಸ್ಥಾನ, ಬಾವಿ, ಸರೋವರ, ಕೊಳ, ವಿದ್ಯಾಲಯ, ಆಸ್ಪತ್ರೆ, ಅನಾಥಾಲಯಗಳನ್ನು ನಿರ್ಮಿಸಲು ಇವರು ತಮ್ಮ ಸರ್ವಸ್ವವನ್ನೂ ಅರ್ಪಿಸುತ್ತಾರೆ. ಇವರು ಹಣವನ್ನು ಎಂದೂ ದುರುಪಯೋಗ ಮಾಡುವುದಿಲ್ಲ.

ಮಾನವ ಜಾತಿಯ ಅಧ್ಯಯನ ಮಾಡುವುದು ಹೇಗೆಂದು ಬೇರೆಯವರು ಇವರಿಂದಲೇ ಕಲಿಯಬೇಕು. ಇವರು ಮಹತ್ವಾಕಾಂಕ್ಷಿಗಳು, ಭೌತಿಕತೆಯಿಂದ ದೂರವಿರುವವರು, ಮೇಲ್ಮಟ್ಟದ ಆದರ್ಶವಾದಿಗಳು, ಚಿತ್ರಕಾರಿಗಳು, ಕಾವ್ಯಸೃಜನರು, ಆಗಿರುತ್ತಾರೆ. ರಹಸ್ಯವಾದ ವಿಚಾರಗಳನ್ನು ಯೋಚಿಸಲು ಸದಾ ಹಾತೊರೆಯುತ್ತಿರುತ್ತಾರೆ.

ತರ್ಕದಲ್ಲಿ ಇವರನ್ನು ಯಾರೂ ಸೋಲಿಸಲಾರರು. ಸದ್ಗುಣಿಗಳು, ವಿದ್ವಾಂಸರು, ಶಾಸ್ತ್ರಜ್ಞರು ಮತ್ತು ಅನುಭವಿಗಳಾದ ಕಾರಣದಿಂದ ಶತ್ರುಗಳು ಯಾವಾಗಲೂ ಇವರ ಎದುರು ತಲೆ ತಗ್ಗಿಸುತ್ತಾರೆ. ಸಾರ್ವಜನಿಕ ಕಾರ್ಯದಲ್ಲಿ ಅನಾಚಾರವನ್ನು ಕಂಡರೆ ಆದರ್ಶ ಪ್ರೇಮಿಗಳಾದ ಇವರು

ಸಿಡಿದುಬೀಳುತ್ತಾರೆ, ದುಃಖಿಗಳಾಗುತ್ತಾರೆ ಮತ್ತು ನಿರಾಶರಾಗುತ್ತಾರೆ. ಎಲ್ಲರೊಂದಿಗೆ ಸ್ನೇಹ ಮಾಡುವವರು, ಚಾರಿತ್ರ್ಯಕ್ಕೆ ಶಕ್ತಿ ತುಂಬುವವರು, ಆತ್ಮಗೌರವದಿಂದ ಪರಿಪೂರ್ಣರೂ ಇವರಾಗಿರುತ್ತಾರೆ.

ಸುಳ್ಳು, ಕಪಟ, ಮೋಸ, ದುಷ್ಪತನ, ಅತಿ ಪ್ರಶಂಸೆ ಮತ್ತು ಪ್ರದರ್ಶನಗಳನ್ನು ಈ ಜನಗಳು ಸ್ವಾಭಾವಿಕವಾಗಿ ದ್ವೇಷಿಸುತ್ತಾರೆ. ಇವರಿಗೆ ಧರ್ಮದ ಪ್ರತಿ ಆಳವಾದ ಶ್ರದ್ಧೆ ಇರುತ್ತದೆ.

ಒಂದು ವೇಳೆ ಬೆರಳುಗಳಲ್ಲಿ ಗಂಟುಗಳಿದ್ದರೆ ವಿಚಾರ ಪ್ರವೃತ್ತಿ ಇವರಲ್ಲಿ ಅತ್ಯಧಿಕವಾಗಿರುತ್ತದೆ. ಒಂದು ವೇಳೆ ಬೆರಳುಗಳ ಅಗ್ರಭಾಗ ಸ್ವಲ್ಪ ಚತುಷ್ಕೋಣಾಕೃತಿಯಲ್ಲಿದ್ದರೆ ಅಥವಾ ಚೂಪಾಗಿದ್ದರೆ ಆತ್ಮಿಕ ಸ್ಫೂರ್ತಿಯ ಪ್ರಬಲತೆ ಇರುವುದೆಂದು ತಿಳಿದುಕೊಳ್ಳಬೇಕು.

ಬೆರಳುಗಳು ವರ್ಗಾಕಾರವಾಗಿದ್ದರೆ ಧೈರ್ಯ ಮತ್ತು ಉತ್ಸಾಹ ಹೆಚ್ಚಾಗಿರುತ್ತದೆಂದು ತಿಳಿದುಕೊಳ್ಳಬೇಕು. ಬೆರಳುಗಳು ಮೊನೆಯುಳ್ಳದ್ದಾಗಿದ್ದರೆ ಆತ್ಮತ್ಯಾಗದ ಭಾವನೆ ಅಧಿಕವಾಗಿರುತ್ತದೆಂದು ಭಾವಿಸಬೇಕು.

ಒಂದು ವೇಳೆ ಅಂಗೈ ವರ್ಗಾಕಾರವಾಗಿದ್ದರೆ ಮತ್ತು ಕೇವಲ ಬೆರಳುಗಳು ಮಾತ್ರ ಗಂಟುಗಳಿಂದ ಕೂಡಿದ್ದರೆ ಚಾರಿತ್ರ್ಯದಲ್ಲಿ ವ್ಯಾವಹಾರಿಕತೆ ಪ್ರಧಾನವಾಗಿರುತ್ತದೆಂದು ತಿಳಿದುಕೊಳ್ಳಬೇಕು. ಇಂಥಹ ಜನಗಳ ದಾಂಪತ್ಯ ಜೀವನದ ಶುಭಾಶುಭಗಳನ್ನು ತಿಳಿದುಕೊಳ್ಳಲು ಇವರ ಪತ್ನಿಯ ಕೈನ ಲಕ್ಷಣಗಳನ್ನೂ ಸಹ ನೋಡಬೇಕು. ಒಂದು ವೇಳೆ ಪತಿ ಪತ್ನಿಯರಿಬ್ಬರ ಲಕ್ಷಣಗಳು ಸಮಾನವಾಗಿದ್ದರೆ ವಿವಾಹಿತ ಜೀವನ ಸುಖಮಯವಾಗಿ ಕಳೆಯುತ್ತದೆ. ಹಾಗಿಲ್ಲದಿದ್ದ ಪಕ್ಷದಲ್ಲಿ ವಿರಸದಿಂದ ಕೂಡಿರುತ್ತದೆಂದು ತಿಳಿದುಕೊಳ್ಳಬೇಕು.

ದಾರ್ಶನಿಕ ಕೈನ ವ್ಯಕ್ತಿಯ ಕೈ ಮೇಲೆ ಹೃದಯ ರೇಖೆ ಗುರು ಪರ್ವತದ ಮೇಲೆ ಸಮಾಪ್ತಿಗೊಂಡಿದ್ದರೆ ಅಂತಹ ವ್ಯಕ್ತಿ ತನ್ನ ಪ್ರೇಯಸಿ ಅಥವಾ ಪತ್ನಿಯನ್ನು ಒಂದೇ ಬಾರಿ ಕಳೆದುಕೊಂಡ ನಂತರ ಆವಳ ಜ್ಞಾಪಕದಲ್ಲೇ ತನ್ನ ಉಳಿದ ಜೀವನವನ್ನು ಏಕಾಂಗಿತನದಿಂದಲೇ ಕಳೆಯುತ್ತಾನೆ. ಬೇರೆ ಹೆಣ್ಣಿನೊಡನೆ ಪ್ರೀತಿ ಅಥವಾ ವಿವಾಹವನ್ನು ಇಂಥವರು ಖಂಡಿತಾ ಮಾಡಿಕೊಳ್ಳುವುದಿಲ್ಲ.

### 5. ಕಲಾತ್ಮಕ ಅಥವಾ ವ್ಯಾವಸಾಯಿಕ ಕೈ (Artistic or Conic Hand)

ಈ ಕೈ ಬಹಳ ಸುಂದರವಾಗಿರುತ್ತದೆ. ಚರ್ಮ ಮೃದುವಾಗಿಯೂ

ಮತ್ತು ತೆಳುವಾಗಿಯೂ—ಹಾಗೂ ಬೆರಳುಗಳು ಮೊನಚಾಗಿಯೂ ಮತ್ತು ಉದ್ದವಾಗಿಯೂ ಇರುತ್ತದೆ. ಇಂತಹ ಕೈಯನ್ನು ಮೊನೆಯುಳ್ಳ ಕೈ ಎಂದು ಸಹ ಹೇಳಬಹುದು.



ಇಂತಹ ಕೈ ಮಧ್ಯಮ ಆಕಾರದ ಅರ್ಥಾತ್ ಹೆಚ್ಚು ದೊಡ್ಡದಾಗಿಯೂ ಇರದೆ, ಹೆಚ್ಚು ಚಿಕ್ಕದಾಗಿಯೂ ಇರದೆ ಅಂಗೈ ಮುಂಭಾಗದ ಕಡೆಗೆ ಸ್ವಲ್ಪ ಕಡಿಮೆ ಅಗಲವಾಗಿರುತ್ತದೆ. ಬೆರಳುಗಳು ತನ್ನ ಪ್ರಾರಂಭಿಕ ಸ್ಥಾನದ ಮೇಲೆ ಪುಷ್ಪದಲ್ಲಿ ಉಗುರುಗಳವರೆಗೆ ತಲುಪುತ್ತಾ ತಲುಪುತ್ತಾ ತೆಳುವಾಗಿಯೂ ಮತ್ತು ಚೂಪಾಗಿಯೂ ಇರುತ್ತದೆ. ರಜೋಗುಣ ಪ್ರಧಾನವಾದ ಇಂಥಹ ವ್ಯಕ್ತಿ ಭಾವುಕ ಸಂವೇದನಾಶೀಲನು, ಕಲೆಯನ್ನು ಪರೀಕ್ಷಿಸುವವನು, ಸೂಕ್ಷ್ಮಗ್ರಾಹಿ ಸ್ವಭಾವದವನೂ ಆಗಿರುತ್ತಾನೆ. ಇವನು ತನ್ನ ಹೃದಯದ ಕೋಮಲ ಭಾವನೆಗಳನ್ನು ಮತ್ತು ಮಸ್ತಿಷ್ಕದ ಆಳವಾದ ಸಂವೇದನ ಶೀಲತೆಯ ಮೂಲಕವೇ ನಿಯಂತ್ರಿತನು ಮತ್ತು ಸಂಚಾಲಿತನೂ ಆಗಿರುತ್ತಾನೆ. ವಿಲಾಸ ಮತ್ತು ಐಶ್ವರ್ಯ ಭೋಗದ ಪ್ರಬಲ ಆಸೆ ಇವನಲ್ಲಿರುತ್ತದೆ. ಆಳವಾದ ತಿಳುವಳಿಕೆ ಮತ್ತು ಧೈರ್ಯದ ಅಭಾವ ಇವರನ್ನು ಇದ್ದಕ್ಕಿದ್ದಂತೆ ಸಫಲತೆಯಿಂದ ದೂರ ಕೊಂಡೊಯ್ಯುತ್ತದೆ. ಮಾತುಕತೆಯನ್ನು ಇವರು ಚೆನ್ನಾಗಿ ಯೋಚಿಸಿ ಮತ್ತು ಅರ್ಥ ಮಾಡಿಕೊಂಡು ಆಡುತ್ತಾರೆ. ಅಪರಿಚಿತನೂ ಸಹ ಇದ್ದಕ್ಕಿದ್ದಂತೆ ಇವರಿಗೆ ಮಿತ್ರನಾಗಿಬಿಡುತ್ತಾನೆ. ಇಷ್ಟ ಮತ್ತ ಅನಿಷ್ಟ ಇವರ

ಚರ್ಮದ ಎಲ್ಲೆಯಲ್ಲೇ ಇರುತ್ತದೆ. ಏನಾದರೂ ಇವರು ಸಹಾನುಭೂತಿಯ ಹಸಿವಿನಿಂದ ಕೂಡಿರುತ್ತಾರೆ.

ಭಾವನಗೆಳು ಇವರ ಮಸ್ತಿಷ್ಕದಲ್ಲಿ ಅಲೆಗಳಂತೆ ಉದ್ಭವಿಸುತ್ತಿರುತ್ತವೆ. ಇವರು ತಮ್ಮ ಶರೀರ ಮತ್ತು ಸುಖಸುವಿಧೆಗಳಿಗಾಗಿ ಸ್ವಾರ್ಥಿಗಳೆಂದು ಕರೆಯಲ್ಪಡುತ್ತಾರೆ. ಹಣದ ವಿಷಯದಲ್ಲಿ ಸದಾ ಉದಾರಿಗಳಾಗಿರುತ್ತಾರೆ. ಇಂಥವರನ್ನು ಯಾರು ಬೇಕಾದರೂ ಸುಲಭವಾಗಿ ಮೋಸಗೊಳಿಸಬಹುದು. ಒಳ್ಳೆಯದು–ಕೆಟ್ಟದು ಇವುಗಳ ವ್ಯತ್ಯಾಸವನ್ನು ಇವರು ಮಾಡಲಾರರು. ಮನುಷ್ಯರನ್ನು ಗುರುತಿಸುವ ಸಾಮರ್ಥ್ಯ ಇಂತಹ ಜನಗಳಲ್ಲಿ ಇರುವುದಿಲ್ಲ. ಸ್ವತಃ ಕಲಾಕಾರರಲ್ಲದೆ ಹೋದರೂ ಸಹ ಕಲಾತ್ಮಕ ವಸ್ತುಗಳೊಡನೆ ಬಹಳ ಸ್ನೇಹವಿಟ್ಟುಕೊಳ್ಳುತ್ತಾರೆ. ಇವರು ತಮ್ಮ ಮನೆಯನ್ನು ಶೋಭಾಯಮಾನ ರೀತಿಯಲ್ಲಿ ಸಿಂಗರಿಸಿಟ್ಟುಕೊಳ್ಳುತ್ತಾರೆ. ಊಟ ತಿಂಡಿಯ ಬಗ್ಗೆ ಪ್ರಬಲ ಆಸೆ ಇರುತ್ತದೆ. ಸಂಗೀತ, ವಾದ್ಯ, ಸಿನಿಮಾಗಳ ಸ್ನೇಹ ಬಹಳವಾಗಿರುತ್ತದೆ. ಆದರೆ ಇಂತಹ ವ್ಯಕ್ತಿಗಳು ಪ್ರತಿಕ್ಷಣ ಭಾವನೆಗಳಲ್ಲಿ ಮುಳುಗಿರುತ್ತಾರೆ.

ಇಂಥವರಲ್ಲಿ ಕಲಾತ್ಮಕ ಆಸಕ್ತಿ, ವಿಲಾಸಿತೆ, ವಿಶ್ರಾಂತಿ ಪ್ರಿಯತೆ, ಆಲಸ್ಯ ಮತ್ತು ಹುರುಪು ಹೆಚ್ಚಾಗಿರುತ್ತದೆ. ಇವರಿಗೆ ಕೆಲಸ ಮಾಡುವುದು ತಿಳಿದಿರುತ್ತದೆ. ಆದರೆ ಮುಂದಿನ ಪರಿಣಾಮದ ಬಗ್ಗೆ ಸ್ವಲ್ಪವೂ ಲೆಕ್ಕಿಸುವುದಿಲ್ಲ. ಯಾವುದೇ ಕೆಲಸ ಮಾಡಲು ತಕ್ಷಣವೇ ಸಿದ್ಧರಾಗಿಬಿಡುತ್ತಾರೆ.

ಇವರಲ್ಲಿ ಧೈರ್ಯ, ಸಂಕಲ್ಪ ಶಕ್ತಿ, ಪರಿಶ್ರಮ, ಉತ್ಸಾಹ ಮತ್ತು ಶ್ರದ್ಧೆಯ ಕೊರತೆ ಇರುವುದರಿಂದ ತಮ್ಮ ಕಾರ್ಯದಲ್ಲಿ ಸಂಪೂರ್ಣ ಸಫಲತೆಯನ್ನು ಪಡೆಯಲಾರರು. ಸ್ವಭಾವದಲ್ಲಿ ಬೇಜವಾಬ್ದಾರಿತನದ ಸಿಂಪಡಿಸುವಿಕೆ ಎಲ್ಲಿಯೂ ಕಾಣುವುದಿಲ್ಲ.

ಒಂದು ವೇಳೆ ಇಂತಹ ವ್ಯಕ್ತಿಗಳ ಅಂಗೈ ಸ್ವಲ್ಪ ಕಠೋರವಾಗಿದ್ದರೆ ಇವರು ಕಲೆ, ಸಂಗೀತದ ಉಪಾಸಕರಾಗಿ ಕೀರ್ತಿ ಗೌರವವನ್ನು ಗಳಿಸುತ್ತಾರೆ. ಒಂದು ವೇಳೆ ಕೈ ಮೃದುವಾಗಿದ್ದರೆ ವ್ಯಾವಹಾರಿಕ ಸಾಮರ್ಥ್ಯದ ಅಭಾವವುಂಟಾಗಿ ಲಾಭಾಂಶ ಕಡಿಮೆಯಾಗಿ ಅಸಫಲತೆಯ ಕಡೆಗೆ ಕೊಂಡೊಯ್ಯುತ್ತದೆ.

ಇಂತಹ ವ್ಯಕ್ತಿಗಳು ಮಧುರ ಭಾಷಿಗಳು, ವಾರ್ತಾಲಾಪ ಕುಶಲರು, ಅನ್ಯಾಯದ ಮನೋಭಾವನೆಗಳನ್ನು ಓದುವುದರಲ್ಲಿ ಸಿದ್ಧಹಸ್ತರು

ಆಗಿರುತ್ತಾರೆ. ಧೈರ್ಯ ಮತ್ತು ಸಂಕಲ್ಪ ಶಕ್ತಿಯ ಕೊರತೆ ಇರುವುದರಿಂದ ಮಿತ್ರರು ಸ್ಥಾಯೀ ರೀತಿಯಲ್ಲಿರುವುದಿಲ್ಲ. ಇವರೊಂದು ರೀತಿ ಜ್ಞಾನ ಬಂದ ಹಾಗೆ ಆಡುವವರಾಗಿರುತ್ತಾರೆ. ಯಾವುದಾದರೂ ಕೆಲಸದಲ್ಲಿಯಾಗಲೀ ಅಥವಾ ಉದ್ಯಮದಲ್ಲಿ ಆಗಲೀ ಯೋಜನಾಬದ್ಧರಾಗಿರುವುದಿಲ್ಲ.

ಇವರು ಶೀಘ್ರ ಪ್ರಭಾವಿತರಾಗುವವರು ಮತ್ತು ಶೀಘ್ರ ಪ್ರಭಾವಿತಗೊಳಿಸುವ ಶಾಂತಿಪ್ರಿಯರು, ದಯಾಳುಗಳು, ಪರೋಪಕಾರಿಗಳು, ಸಹಾನುಭೂತಿಪೂರ್ಣ ವ್ಯವಹಾರ ಮಾಡುವವರು, ಸ್ಪಷ್ಟ ಮಾತಾಡುವವರು, ಸತ್ಯವಾದಿಗಳು, ಮಿತವ್ಯಯಿಗಳು (ಸ್ವತಃ ಖರ್ಚು ಮಾಡಲು ಮಿತವ್ಯಯಿತನ ತೋರುತ್ತಾರೆ, ಆದರೆ ಇತರರಿಗೆ ಉದಾರಿಗಳಾಗಿರುತ್ತಾರೆ) ಆಗಿರುತ್ತಾರೆ. ಇವರು ಕೀರ್ತಿ ಹೆಸರು ಪಡೆಯಲು ಹಂಬಲಿಸುವುದಿಲ್ಲ ಮತ್ತು ಪ್ರದರ್ಶನ ಪ್ರಿಯತೆಯನ್ನು ದ್ವೇಷಿಸುತ್ತಾರೆ.

ಸುಂದರ ವಸ್ತ್ರಗಳನ್ನು ಧರಿಸುವುದು, ಶೃಂಗಾರ ಮಾಡಿಕೊಳ್ಳುವುದು, ಸ್ವಾದಿಷ್ಟ ಭೋಜನ ಮಾಡುವುದು ಇವರ ಪ್ರಬಲ ಆಸೆಗಳಾಗಿರುತ್ತವೆ. ಇವರು ಮಾನಸಿಕ ಕಾರ್ಯಗಳನ್ನು ಮಾಡುವುದರಲ್ಲಿ ದಕ್ಷರಾಗಿರುತ್ತಾರೆ. ಆದರೆ ಶಾರೀರಿಕ ಕಾರ್ಯಗಳನ್ನು ಮಾಡುವುದಕ್ಕೆ ಹಿಂಜರಿಯುತ್ತಾರೆ. ಇವರು ನಿಂದೆಯನ್ನು ಸಹಿಸುವುದಿಲ್ಲ. ಕಲ್ಪನಾ ಪ್ರಪಂಚದಲ್ಲಿ ಸದಾ ವಿಹರಿಸುತ್ತಿರುತ್ತಾರೆ. ಆದರೆ ನಿರಾಶೆ ಪ್ರಾಪ್ತಿಯಾದರೆ ಮನಸ್ಸಿನಲ್ಲೇ ಕೊರಗುತ್ತಾರೆ. ಒಂದು ವೇಳೆ ಹೆಬ್ಬೆರಳು ಚಿಕ್ಕದಾಗಿದ್ದು ಅಂಗೈ ಕೋಮಲವಾಗಿದ್ದರೆ ಈ ಗುಣ ವಿಶೇಷವಾಗಿರುತ್ತದೆ.

ಒಂದು ವೇಳೆ ಇವರಲ್ಲಿ ಧಾರ್ಮಿಕ ಭಾವನೆ ತುಂಬಿದರೆ ಧರ್ಮ ಮತ್ತು ಆಧ್ಯಾತ್ಮಿಕ ಕ್ಷೇತ್ರದಲ್ಲಿ ಹೆಚ್ಚು ಪ್ರಗತಿಯನ್ನು ಹೊಂದುವರು ಅಥವಾ ಕೆಟ್ಟ ಸಂಗ ಪ್ರಾಪ್ತಿಯಾದರೆ ನಾಶವನ್ನು ಹೊಂದುವರು. ಭಾಗ್ಯರೇಖೆ ಸಮಾಪ್ತಿಗೊಂಡರೆ ಅದೇ ವಯಸ್ಸಿನಲ್ಲಿ ದುರ್ವ್ಯಸನದಲ್ಲಿ ಸಿಲುಕಿಕೊಂಡು ತಮ್ಮ ಹಣ, ಗೌರವ ಕಳೆದುಕೊಳ್ಳುತ್ತಾರೆ ಮತ್ತು ಆಗ ತಮ್ಮ ಪಾಲನೆ ಮಾಡಿಕೊಳ್ಳಲು ಅಸಂಭವವಾಗುತ್ತದೆ.

ಈ ಕೈನ ವ್ಯಕ್ತಿಯು ಮಂಗಳ ಕ್ಷೇತ್ರದಿಂದ ಮಸ್ತಕ ರೇಖೆ ಆರಂಭವಾದರೆ ಈ ಜಾತಕನು ಕುಡುಕನಾಗಿ ತನ್ನ ಆರೋಗ್ಯವನ್ನು ಕೆಡಿಸಿಕೊಳ್ಳುತ್ತಾನೆ. ಇಂಥಹ ಕೈನವರು ಕಲಾಕಾರರು, ಚಿತ್ರಕಾರರು, ಕವಿಗಳು, ಲೇಖಕರು, ಗಾಯಕರು, ನಾಯಕರು, ಭಾಷಣಕಾರರು, ಡಾಕ್ಟರ್‌ಗಳು, ವಕೀಲರು ಆಗಿರುತ್ತಾರೆ.

ಒಟ್ಟಾರೆ ಈ ಕೈ ಸುಂದರವಾಗಿ ಪ್ರತೀತವಾದರೂ ಸಹ ವ್ಯಾವಹಾರಿಕ ದೃಷ್ಟಿಯಿಂದ ಶುಭವಾದುದೆಂದು ಹೇಳಲಾಗುವುದಿಲ್ಲ. ಏಕೆಂದರೆ ಇವರು ತಮ್ಮ ಬೇಜವಾಬ್ದಾರಿತನ, ಅನಿಯಮಿತತೆಯ ಸೋಮಾರಿತನ ಮತ್ತು ಅನ್ಯ ದುರ್ಗುಣಗಳ ಕಾರಣದಿಂದಾಗಿ ತಮ್ಮ ಹಾಗೂ ಪಾರಿವಾರಿಕ ಜೀವನದ ಸುಖಶಾಂತಿಯನ್ನು ನಷ್ಟಮಾಡಿಕೊಳ್ಳುತ್ತಾರೆ.

**6. ಆದರ್ಶವಾದಿ ಕೈ (Psychic or Idealistic Hand)**

ಈ ಕೈ ಸುಗರಿತ ಅಂಗ್ಯೆ, ಕೋಮಲ ಚರ್ಮ ಮತ್ತು ಗುಲಾಬಿ ಬಣ್ಣದಿಂದ ಕೂಡಿರುವುದಾಗಿರುತ್ತದೆ. ಬಾದಾಮಿ ಆಕಾರದ ಈ ಕೈ ಉದ್ದವಾಗಿ, ಇಕ್ಕಟ್ಟಾಗಿ ಮತ್ತು ಶಕ್ತಿಹೀನವಾಗಿ ಕಂಡುಬರುತ್ತದೆ. ನಾಜೂಕಾದ ಮತ್ತು ಮೊನೆಚಾದ ಬೆರಳುಗಳು, ಉಗುರುಗಳ ಆಕಾರ ಉದ್ದವಾಗಿ ಮತ್ತು ಬಾದಾಮಿ ಬಣ್ಣವಾಗಿರುತ್ತದೆ. ಇವು ಸುಂದರ ಮತ್ತು



ನಾಜೂಕು ಕೈಗಳಾಗಿರುತ್ತವೆ. ಈ ಕೈನಲ್ಲಿ ಶಕ್ತಿಯ ಅಭಾವವಿರುವುದೆಂದು ಇದರ ಕೋಮಲತೆಯಿಂದಲೇ ವ್ಯಕ್ತವಾಗುತ್ತದೆ. ಜೀವನ ಸಂಘರ್ಷದಲ್ಲಿ ಇವರೆಂದೂ ದೃಢವಾಗಿ ನಿಲ್ಲಲು ಸಾಧ್ಯವಿಲ್ಲ.

ಈ ವ್ಯಕ್ತಿಗಳು ಆದರ್ಶವಾದಿಗಳು, ಸ್ವಪ್ನ ಲೋಕದಲ್ಲಿ ವಿಹರಿಸುವವರು, ಗಾಳಿಗೋಪುರವನ್ನು ಕಟ್ಟುವವರು ಮತ್ತು ವ್ಯವಹಾರಿಕತಾಶೂನ್ಯರೂ ಆಗಿರುತ್ತಾರೆ.

ಇವರು ಪರಿಷ್ಕೃತ ಮಸ್ತಿಷ್ಕವಿಟ್ಟುಕೊಂಡಿದ್ದರೂ ಸಹ ಆರ್ಥಿಕ ದೃಷ್ಟಿಯಿಂದ ಅಸಫಲರಾಗಿರುತ್ತಾರೆ. ಸ್ವಭಾವದಲ್ಲಿ ಆದರ್ಶ ಭಾವನೆಗಳ

ಪ್ರಧಾನತೆ ಇರುತ್ತದೆ. ಇದರಿಂದಾಗಿ ದಾರಿದ್ರ್ಯ ಜೀವನ ಸವೆಸಬೇಕಾಗುತ್ತದೆ. ನೈತಿಕತೆಯ ಆಶ್ರಯದಲ್ಲಿ ಕೋಪದಿಂದ ಮತ್ತು ಮೋಸಕಪಟಗಳ ಪ್ರಪಂಚದಿಂದ ದೂರವಿರುತ್ತಾರೆ. ಇವರಲ್ಲಿ ಸತ್ವಗುಣದ ಪ್ರಧಾನತೆ ಇರುತ್ತದೆ.

ಇವರು ಸೌಂದರ್ಯ ಪ್ರಿಯರು, ಸರಳ ಸ್ವಭಾವದವರು, ಸತ್ಯನಿಷ್ಠರು, ನ್ಯಾಯಪ್ರಿಯರು, ನಮ್ರರೂ, ಸುಶೀಲರೂ, ಶಾಂತರೂ ಮತ್ತು ಉದಾರಿಗಳೂ ಆಗಿರುತ್ತಾರೆ. ಆದರೆ ಇವರಲ್ಲಿ ಕರ್ಮಠತೆ ಇರುವುದಿಲ್ಲ. ಜೀವನ ಸಂಘರ್ಷದಲ್ಲಿ ಇವರು ಸೋತುಹೋಗುತ್ತಾರೆ. ಜೀವನದ ಪ್ರತಿಯೊಂದು ಕ್ಷೇತ್ರದಲ್ಲಿ ಇವರು ಸಂಪೂರ್ಣ ಅಸಫಲರಾಗುತ್ತಾರೆ. ಬುದ್ಧಿವಂತಿಕೆ, ಚತುರತೆ, ದೂರದರ್ಶಿತೆ, ಪರಿಶ್ರಮ ಶೀಲತೆಯ ಅಭಾವದ ಕಾರಣದಿಂದಾಗಿ ಇವರು ಅಸಫಲತೆ ಮತ್ತು ನಿರಾಶೆಗಳನ್ನು ಎದುರಿಸಬೇಕಾಗುತ್ತದೆ. ದುಃಖಿಗಳಾಗಿ ಇವರು ಒಳಗೊಳಗೇ ಬೆರೆತುಹೋಗುತ್ತಾರೆ. ಇದರಿಂದಾಗಿ ಇವರ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಉಂಟಾಗುತ್ತದೆ. ಜನಗಳು ಇವರಿಗೆ ಹೆಜ್ಜೆ ಹೆಜ್ಜೆಗೂ ಮೋಸ ಮಾಡುತ್ತಾರೆ.

ಇವರ ಕೈನಲ್ಲಿ ಲೆಕ್ಕವಿಲ್ಲದಷ್ಟು ಚಿಕ್ಕ ಚಿಕ್ಕ ರೇಖೆಗಳು ನಿರುದ್ದೇಶ್ಯರೂಪದಿಂದ ಅಸ್ತಿತ್ವ ಇರುತ್ತವೆ. ಇವು ಇವರ ಅಸ್ಥಿರ ಮನಸ್ಸು, ಸೂಕ್ಷ್ಮಗ್ರಾಹತೆ ಮತ್ತು ಸ್ವಾಭಾವಿಕ ಉತ್ತೇಜನೆಯ ಪರಿಚಯ ನೀಡುತ್ತವೆ. ಇವರು ಎಂದಿಗೂ ಸ್ಥಿರವಾಗಿ ಕುಳಿತುಕೊಳ್ಳಲಾರರು. ಯಾವು ಯಾವುದೋ ಕಾರ್ಯದಲ್ಲಿ ಆತ್ಮವಿಶ್ವಾಸ ಮತ್ತು ದೃಢತೆಯಿಂದ ಪ್ರವೃತ್ತರಾದರೆ ತಮ್ಮ ಬುದ್ಧಿ ಮತ್ತು ತಿಳುವಳಿಕೆಯ ಮೂಲಕ ಸಫಲತೆಯನ್ನು ಅವಶ್ಯವಾಗಿ ಪಡೆದುಕೊಳ್ಳುತ್ತಾರೆ.

ಒಂದು ವೇಳೆ ಇವರು ಉದ್ಯಮ ಕ್ಷೇತ್ರದಲ್ಲಿ ಕೆಲಸ ಮಾಡಬೇಕಾಗಿ ಬಂದರೆ ಇವರು ಪುಚ್ಛರಾಗುವ ಸಂಭವವಿರುತ್ತದೆ. ಇವರಿಗೆ ಧರ್ಮೋಪದೇಶಕ, ಪೂಜಾರಿ, ಮಠಾಧೀಶ, ಪಾದ್ರಿ ಮುಂತಾದ ಕಾರ್ಯಗಳು ಸರಿ ಹೊಂದುತ್ತವೆ. ಇವುಗಳಲ್ಲಿ ಇವರಿಗೆ ಆತ್ಮ ಸಂತೋಷ, ಸುಖ, ಗೌರವ ದೊರೆಯುತ್ತದೆ ಮತ್ತು ಜೀವನ ಶಾಂತಿಪೂರ್ವಕವಾಗಿ ಕಳೆಯುತ್ತದೆ.

ಪ್ರಸಿದ್ಧಿ ಮತ್ತು ಸೌಭಾಗ್ಯ ಎರಡೂ ಇವರಿಂದ ದೂರ ಓಡಿಹೋಗುತ್ತವೆ. ಗಾಯಕ, ಅಭಿನೇತ, ಪ್ರಚಾರಕ ಅಥವಾ ದಳ್ಳಾಳಿಯ

ಕಾರ್ಯವನ್ನು ಇಂತಹ ಕೈನ ವ್ಯಕ್ತಿಗಳು ಮಾಡುತ್ತಾರೆ.

ಇವರು ಬೇರೊಬ್ಬರನ್ನು ನಂಬುವುದಿಲ್ಲ ಮತ್ತು ಸ್ವತಃ ವಿಶ್ವಾಸ ಪಾತ್ರರೂ ಆಗಿರುವುದಿಲ್ಲ. ಒಂದು ವೇಳೆ ಮಸ್ತಕರೇಖೆ ಚೆನ್ನಾಗಿದ್ದು ಮತ್ತು ಬುಧಕ್ಷೇತ್ರ ಉನ್ನತವಾಗಿದ್ದರೆ ಇಂತಹ ಕೈನವರು ಪ್ರಭಾವ ಬೀರುವ ಮಾತುಗಳಿಂದ ಹಣ ಸಂಪಾದನೆ ಮಾಡುತ್ತಾರೆ. ಆದರೆ ಯಾವುದೇ ಒಂದು ಕಾರ್ಯದ ಮೇಲೆ ಸ್ಥಿರವಾಗಿ ನಿಲ್ಲದೇ ಇರುವುದರಿಂದ ಪದೇ ಪದೇ ದರಿದ್ರತೆ ಮತ್ತು ಸಂಕಟಗಳನ್ನು ಎದುರಿಸಬೇಕಾಗಿ ಬರುತ್ತದೆ.

ಒಂದು ವೇಳೆ ಇವರ ಕೈನಲ್ಲಿ ಹೃದಯರೇಖೆ ದೋಷಪೂರ್ಣವಾಗಿದ್ದರೆ ಇವರನ್ನು ಹೃದಯದ ಅತ್ಯಂತ ಕಪಟಿ ಮತ್ತು ಮೋಸಗಾರನೆಂದು ತಿಳಿದುಕೊಳ್ಳಬೇಕು.

### 7. ಮಿಶ್ರಿತ ಕೈ (Mixed Type Hand)

ಈ ರೀತಿಯ ಕೈನಲ್ಲಿ ಹಿಂದೆ ತಿಳಿಸಿದ ವಿಭಿನ್ನ ರೀತಿಯ ಕೈಗಳ ಎರಡು ಅಥವಾ ಅಧಿಕ ವರ್ಗಗಳ ಮಿಶ್ರಣ ಕಂಡುಬರುತ್ತದೆ.

ಯಾರದ್ದಾದರೂ ಅಂಗೈ ಒಂದು ವರ್ಗದ್ದಾಗಿರುತ್ತದೆ ಮತ್ತು



ಬೆರಳುಗಳು ಬೇರೊಂದು ವರ್ಗದ್ದಾಗಿರುತ್ತದೆ. ಕೆಲವು ಮಿಶ್ರಿತ ಕೈಗಳಲ್ಲಿ ವಿಭಿನ್ನ ವರ್ಗಗಳ ಬೆರಳುಗಳು ಒಟ್ಟಿಗೆ ನೋಡಲು ದೊರೆಯುತ್ತದೆ. ಇವುಗಳ ಗುಣಗಳಲ್ಲಿಯೂ ಸಹ ಸಮ್ಮಿಶ್ರಣವಿರುತ್ತದೆ. ಇಂತಹ ವ್ಯಕ್ತಿ ಸ್ವತಃ ಭಿನ್ನ ಭಿನ್ನ ಅಥವಾ ಪ್ರತಿಕೂಲ ಪರಿಸ್ಥಿತಿಗಳಲ್ಲೂ ಸಹ ಬಹಳ ಲೀಲಾಜಾಲವಾಗಿ ಸಮಯ ಯೋಜಿತ ಮಾಡುತ್ತಾನೆ. ಯಾವುದಾದರೂ ವಿಶೇಷ ಗುರಿಯನ್ನು ತಲುಪಲು ಇವರಿಗೆ ಬಹಳ ಕಷ್ಟವಾಗುತ್ತದೆ. ಇಂತಹ

ವ್ಯಕ್ತಿಗಳು ಯಾವುದೇ ಕಾರ್ಯವನ್ನು ಎಷ್ಟು ಉತ್ಸಾಹದಿಂದ ಪ್ರಾರಂಭಿಸುತ್ತಾರೋ ಅಷ್ಟೇ ಶೀಘ್ರವಾಗಿ ಆಸಕ್ತಿಯನ್ನು ಕಳೆದುಕೊಂಡು ಬಿಡುತ್ತಾರೆ ಮತ್ತು ಆ ಕಾರ್ಯವನ್ನು ಅರ್ಧಕ್ಕೇ ಬಿಟ್ಟು ಮತ್ತೊಂದು ಹೊಸ ಕಾರ್ಯವನ್ನು ಆರಂಭಿಸುತ್ತಾರೆ. ಇವರ ಮೆದುಳಿನಲ್ಲಿ ನಿರಂತರ ಸಂದೇಹ, ಅನುಮಾನ ಮತ್ತು ಭ್ರಮೆಯ ವಾತಾವರಣ ಹರಡಿಕೊಂಡಿರುತ್ತದೆ.

ಇಂತಹ ವ್ಯಕ್ತಿಗಳ ಮನಸ್ಸು ಅಸ್ಥಿರವಾಗಿರುತ್ತದೆ. ಇಂತಹ ವ್ಯಕ್ತಿಗಳು ಮಾತಾಡುವುದರಲ್ಲಿ ಚುರುಕಾಗಿರುತ್ತಾರೆ ಮತ್ತು ಅನೇಕ ಪ್ರಕಾರದ ಯೋಗ್ಯತೆಯನ್ನು ಹೊಂದಿದವರಾಗಿರುತ್ತಾರೆ. ಆದರೆ ಇವರು ಹೆಜ್ಜೆ ಹೆಜ್ಜೆಗೂ ತಪ್ಪು ಮಾಡುವುದರಿಂದ ಅಸಫಲತೆಯನ್ನು ಪಡೆಯುತ್ತಾರೆ.

---

## ಅಧ್ಯಾಯ 2

# ಬೆರಳುಗಳು ಮತ್ತು ಉಗುರುಗಳು

ಪ್ರತಿಯೊಂದು ಕೈನಲ್ಲಿ ನಾಲ್ಕು ಬೆರಳುಗಳು ಮತ್ತು ಒಂದು ಹೆಬ್ಬೆರಳು ಇರುತ್ತದೆ.

### 1. ತೋರುಬೆರಳು (ತರ್ಜನಿ):

ಹೆಬ್ಬೆರಳಿನ ಪಕ್ಕದಲ್ಲಿ ಇರುವ ತೋರುಬೆರಳು ಮೊದಲನೇ ಬೆರಳಾಗಿರುತ್ತದೆ. ಇದರ ಬೇರಿನಲ್ಲಿ ಗುರುಪರ್ವತ ಸ್ಥಾನವಿದೆ. ಹೆಚ್ಚು ಜನಗಳ ಕೈಯಲ್ಲಿ ಈ ಬೆರಳು ಉಂಗುರದ ಬೆರಳಿಗಿಂತ ಚಿಕ್ಕದಾಗಿರುತ್ತದೆ.




ಆದರೆ ಕೆಲವು ಜನಗಳ ಕೈಯಲ್ಲಿ ತೋರುಬೆರಳು ಉಂಗುರದ ಬೆರಳಿಗಿಂತ ದೊಡ್ಡದಾಗಿರುತ್ತದೆ.

ಉಂಗುರದ ಬೆರಳಿಗಿಂತ ತೋರುಬೆರಳು ಹೆಚ್ಚು ಉದ್ದವಾಗಿದ್ದರೆ ಅಂತಹ ವ್ಯಕ್ತಿಗಳು ಗೌರವದಿಂದ ಕೂಡಿದವರೂ, ಅಹಂಕಾರಿಗಳೂ ಮತ್ತು ಜವಾಬ್ದಾರಿಯುತ ಪದವಿಯನ್ನು ನಿರ್ವಹಿಸುವವರೂ ಆಗಿರುತ್ತಾರೆ. ಧಾರ್ಮಿಕ ಕಾರ್ಯಗಳಲ್ಲಿ ಇವರಿಗೆ ಆಸಕ್ತಿ ಇರುವುದಿಲ್ಲ. ಇವರು ತಮ್ಮ ಮೇಲಿನ ಅಧಿಕಾರಿಗಳನ್ನು ಸುಳ್ಳು ಪ್ರಶಂಸೆ ಮಾಡುವುದರಲ್ಲಿ ನಂಬಿಕೆ ಇರಿಸಿಕೊಂಡಿರುತ್ತಾರೆ. ತಮ್ಮ ಅಧೀನಸ್ಥ ಕೆಲಸಗಾರರ ಮೇಲೆ ಬಿಗಿ ನಿಯಂತ್ರಣವಿರಿಸಿಕೊಂಡಿರುತ್ತಾರೆ ಮತ್ತು ಅಧಿಕಾರ ಚಲಾಯಿಸುವ ಭಾವನೆ ಇವರಲ್ಲಿ ಎಲ್ಲೆ ಮೀರಿ ಇರುತ್ತದೆ. ಈ ಕಾರಣದಿಂದ ಸಮಾಜದಲ್ಲಿ ಇವರಿಗೆ ನಿಂದನೆ ಉಂಟಾಗುತ್ತದೆ. ಆದರೂ ಸಹ ತಮ್ಮ ಧೈರ್ಯದ ಬಲದಿಂದ ಮುಂದುವರೆಯುತ್ತಿರುತ್ತಾರೆ.

ಒಂದು ವೇಳೆ ತೋರುಬೆರಳು ಉಂಗುರದ ಬೆರಳಿಗಿಂತ ಚಿಕ್ಕದಾಗಿದ್ದರೆ ಇಂತಹ ವ್ಯಕ್ತಿಗಳು ಅತ್ಯಂತ ಚಾಲಾಕಿನವರಾಗಿರುತ್ತಾರೆ. ಇಂತವರು ಯಾವುದೋ ರೀತಿಯಿಂದ ತಮ್ಮ ಕಾರ್ಯವನ್ನು ಸಾಧಿಸಿಕೊಳ್ಳುತ್ತಾರೆ. ಇಂತಹ ವ್ಯಕ್ತಿಗಳನ್ನು ಸ್ವಾರ್ಥಿಗಳು, ಧೂರ್ತರು ಎಂದು ತಿಳಿದುಕೊಳ್ಳಬೇಕು.

ತೋರುಬೆರಳು ಒಂದು ವೇಳೆ ಅಸಮಾನ್ಯ ರೂಪದಲ್ಲಿ ಚಿಕ್ಕದಾಗಿದ್ದರೆ ಅಂತಹ ವ್ಯಕ್ತಿ ಅನಾಯಾಸ ನಿರ್ಣಯ ತೆಗೆದುಕೊಳ್ಳುವುದರಲ್ಲಿ ಬುದ್ಧಿವಂತನಾಗಿರುತ್ತಾನೆ.

ತೋರು ಬೆರಳು ಒಂದು ವೇಳೆ ಅಸಮಾನ್ಯ ರೂಪದಲ್ಲಿ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಅತ್ಯಾಚಾರಿ, ದುರಹಂಕಾರಿ ಮತ್ತು ಕಾಮುಕನಾಗಿರುತ್ತಾನೆ.

ಒಂದು ವೇಳೆ ತೋರು ಬೆರಳು ಉದ್ದವಾಗಿ ಮತ್ತು ಮೇಲ್ಭಾಗದ ಅಂಚು ಮೊನಚಾಗಿದ್ದರೆ ಅಂತಹ ವ್ಯಕ್ತಿ ಕುರುಡು ನಂಬಿಕೆಯುವನು ಮತ್ತು ಧರ್ಮದ ಮೇಲೆ ಅವಶ್ಯಕತೆಗಿಂತ ಹೆಚ್ಚು ಶ್ರದ್ಧೆ ಇಟ್ಟುಕೊಳ್ಳುವವನಾಗಿರುತ್ತಾನೆ. ಒಂದು ವೇಳೆ ಈ ಬೆರಳು ಉದ್ದವಾಗಿದ್ದು ಆದರೆ ಮೇಲ್ಭಾಗದ ಅಂಚು ವರ್ಗಾಕಾರವಾಗಿದ್ದರೆ ಅಂತಹ ವ್ಯಕ್ತಿ ಸಚ್ಚರಿತ್ರನು ಮತ್ತು ಉದಾರಪ್ರವೃತ್ತಿಯುವನೂ ಆಗಿರುತ್ತಾನೆ. ಒಂದು ವೇಳೆ ತೋರುಬೆರಳು ಉದ್ದವಾಗಿದ್ದು ಮತ್ತು ಮುಂದಿನ ಭಾಗ ಚಪ್ಪಟೆಯಾಗಿದ್ದರೆ ಅಂತಹ ವ್ಯಕ್ತಿ ಚಂಚಲ ಮನಸ್ಥಿತಿಯುವನಾಗಿರುತ್ತಾನೆ. ಒಂದು ವೇಳೆ ತೋರುಬೆರಳಿನ ಮೊದಲನೇ ಪರ್ವ ಮಾತ್ರವೇ

ಉದ್ದವಾಗಿದ್ದರೆ ಅಂತಹ ವ್ಯಕ್ತಿಯನ್ನು ಆತ್ಮವಿಶ್ವಾಸಿ ಎಂದು ಕರೆಯುತ್ತಾರೆ. ಒಂದು ವೇಳೆ ತೋರು ಬೆರಳಿನ ಎರಡನೆ ಪರ್ವ ಮಾತ್ರ ಉದ್ದವಾಗಿದ್ದರೆ ಅಂತಹ ವ್ಯಕ್ತಿಯಲ್ಲಿ ಅವಶ್ಯಕತೆಗಿಂತ ಹೆಚ್ಚು ಗರ್ವ ಮತ್ತು ಅಭಿಮಾನವಿರುತ್ತದೆ. ಒಂದು ವೇಳೆ ತೋರು ಬೆರಳು ಮತ್ತು ಮಧ್ಯದ ಬೆರಳುಗಳು ಒಂದೇ ಸಮನಾಗಿದ್ದರೆ ಅಂತಹ ವ್ಯಕ್ತಿ ಇಡೀ ವಿಶ್ವದಿಂದಲೇ ಗೌರವವನ್ನು ಪಡೆಯುವಂಥವನಾಗಿರುತ್ತಾನೆ.

## 2. ಮಧ್ಯದ ಬೆರಳು (ಮಧ್ಯಮಾ):

ಈ ಬೆರಳು ಸಾಮಾನ್ಯವಾಗಿ ತೋರು ಬೆರಳು ಮತ್ತು ಉಂಗುರದ ಬೆರಳಿಗಿಂತ ಉದ್ದವಾಗಿರುತ್ತದೆ. ಆದರೆ ಈ ಉದ್ದ 1/4 ಇಂಚಿಗಿಂತ ದೊಡ್ಡದಾಗಿರಬಾರದು. ಒಂದು ವೇಳೆ 1/4 ಇಂಚಿಗಿಂತ ಹೆಚ್ಚು ಉದ್ದವಿದ್ದರೆ ಅಂತಹ ವ್ಯಕ್ತಿಯು ಸಂಪೂರ್ಣ ಜೀವನ ದುಃಖ, ಅಭಾವ ಮತ್ತು ಕಷ್ಟಗಳಿಂದಲೇ ಕಳೆಯುತ್ತದೆ. ಒಂದು ವೇಳೆ ಈ ಬೆರಳು ಸರಿಯಾಗಿ 1/4



ಇಂಚು ಮಾತ್ರವೇ ಉದ್ದವಿದ್ದರೆ ಅಂತಹ ವ್ಯಕ್ತಿ ಬುದ್ಧಿವಂತನು, ಶುಭಕಾರ್ಯ ಮಾಡುವವನು ಮತ್ತು ಏಳ್ಗೆಯ ಕಡೆಗೆ ಅಗ್ರಸರನಾಗುವವನಾಗಿರುತ್ತಾನೆ. ಇಂತಹ ವ್ಯಕ್ತಿಯೇ ಸಮಾಜದಲ್ಲಿ ಗೌರವ ಮತ್ತು ಕೀರ್ತಿಯನ್ನು ಪಡೆದುಕೊಳ್ಳುವವನಾಗಿರುತ್ತಾನೆ.

ಮಧ್ಯದ ಬೆರಳಿನ ಮೂಲದಲ್ಲಿ ಶನಿ ಪರ್ವತವಿರುತ್ತದೆ.

ಒಂದು ವೇಳೆ ಮಧ್ಯದ ಬೆರಳು ತೋರು ಬೆರಳಿಗಿಂತ ಅರ್ಧ ಇಂಚು ಅಥವಾ ಅದಕ್ಕಿಂತಲೂ ಹೆಚ್ಚು ದೊಡ್ಡದಾಗಿದ್ದರೆ ಅಂತಹ ವ್ಯಕ್ತಿ ನಿಶ್ಚಯವಾಗಿ ಕೊಲೆಗಾರನಾಗುತ್ತಾನೆಂದು ಭಾವಿಸಬೇಕು.

ಒಂದು ವೇಳೆ ಮಧ್ಯದ ಬೆರಳು ಉದ್ದವಾಗಿದ್ದರೆ ವ್ಯಕ್ತಿ ರೋಗಿ ಮತ್ತು ಕಾಮಿಯಾಗಿರುತ್ತಾನೆ. ಒಂದು ವೇಳೆ ಈ ಬೆರಳು ಉದ್ದವಾಗಿರುವುದರ ಜೊತೆಗೆ ಗಂಟುಳ್ಳದ್ದು ಹಾಗೂ ಊದಿಕೊಂಡಿರುವುದು ಆಗಿದ್ದರೆ ವ್ಯಕ್ತಿ ಸ್ವಾರ್ಥಿ ಮತ್ತು ಚಿಂತಾಗ್ರಸ್ತನಾಗಿರುತ್ತಾನೆ. ಒಂದು ವೇಳೆ ಮಧ್ಯದ ಈ ಬೆರಳು ಉದ್ದವಾಗಿದ್ದು ಜೊತೆಗೆ ಇದರ ಮೇಲ್ಭಾಗದ ಅಂಚು ವರ್ಗಾಕಾರವಾಗಿದ್ದರೆ ಇಂತಹ ವ್ಯಕ್ತಿ ಗಂಭೀರ ಸ್ವಭಾವದವನಾಗಿರುತ್ತಾನೆ ಮತ್ತು ಜೀವನದಲ್ಲಿ ಜವಾಬ್ದಾರಿಯುತ ಪದವಿಯಲ್ಲಿ ಸಫಲತೆಯಿಂದ ಕಾರ್ಯ ನಿರ್ವಹಿಸುತ್ತಾನೆ.

ಒಂದು ವೇಳೆ ಈ ಮಧ್ಯದ ಬೆರಳು ಉದ್ದವಾಗಿದ್ದು ಮತ್ತು ಮೇಲ್ಭಾಗದಿಂದ ಚಪ್ಪಟೆಯಾಗಿದ್ದರೆ ಇಂತಹ ವ್ಯಕ್ತಿ ಕಲಾಕ್ಷೇತ್ರದಲ್ಲಿ ವಿಶೇಷ ಸಫಲತೆಯನ್ನು ಪಡೆಯುತ್ತಾನೆ ಮತ್ತು ಕಲೆಯ ಮಾಧ್ಯಮದಿಂದ ಮೇಲ್ಮಟ್ಟದ ಗೌರವ, ಖ್ಯಾತಿ ಮತ್ತು ಪ್ರಶಂಸೆಯನ್ನು ಗಳಿಸುತ್ತಾನೆ. ಒಂದು ವೇಳೆ ಮಧ್ಯದ ಬೆರಳಿನ ಮೊದಲನೇ ಪರ್ವ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ. ಒಂದು ವೇಳೆ ಎರಡನೇ ಪರ್ವ ಉದ್ದವಾಗಿದ್ದರೆ ಅಂತಹ ವ್ಯಕ್ತಿ ವ್ಯಾಪಾರಿಕ ಕ್ಷೇತ್ರಗಳಲ್ಲಿ ವಿಶೇಷವಾಗಿ ಯಾಂತ್ರಿಕ ಸಂಬಂಧದ ಕಾರ್ಯಗಳಲ್ಲಿ ವಿಶೇಷ ಲಾಭವನ್ನು ಗಳಿಸುತ್ತಾನೆ. ಒಂದು ವೇಳೆ ಮೂರನೇ ಪರ್ವ ಹೆಚ್ಚು ಉದ್ದವಾಗಿದ್ದರೆ ಅಂತಹ ವ್ಯಕ್ತಿ ಅವಶ್ಯಕತೆಗಿಂತ ಹೆಚ್ಚು ಜಿಪುಣನಾಗಿರುತ್ತಾನೆ ಮತ್ತು ಸಮಾಜದಲ್ಲಿ ಅಪಕೀರ್ತಿ ಪಡೆಯುತ್ತಾನೆ.

ಒಂದು ವೇಳೆ ಮಧ್ಯದ ಬೆರಳಿನ ಮೇಲಿನ ತುದಿ ತೋರುಬೆರಳಿನ ಕಡೆಗೆ ಬಾಗಿದ್ದರೆ ಅಂತಹ ವ್ಯಕ್ತಿಯಲ್ಲಿ ಅವಶ್ಯಕತೆಗಿಂತ ಹೆಚ್ಚು ಆತ್ಮವಿಶ್ವಾಸವಿರುತ್ತದೆ ಮತ್ತು ಈ ಆತ್ಮವಿಶ್ವಾಸದ ಕಾರಣದಿಂದಲೇ ಆತನು

ತನ್ನ ಗುರಿ ತಲುಪುವುದರಲ್ಲಿ ಯಶಸ್ವಿಯಾಗುತ್ತಾನೆ. ಒಂದು ವೇಳೆ ಇದರ ಮೇಲಿನ ಭಾಗ ಉಂಗುರದ ಬೆರಳಿನ ಕಡೆಗೆ ಬಾಗಿದ್ದರೆ ಅಂತಹ ವ್ಯಕ್ತಿ ಅದೃಷ್ಟದ ಮೇಲೆ ನಂಬಿಕೆ ಇಡುವವನು ಮತ್ತು ಸಂಗೀತ, ಕಲೆ ಮುಂತಾದವುಗಳಲ್ಲಿ ಆಸಕ್ತಿ ಉಳ್ಳವನಾಗಿರುತ್ತಾನೆ.

### 3. ಉಂಗುರದ ಬೆರಳು (ಅನಾಮಿಕಾ)

ಈ ಬೆರಳಿನ ಮೂಲದಲ್ಲಿ ಸೂರ್ಯಸ್ಥಾನವಿರುತ್ತದೆ. ಸಾಮಾನ್ಯವಾಗಿ ಈ ಬೆರಳು ಮಧ್ಯದ ಬೆರಳಿಗಿಂತ ಚಿಕ್ಕದಾಗಿಯೂ ಮತ್ತು ತೋರುಬೆರಳಿಗಿಂತ ಸ್ವಲ್ಪ ಉದ್ದವಾಗಿಯೂ ಇರುತ್ತದೆ. ಆದರೆ ಕೆಲವು ಕೈಗಳಲ್ಲಿ ತೋರು ಬೆರಳಿಗಿಂತ ಉದ್ದವಾಗಿರುತ್ತದೆ. ಒಂದು ವೇಳೆ ಈ




ಬೆರಳು ತೋರುಬೆರಳಿಗಿಂತ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಏಳ್ಗೆಯನ್ನು ಹೊಂದುತ್ತಾನೆ ಮತ್ತು ಅವನಲ್ಲಿ ದಯೆ, ಪ್ರೀತಿ, ಸ್ನೇಹ ಮುಂತಾದ ಗುಣಗಳು ಅವಶ್ಯಕತೆಗಿಂತ ಹೆಚ್ಚಾಗಿರುತ್ತದೆ. ಆದರೆ ಒಂದು ವೇಳೆ ಈ ಬೆರಳು ಮಧ್ಯದ ಬೆರಳಿಗೆ ಸಮಾನವಾಗಿದ್ದರೆ ಅಂತಹ ವ್ಯಕ್ತಿ ಅತ್ಯಂತ ದುಷ್ಟನೂ ಮತ್ತು ಸ್ವಾರ್ಥಿಯೂ ಆಗಿರುತ್ತಾನೆ. ಇಂತಹ ವ್ಯಕ್ತಿ ತನ್ನ ಹಿತಕ್ಕಾಗಿ ಬೇರೆಯವರಿಗೆ ಅಹಿತ ಉಂಟು ಮಾಡುವುದಕ್ಕೂ ಹಿಂಜರಿಯುವುದಿಲ್ಲ. ಆದರೆ ಇಂತಹ ವ್ಯಕ್ತಿ ಭಾಗ್ಯಶಾಲಿಯಾಗಿರುತ್ತಾನೆ

ಮತ್ತು ತನ್ನ ಹಣದ ಹೆಚ್ಚು ಭಾಗವನ್ನು ಜೂಜು, ಸಟ್ಟಾ, ಲಾಟರಿ ಮುಂತಾದ ತಪ್ಪು ಕಾರ್ಯಗಳಿಗೆ ತೊಡಗಿಸುತ್ತಾನೆ. ಇಂತಹ ವ್ಯಕ್ತಿಯನ್ನು ಅಸಭ್ಯ ಮತ್ತು ನಿರ್ದಯಿ ಎಂದು ಕರೆಯಬಹುದು.

ಒಂದು ವೇಳೆ ಉಂಗುರದ ಬೆರಳಿನ ಬಾಗುವಿಕೆ ಕಿರು ಬೆರಳಿನ ಕಡೆಗೆ ಆಗಿದ್ದರೆ ಅಂತಹ ವ್ಯಕ್ತಿ ವ್ಯಾಪಾರದಲ್ಲಿ ವಿಶೇಷ ಲಾಭ ಗಳಿಸುತ್ತಾನೆ ಮತ್ತು ಅವನ ಇಡೀ ಜೀವನ ವ್ಯಾಪಾರಿಕ ಕಾರ್ಯಗಳಲ್ಲೇ ಕಳೆಯುತ್ತದೆ. ಒಂದು ವೇಳೆ ಉಂಗುರದ ಬೆರಳಿನ ಬಾಗುವಿಕೆ ಮಧ್ಯದ ಬೆರಳಿನ ಕಡೆಗೆ ಆಗಿದ್ದರೆ ಅಂತಹ ವ್ಯಕ್ತಿ ಚಿಂತನೆ ಪ್ರಧಾನ ಮತ್ತು ಆತ್ಮ ಕೇಂದ್ರಿತವಾದುದಾಗಿರುತ್ತದೆ ಮತ್ತು ಆತನು ತನ್ನ ಜೀವನದಲ್ಲಿ ಸಮಾಜ ಮತ್ತು ದೇಶ ಸದಾ ನೆನಪಿನಲ್ಲಿಟ್ಟುಕೊಳ್ಳುವಂತಹ ಕಾರ್ಯವನ್ನು ಮಾಡಿಹೋಗುತ್ತಾನೆ.

ಒಂದು ವೇಳೆ ಉಂಗುರದ ಬೆರಳು ಚಿಕ್ಕದಾಗಿದ್ದರೆ ಆ ವ್ಯಕ್ತಿ ಕಲಾಕೃತಿಗಳ ಅಥವಾ ಚಿತ್ರಗಳ ಮತ್ತು ಪುರಾತನ ವಸ್ತುಗಳ ಸಂಗ್ರಹ ಮಾಡುವಂಥವನಾಗಿರುತ್ತಾನೆ. ಒಂದು ವೇಳೆ ಈ ಬೆರಳಿನ ಮುಂಭಾಗ ಮೊನಚಾಗಿದ್ದರೆ ಅವನು ಓರ್ವ ಸಫಲ ಸಂಗೀತಗಾರ ಅಥವಾ ಚಿತ್ರಕಾರನಾಗುತ್ತಾನೆ. ಒಂದು ವೇಳೆ ಈ ಬೆರಳಿನ ಮುಂದಿನ ಭಾಗ ವರ್ಗಾಕಾರವಾಗಿದ್ದರೆ ಅಂತಹ ವ್ಯಕ್ತಿ ಕಲೆಯ ಮಾಧ್ಯಮದಿಂದ ಹಣ ಮತ್ತು ಕೀರ್ತಿ ಎರಡನ್ನೂ ಸಂಪಾದಿಸುತ್ತಾನೆ. ಒಂದು ವೇಳೆ ಬೆರಳಿನ ಮುಂದಿನ ಭಾಗ ಚಪ್ಪಟೆಯಾಗಿದ್ದರೆ ಅಂತಹ ವ್ಯಕ್ತಿ ಇತಿಹಾಸಕ್ಕೆ ಸಂಬಂಧಪಟ್ಟ ಕಾರ್ಯಗಳಲ್ಲಿ ವಿಶೇಷ ಆಸಕ್ತಿ ತೆಗೆದುಕೊಳ್ಳುತ್ತಾನೆ ಹಾಗೂ ಇದರಲ್ಲಿ ಸಫಲತೆಯನ್ನು ಪಡೆಯುತ್ತಾನೆ. ಒಂದು ವೇಳೆ ಉಂಗುರದ ಬೆರಳಿನ ಮೊದಲನೇ ಪರ್ವ ಉದ್ದವಾಗಿದ್ದರೆ ಅಂತಹ ವ್ಯಕ್ತಿಯಲ್ಲಿ ಕಲಾತ್ಮಕ ಆಸಕ್ತಿ ವಿಶೇಷವಾಗಿರುತ್ತದೆ. ಒಂದು ವೇಳೆ ಎರಡನೇ ಪರ್ವ ಉದ್ದವಾಗಿದ್ದರೆ ಅಂತಹ ವ್ಯಕ್ತಿ ತನ್ನ ಪ್ರತಿಭೆಯ ಬಲದಿಂದ ಬಹಳ ಮೇಲ್ಮಟ್ಟಕ್ಕೆ ಏರುತ್ತಾನೆ. ಒಂದು ವೇಳೆ ಬೆರಳಿನ ಮೂರನೇ ಪರ್ವ ಉದ್ದ ಮತ್ತು ಅಗಲವಾಗಿದ್ದರೆ ಅಂತಹ ವ್ಯಕ್ತಿ ಜೀವನದಲ್ಲಿ ರಾಷ್ಟ್ರವ್ಯಾಪಿ ಗೌರವವನ್ನು ಸಂಪಾದಿಸುತ್ತಾನೆ. ಒಂದು ವೇಳೆ ಈ ಉಂಗುರದ ಬೆರಳು ತೋರು ಬೆರಳಿನಷ್ಟೇ ಉದ್ದವಾಗಿದ್ದರೆ ಅಂತಹ ವ್ಯಕ್ತಿಗೆ ವಿಶೇಷ ಖ್ಯಾತಿ ಗಳಿಸುವ ಬಯಕೆ ಇರುತ್ತದೆ. ಒಂದು ವೇಳೆ ಈ ಬೆರಳು ಮಧ್ಯದ ಬೆರಳಿನಷ್ಟೇ ಉದ್ದವಾಗಿದ್ದರೆ ಅಂತಹ ವ್ಯಕ್ತಿಯ ಜೀವನದಲ್ಲಿ ಅನೇಕ ಕಾರ್ಯಗಳು ಆಕಸ್ಮಿಕ ರೂಪದಲ್ಲಿ ಘಟಿಸುತ್ತವೆ ಮತ್ತು ಕೊನೆಗೆ

ಸಫಲತೆಯು ಪ್ರಾಪ್ತವಾಗುತ್ತದೆ.

**4. ಕಿರು ಬೆರಳು (ಕನಿಷ್ಠಿಕಾ) :**

ಈ ಬೆರಳಿನ ಮೂಲದಲ್ಲಿ ಬುಧ ಪರ್ವತದ ಸ್ಥಾನವಿರುತ್ತದೆ. ಪ್ರತ್ಯೇಕ ವ್ಯಕ್ತಿಯ ಕೈಯಲ್ಲಿ ಈ ಬೆರಳು ಎಲ್ಲಾ ಬೆರಳಿಗಿಂತ ಚಿಕ್ಕದಾಗಿರುತ್ತದೆ. ಒಂದು ವೇಳೆ ಈ ಕಿರು ಬೆರಳು ಉಂಗುರದ ಬೆರಳಿನ ಉಗುರಿನವರೆಗೆ ತಲುಪಿದರೆ ಅಂತಹ ವ್ಯಕ್ತಿ ಜೀವನದಲ್ಲಿ ಅತ್ಯಂತ ಮೇಲ್ಮಟ್ಟದ ಸಫಲತೆಯನ್ನು ಪಡೆಯುತ್ತಾನೆ ಮತ್ತು ಮಹತ್ವಪೂರ್ಣ ಪದವಿಯನ್ನು ವಹಿಸಿಕೊಳ್ಳುತ್ತಾನೆ. ಈ ಬೆರಳು ಎಷ್ಟು ಹೆಚ್ಚು ಉದ್ದವಾಗಿರುತ್ತದೋ ಅಷ್ಟೇ ಶುಭವೆಂದು ನಂಬಲಾಗಿದೆ. ಇಂತಹ ಉದ್ದದ ಬೆರಳನ್ನು ಹೊಂದಿರುವ ವ್ಯಕ್ತಿ ಸಫಲ ಆಡಳಿತಗಾರ ಮತ್ತು ಸಫಲ




ಸಾಹಿತ್ಯಕಾರನಾಗುತ್ತಾನೆಂದು ಹೇಳಲಾಗುತ್ತದೆ. ಒಂದು ವೇಳೆ ಈ ಬೆರಳು ಉಂಗುರದ ಬೆರಳಿನ ಮೇಲಿನ ಭಾಗದಿಂದ ಅರ್ಧ ಭಾಗದಷ್ಟು ಉದ್ದವಾಗಿದ್ದರೆ ಅಂತಹ ವ್ಯಕ್ತಿ ಸೆಕ್ರೆಟ್ರಿ ಅಥವಾ ಐ.ಎ.ಎಸ್.

ಅಧಿಕಾರಿಯಾಗುತ್ತಾನೆ. ಇಂತಹ ವ್ಯಕ್ತಿಗಳಿಗೆ ಆಕಸ್ಮಿಕ ರೂಪದಲ್ಲಿ ಧನಲಾಭವಾಗುತ್ತದೆ ಮತ್ತು ಜೀವನದ ಉತ್ತರಾರ್ಧ ಅತ್ಯಂತ ಸಫಲವಾಗಿ ಕಳೆಯುತ್ತದೆ.

ಈ ಕಿರುಬೆರಳು ಒಂದು ವೇಳೆ ಅಸಾಧಾರಣ ರೂಪದಲ್ಲಿ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಬುದ್ಧಿಜೀವಿಯಾಗಿರುತ್ತಾನೆ ಮತ್ತು ಅವನಲ್ಲಿ ಬೇರೆಯವರನ್ನು ಆಕರ್ಷಿಸುವ ವಿಶೇಷ ಗುಣವಿರುತ್ತದೆ. ಒಂದು ವೇಳೆ ಈ ಬೆರಳು ಅತ್ಯಂತ ಚಿಕ್ಕದಾಗಿದ್ದರೆ ಅಂತಹ ವ್ಯಕ್ತಿ ಮಾತಿನ ಮರ್ಮವನ್ನು ಶೀಘ್ರವೇ ಅರ್ಥ ಮಾಡಿಕೊಳ್ಳುತ್ತಾನೆ ಹಾಗೂ ತಕ್ಷಣವೇ ನಿರ್ಧಾರ ತೆಗೆದುಕೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಒಂದು ವೇಳೆ ಈ ಬೆರಳಿನ ತುದಿ ಮೊನಚಾಗಿದ್ದರೆ ಇಂತಹ ವ್ಯಕ್ತಿ ಬುದ್ಧಿವಂತನೂ, ಸೂಕ್ಷ್ಮ ದೃಷ್ಟಿ ಸಂಪನ್ನನೂ ಮತ್ತು ವಾಕ್‌ಪಟುವೂ ಆಗಿರುತ್ತಾನೆ. ಒಂದು ವೇಳೆ ಈ ಬೆರಳಿನ ಮುಂದಿನ ಭಾಗ ವರ್ಗಾಕಾರವಾಗಿದ್ದರೆ ಅಂತಹ ವ್ಯಕ್ತಿಯಲ್ಲಿ ತರ್ಕ ಮಾಡುವ ವಿಶೇಷ ಗುಣವಿರುತ್ತದೆ ಮತ್ತು ಇಂಥವನು ತನ್ನ ಭಾಷಣದ ಮಾಧ್ಯಮದಿಂದ ಜನರನ್ನು ಪ್ರಭಾವಿತಗೊಳಿಸುವ ಶಕ್ತಿಯನ್ನು ಹೊಂದಿರುತ್ತಾನೆ. ಒಂದು ವೇಳೆ ಬೆರಳಿನ ಮೇಲ್ಭಾಗ ಚಪ್ಪಟೆಯಾಗಿದ್ದರೆ ಅಂತಹ ವ್ಯಕ್ತಿ ವಿಜ್ಞಾನಿ ಅಥವಾ ಯಂತ್ರ ಸಂಬಂಧದ ಕಾರ್ಯಗಳಲ್ಲಿ ಆಸಕ್ತಿ ವಹಿಸುವವನಾಗಿರುತ್ತಾನೆ. ಒಂದು ವೇಳೆ ಈ ಕಿರುಬೆರಳಿನ ಮೊದಲನೇ ಪರ್ವ ಉದ್ದವಾಗಿದ್ದರೆ ಅಂತಹ ವ್ಯಕ್ತಿ ವಿಜ್ಞಾನದಲ್ಲಿ ಸಫಲತೆಯನ್ನು ಪಡೆದುಕೊಳ್ಳುತ್ತಾನೆ. ಒಂದು ವೇಳೆ ಈ ಬೆರಳಿನ ಎರಡನೇ ಪರ್ವ ಉದ್ದವಾಗಿದ್ದರೆ ಅಂತಹ ವ್ಯಕ್ತಿ ತನ್ನ ಪರಿಶ್ರಮದಿಂದ ವ್ಯಾಪಾರದಲ್ಲಿ ವಿಶೇಷ ಸಫಲತೆಯನ್ನು ಪಡೆದುಕೊಳ್ಳುತ್ತಾನೆ. ಒಂದು ವೇಳೆ ಮೂರನೇ ಪರ್ವ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಚತುರನಾಗಿರುತ್ತಾನೆ. ಆದರೆ ಅವನಲ್ಲಿ ಸುಳ್ಳು ಹೇಳುವ ಭಾವನೆ ಅವಶ್ಯಕತೆಗಿಂತ ಹೆಚ್ಚಿರುತ್ತದೆ. ಒಂದು ವೇಳೆ ಈ ಬೆರಳು ಉಂಗುರದ ಬೆರಳಿನಷ್ಟೇ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಮೇಲ್ಮಟ್ಟದ ದಾರ್ಶನಿಕ ಮತ್ತು ಬುದ್ಧಿವಂತನಾಗಿರುತ್ತಾನೆ. ಒಂದು ವೇಳೆ ಈ ಬೆರಳು ಮಧ್ಯದ ಬೆರಳಿನಷ್ಟೇ ಉದ್ದವಾಗಿ ಕಾಣಿಸಿದರೆ ಅಂತಹ ವ್ಯಕ್ತಿ ತನ್ನ ಕಾರ್ಯಗಳಿಂದ ವಿಶ್ವವಿಖ್ಯಾತನಾಗುತ್ತಾನೆ. ಒಟ್ಟಿನಲ್ಲಿ ಕಿರುಬೆರಳು ಎಷ್ಟು ಹೆಚ್ಚು ಉದ್ದವಾಗಿರುತ್ತದೋ ಅಷ್ಟೇ ಶುಭವಾದುದೆಂದು ನಂಬಲಾಗಿದೆ.

### 5. ಹೆಬ್ಬೆರಳು (ಅಂಗೂಠ):








ಹೆಬ್ಬೆರಳು ಒಂದು ರೀತಿಯಲ್ಲಿ ಸಂಪೂರ್ಣ ಕೈಯನ್ನು ಪ್ರತಿನಿಧಿಸುತ್ತದೆ. ಕೈನ ರೇಖೆಗಳಿಗೆ ಎಷ್ಟು ಮಹತ್ವವಿರುತ್ತದೋ

ಅದಕ್ಕಿಂತಲೂ ಹೆಚ್ಚು ಮಹತ್ವ ಹೆಬ್ಬೆರಳಿಗಿರುತ್ತದೆಂದು ನಂಬಲಾಗಿದೆ.

ಹೆಬ್ಬೆರಳು ಇಚ್ಛಾಶಕ್ತಿಯ ಕೇಂದ್ರವೆಂದು ಒಪ್ಪಲಾಗಿದೆ. ಈ ಬೆರಳು ಮೂರು ಮೂಳೆಗಳಿಂದ ಕೂಡಿ ನಿರ್ಮಿತವಾದುದಾಗಿರುತ್ತದೆ. ಅಂಗೈನಿಂದ ಮುಂದಕ್ಕೆ ಹೊರಟಿರುವ ಎರಡು ಭಾಗದ ಮೂಳೆಗಳು ಸ್ಪಷ್ಟವಾಗಿ ಕಂಡುಬರುತ್ತದೆ. ಆದರೆ ಮೂರನೇ ಭಾಗ ಅಂಗೈನ ಆಂತರಿಕ ರಚನೆಯಾಗಿರುತ್ತದೆ. ಅದನ್ನು ಶುಕ್ರಪರ್ವತ ಎಂದು ಹೇಳಲಾಗುತ್ತದೆ ಮತ್ತು ಈ ಭಾಗ ಪ್ರೇಮ ಮತ್ತು ಕಾಮದ ಕೇಂದ್ರವೆಂದು ನಂಬಲಾಗಿದೆ. ಇದರ ಮೇಲ್ಭಾಗ ತರ್ಕ ಮತ್ತು ಉಗುರಿನಿಂದ ಸೇರಿರುವ ಭಾಗ ಇಚ್ಛಾಶಕ್ತಿಯ ದ್ಯೋತಕ ಎಂದು ಹೇಳಲಾಗುತ್ತದೆ.

ಹೆಬ್ಬೆರಳಿನಲ್ಲಿ

**1. ಅಧಿಕ ಕೋನದ ಹೆಬ್ಬೆರಳು, 2. ಸಮಕೋನದ ಹೆಬ್ಬೆರಳು, 3. ನ್ಯೂನಕೋನದ ಹೆಬ್ಬೆರಳು**

ಎಂದು ಮೂರು ಪ್ರಕಾರಗಳಿವೆ.

### 1. ಅಧಿಕ ಕೋನದ ಹೆಬ್ಬೆರಳು:

ಈ ಹೆಬ್ಬೆರಳು ನೋಡಲು ಸುಂದರ ಆಕೃತಿ ಉಳ್ಳದ್ದಾಗಿಯೂ, ಉದ್ದವಾಗಿಯೂ ಮತ್ತು ತೆಳುವಾಗಿಯೂ ಇರುತ್ತದೆ. ಇಂತಹ ಹೆಬ್ಬೆರಳನ್ನು ಸಾತ್ವಿಕ ಹೆಬ್ಬೆರಳೆಂದು ಕರೆಯಲಾಗುತ್ತದೆ. ಯಾವ ವ್ಯಕ್ತಿಗಳ ಕೈಯಲ್ಲಿ ಇಂತಹ ಹೆಬ್ಬೆರಳಿರುತ್ತದೋ ಅಂತಹ ವ್ಯಕ್ತಿಗಳು ಕೋಮಲ ಮತ್ತು ಮಧುರ ಸ್ವಭಾವದವರು; ಕಲಾಕಾರರು, ಸಂಗೀತಜ್ಞರು ಮತ್ತು ಸಮಾಜದಲ್ಲಿ ರಚನಾತ್ಮಕ ಕಾರ್ಯ ಮಾಡುವವರೂ ಆಗಿರುತ್ತಾರೆ. ಇಂತಹವರ ಬಾಲ್ಯ ಬಹಳ ಸಂಘರ್ಷಪೂರ್ಣವಾಗಿ ಕಳೆದರೂ ಸಹ ತಮ್ಮ ಪ್ರಯತ್ನಗಳಿಂದ ಮನೆಯ ಪರಿಸ್ಥಿತಿಯನ್ನು ತಮಗೆ ಅನುಕೂಲ ಮಾಡಿಕೊಂಡು ಮೇಲ್ಮಟ್ಟಕ್ಕೆ ಏರುತ್ತಾರೆ. ಆದರೆ ಇವರ ಮಾರ್ಗದಲ್ಲಿ ನಿರಂತರ ಅಡಚಣೆ ಉಂಟಾಗುತ್ತಲೇ ಇರುತ್ತದೆ. ಆದರೂ ಸಹ ತನ್ನ ಇಚ್ಛಾಶಕ್ತಿಯ ಬಲದಿಂದಲೇ ಜೀವನದಲ್ಲಿ ಸಫಲರಾಗುತ್ತಾರೆ.

ಈ ಪ್ರಕಾರದ ಕೈನಲ್ಲಿ ಅತ್ಯಧಿಕ ಉದ್ದವಾದ ಹೆಬ್ಬೆರಳನ್ನು ಅಶುಭ ಎಂದು ಭಾವಿಸಲಾಗಿದೆ. ಒಂದು ವೇಳೆ ಹೆಬ್ಬೆರಳಿನ ಉದ್ದ ತೋರುಬೆರಳಿನ ಎರಡನೇ ಭಾಗದ ಅರ್ಧ ಭಾಗಕ್ಕಿಂತ ಹೆಚ್ಚು ಮೇಲಕ್ಕೆ ಎದ್ದಿದ್ದರೆ ಆ ವ್ಯಕ್ತಿ ಮೂರ್ಖನಾಗಿರುತ್ತಾನೆ ಮತ್ತು ತನ್ನ ಜೀವನದಲ್ಲಿ ಸಫಲತೆಯನ್ನು ಪಡೆಯಲಾರ. ಒಂದು ವೇಳೆ ಹೆಬ್ಬೆರಳಿನ ಉದ್ದ ಸಮಾನ ಮತ್ತು ಉಚಿತ

ಅನುಪಾತದಲ್ಲಿದ್ದರೆ ಅಂತಹ ವ್ಯಕ್ತಿ ಬುದ್ಧಿವಂತನು, ಚತುರನು ಮತ್ತು ಕಲಾಪ್ರೇಮಿಯೂ ಆಗಿರುತ್ತಾನೆ. ಇಂತಹ ವ್ಯಕ್ತಿ ನಿಸ್ವಾರ್ಥದಿಂದ ಮಾನವಸೇವೆ ಮತ್ತು ಸಮಾಜಸೇವೆ ಮಾಡುತ್ತಾನೆ. ಇಂತಹ ವ್ಯಕ್ತಿ ಬಹಳ ಕಡಿಮೆ ಸಂಖ್ಯೆಯಲ್ಲಿ ಸ್ನೇಹಿತರಿದ್ದರೂ ಸಹ ಆ ಮಿತ್ರರು ಇವನಿಗೆ ಕಷ್ಟ ಬಂದಾಗ ಖಂಡಿತಾ ಸಹಾಯ ಮಾಡುವಂಥವರಾಗಿರುತ್ತಾರೆ. ಇಂತಹ ವ್ಯಕ್ತಿಗಳ ಮನಸ್ಸಿನಲ್ಲಿ ಸದಾ ಅಸ್ಥಿರತೆ ಮನೆ ಮಾಡಿಕೊಂಡಿರುತ್ತದೆ. ಇವರು ಜೀವನದಲ್ಲಿ ಸಾಕಷ್ಟು ತೊಂದರೆಗಳನ್ನು ಅನುಭವಿಸಿಯೇ ನಂತರ ಸಫಲತೆಯನ್ನು ಗಳಿಸುತ್ತಾರೆ.

## 2. ಸಮಕೋನದ ಹೆಬ್ಬೆರಳು

ಯಾವ ಹೆಬ್ಬೆರಳು ತೋರು ಬೆರಳಿಗೆ ಸೇರಿಕೊಳ್ಳುವ ಸಮಯದಲ್ಲಿ ಸಮಕೋನವನ್ನು ನಿರ್ಮಿಸುತ್ತದೋ ಅಂತಹ ಬೆರಳಿಗೆ ಸಮಕೋನದ ಹೆಬ್ಬೆರಳು ಎಂದು ಕರೆಯುತ್ತಾರೆ. ಈ ಹೆಬ್ಬೆರಳು ನೋಡುವುದಕ್ಕೆ ಸುಂದರವಾಗಿಯೂ, ಸುಭದ್ರವಾಗಿಯೂ ಮತ್ತು ಸ್ತಂಭದಂತೆ ಕಂಡುಬರುತ್ತದೆ. ಇಂತಹ ಹೆಬ್ಬೆರಳು ಹಿಂದಕ್ಕೆ ಬಾಗಿಕೊಳ್ಳುವುದಿಲ್ಲ. ಇಂತಹ ಹೆಬ್ಬೆರಳಿನ ವ್ಯಕ್ತಿಗಳು ಮಾತಿಗಿಂತಲೂ ಹೆಚ್ಚಾಗಿ ಕೃತಿಗೆ ಮತ್ತು ಪರಿಶ್ರಮಕ್ಕೆ ಹೆಚ್ಚು ಬೆಲೆ ಕೊಡುತ್ತಾರೆ. ಇಂತಹವರಿಗೆ ಎಷ್ಟು ಶೀಘ್ರ ಕೋಪ ಬರುವುದೋ ಅಷ್ಟೇ ಶೀಘ್ರವೇ ಇಳಿದುಹೋಗುವುದು. ಇವರಲ್ಲಿ ಪ್ರತೀಕಾರದ ಭಾವನೆ ಬಹಳ ಸಮಯದವರೆಗೂ ಇರುತ್ತದೆ. ಇಂತಹ ವ್ಯಕ್ತಿಗಳು ಒಳ್ಳೆಯ ದೇಶಭಕ್ತರು ಮತ್ತು ಸಮಾಜ ಸೇವಕರೂ ಆಗಿರುತ್ತಾರೆ. ಮನದಲ್ಲಿ ನಿಶ್ಚಯಿಸಿಕೊಂಡ ಕಾರ್ಯವನ್ನು ಇವರು ಮಾಡಿ ಮುಗಿಸಿಯೇ ತೀರುತ್ತಾರೆ. ಇಂಥವರು ಬೇರೆಯವರ ಅಧೀನದಲ್ಲಿ ಕೆಲಸ ಮಾಡಲು ಖಂಡಿತಾ ಬಯಸುವುದಿಲ್ಲ.

## 3. ನ್ಯೂನಕೋನದ ಹೆಬ್ಬೆರಳು

ಅಂಗೈನೊಂದಿಗೆ ಸೇರಿಕೊಳ್ಳುವ ಸಮಯದಲ್ಲಿ ತೋರು ಬೆರಳಿನ ಜೊತೆಯಲ್ಲಿ ಯಾವ ಹೆಬ್ಬೆರಳು ನ್ಯೂನಕೋನದ ಆಕಾರ ಉಂಟು ಮಾಡುತ್ತದೋ ಅವು ಇದೇ ವರ್ಗದಲ್ಲಿಯೇ ಬರುತ್ತದೆ. ಈ ರೀತಿಯ ಹೆಬ್ಬೆರಳುಗಳ ಉದ್ದ ಕಡಿಮೆ ಇರುತ್ತವೆ ಮತ್ತು ನೋಡಲು ಈ ಹೆಬ್ಬೆರಳುಗಳು ಕುರೂಪವಾಗಿ ಕಂಡುಬರುತ್ತವೆ. ಇಂತಹ ಹೆಬ್ಬೆರಳುಗಳನ್ನು ತಮೋಗುಣದ ಹೆಬ್ಬೆರಳು ಎಂದು ಕರೆಯುತ್ತಾರೆ.

ಯಾವ ವ್ಯಕ್ತಿಗಳ ಕೈಗಳಲ್ಲಿ ಈ ರೀತಿಯ ಹೆಬ್ಬೆರಳುಗಳಿರುತ್ತವೆಯೋ

ಅಂತಹ ವ್ಯಕ್ತಿಗಳು ಜೀವನದಲ್ಲಿ ನಿರಾಶೆಯ ಭಾವನೆಯನ್ನಿರಿಸಿಕೊಂಡಿರುತ್ತಾರೆ. ಆಲಸ್ಯವೆಂಬುದು ಇವರ ಜೀವನದಲ್ಲಿ ಮನೆ ಮಾಡಿಕೊಂಡಿರುತ್ತದೆ. ಯಾತ್ರೆ ಮಾಡುವುದರಲ್ಲಿ ಇಂಥವರಿಗೆ ಆಸಕ್ತಿ ಇರುವುದಿಲ್ಲ. ಯಾವ ಕಾರ್ಯವನ್ನು ಇವರು ಪೂರ್ಣವಾಗಿ ನಂಬುವುದಿಲ್ಲ. ನಿಮ್ನ ಮತ್ತು ಮಧ್ಯಮ ವರ್ಗದ ಜನಗಳಲ್ಲಿ ಇಂತಹ ಹೆಬ್ಬೆರಳುಗಳು ಬಹುಶಃ ನೋಡಲು ದೊರೆಯುತ್ತವೆ. ಇಂತಹ ವ್ಯಕ್ತಿಗಳು ದುರಭ್ಯಾಸ ಮತ್ತು ವ್ಯಸನಗಳಲ್ಲಿ ವ್ಯಸ್ತರಾಗಿರುತ್ತಾರೆ. ಈ ಕಾರಣದಿಂದಾಗಿ ಇವರಿಗೆ ಆದಾಯಕ್ಕಿಂತ ಹೆಚ್ಚಾಗಿ ವ್ಯಯವೇ ಇರುತ್ತದೆ. ಧರ್ಮ ಕರ್ಮಗಳಲ್ಲಿ ಇವರಿಗೆ ಆಸಕ್ತಿ ಇರುವುದಿಲ್ಲ. ಭೂತ-ಪ್ರೇತ ದೇವಿ-ದೇವತೆಗಳ ಬಗ್ಗೆ ಸ್ವಲ್ಪ ನಂಬಿಕೆ ಇವರಿಗಿರುತ್ತದೆ. ಕೀಳು ಮಟ್ಟದ ಕಾರ್ಯ ಮಾಡುವುದರಲ್ಲಿ ಇವರಿಗೆ ಆನಂದ ದೊರೆಯುತ್ತದೆ. ಈ ಪ್ರಕಾರದ ವ್ಯಕ್ತಿಗಳು ಭೋಗಿಗಳಾಗಿರುತ್ತಾರೆ ಮತ್ತು ಪರಸ್ತ್ರೀಯರ ಬಗ್ಗೆ ಹೆಚ್ಚು ಆಸಕ್ತಿ ಇರುತ್ತದೆ. ತಮಗಿಂತ ಕೀಳು ಮಟ್ಟದ ಅಥವಾ ಕೀಳು ಜಾತಿಯ ಸ್ತ್ರೀಯರೊಡನೆ ಇವರ ಸಂಪರ್ಕವಿರುತ್ತದೆ. ಇಂತಹ ವ್ಯಕ್ತಿಗಳು ಜೀವನದಲ್ಲಿ ಅನೇಕ ಬಾರಿ ನಿಂದಿತರಾಗುತ್ತಾರೆ. ಇಂತಹ ವ್ಯಕ್ತಿಗಳಿಂದ ಸಮಾಜಕ್ಕೆ ಯಾವುದೇ ರೀತಿಯ ಉಪಯೋಗವಿರುವುದಿಲ್ಲ.

ಹೆಬ್ಬೆರಳಿನ ಮೂರು ಭಾಗಗಳು:-

**1. ಮೇಲುಭಾಗ (ಪ್ರಥಮ ಭಾಗ), 2. ಮಧ್ಯ ಭಾಗ (ದ್ವಿತೀಯ ಭಾಗ), 3. ಕೆಳಭಾಗ (ತೃತೀಯ ಭಾಗ)**

**1. ಪ್ರಥಮ ಭಾಗ (ಊರ್ಧ್ವ ಭಾಗ)**

ಯಾವ ಮನುಷ್ಯನ ಹೆಬ್ಬೆರಳಿನ ಪ್ರಥಮ ಭಾಗ ದ್ವಿತೀಯ ಭಾಗಕ್ಕಿಂತ ಉದ್ದವಾಗಿರುತ್ತದೋ ಅಂತಹ ವ್ಯಕ್ತಿಯಲ್ಲಿ ಇಚ್ಛಾಶಕ್ತಿ ಪ್ರಬಲವಾಗಿರುತ್ತದೆ ಮತ್ತು ನಿರ್ಣಯ ತೆಗೆದುಕೊಳ್ಳುವುದರಲ್ಲಿ ಇವನು ಸ್ವತಂತ್ರನಾಗಿರುತ್ತಾನೆ. ಇಂತಹ ವ್ಯಕ್ತಿ ಯಾರದೇ ಅಧೀನದಲ್ಲಿ ಕೆಲಸ ಮಾಡುವುದಿಲ್ಲ. ಇಂತಹ ವ್ಯಕ್ತಿ ಧಾರ್ಮಿಕ ವಿಚಾರಗಳಲ್ಲಿ ಆಳವಾದ ಶ್ರದ್ಧೆಯನ್ನಿರಿಸಿಕೊಳ್ಳುವಂಥವನಾಗಿರುತ್ತಾನೆ. ಇಂತಹ ವ್ಯಕ್ತಿಯ ವ್ಯಕ್ತಿತ್ವದ ಪ್ರಭಾವ ಇತರರ ಮೇಲೆ ಶೀಘ್ರವೇ ಉಂಟಾಗುತ್ತದೆ. ಇಂತಹ ವ್ಯಕ್ತಿಗಳು ತಮ್ಮ ವ್ಯಕ್ತಿತ್ವದ ಬಲದಿಂದ ಯಾವುದೇ ಕಾರ್ಯವನ್ನು ಬೇಕಾದರೂ ಸಫಲಗೊಳಿಸುತ್ತಾರೆ. ಇಂತವರು ಯೌವ್ವನಾವಸ್ಥೆಗಿಂತಲೂ ಹೆಚ್ಚಾಗಿ ವೃದ್ಧಾಪ್ಯದಲ್ಲಿ ಸುಖಿಗಳಾಗಿರುತ್ತಾರೆ.

ಒಂದು ವೇಳೆ ಹೆಬ್ಬೆರಳಿನ ಪ್ರಥಮ ಮತ್ತು ದ್ವಿತೀಯ ಭಾಗ ಒಂದೇ

ಉದ್ದ ಮತ್ತು ದಪ್ಪ ಇದ್ದರೆ ಅಂತಹ ವ್ಯಕ್ತಿ ಸಮಾಜದಲ್ಲಿ ಗೌರವಾನ್ವಿತ ಸ್ಥಾನ ಪಡೆದುಕೊಳ್ಳುವುದರಲ್ಲಿ ಸಫಲನಾಗುತ್ತಾನೆ. ಇಂತಹ ವ್ಯಕ್ತಿಗಳು ಸುಲಭವಾಗಿ ಮೋಸಹೋಗುವವರೂ ಅಲ್ಲಾ ಮತ್ತು ಇತರರಿಗೆ ಮೋಸ ಮಾಡುವಂಥವರೂ ಅಲ್ಲಾ. ಇವರು ಎಂತಹುದೇ ಕಷ್ಟ ಪರಿಸ್ಥಿತಿಯನ್ನೂ ಸಹ ನಗುನಗುತ್ತಲೇ ಎದುರಿಸುತ್ತಾರೆ.

## 2. ದ್ವಿತೀಯ ಭಾಗ (ಮಧ್ಯಮ ಭಾಗ):

ಹೆಬ್ಬೆರಳಿನ ಎರಡನೇ ಭಾಗ ಅರ್ಥಾತ್ ದ್ವಿತೀಯ ಭಾಗ ತರ್ಕ ಶಕ್ತಿಯ ಸ್ಥಾನವೆಂದು ನಂಬಲಾಗಿದೆ. ಒಂದು ವೇಳೆ ದ್ವಿತೀಯ ಭಾಗ ಪ್ರಥಮ ಭಾಗಕ್ಕಿಂತ ದೊಡ್ಡದಾಗಿ ಮತ್ತು ಬಲಿಷ್ಠವಾಗಿದ್ದರೆ ಅಂತಹ ವ್ಯಕ್ತಿಯಲ್ಲಿ ತರ್ಕ ಶಕ್ತಿ ಅವಶ್ಯಕತೆಗಿಂತಲೂ ಹೆಚ್ಚಾಗಿ ಇರುತ್ತದೆ. ಆದರೆ ಇಂಥವರು ಉಚಿತ ಮತ್ತು ಅನುಚಿತವಾದ ಎಲ್ಲಾ ಮಾತುಗಳನ್ನೂ ತಮ್ಮ ತರ್ಕಶಕ್ತಿಯ ಆಸರೆಯಿಂದ ಒಪ್ಪಿಸುವ ಪ್ರಯತ್ನ ಮಾಡುತ್ತಾರೆ. ಸಭ್ಯ ಸಮಾಜದಲ್ಲಿ ಇಂತವರಿಗೆ ಗೌರವ ಸಿಗುವುದಿಲ್ಲ. ಇವರನ್ನು ಜನ ಬೊಗಳೆಯವನೆಂದು, ವಾಚಾಳಿ ಎಂದು ಕರೆಯುತ್ತಾರೆ. ಯಾರದ್ದಾದರೂ ಕೈನಲ್ಲಿ ಈ ಭಾಗ ತೆಳುವಾಗಿದ್ದರೆ ಅಂತಹ ವ್ಯಕ್ತಿಗಳು ತಮ್ಮ ಮೆದುಳಿನಿಂದ ಕೆಲಸ ತೆಗೆದುಕೊಳ್ಳದೆ ಮನಸ್ಸಿಗೆ ಬಂದದ್ದನ್ನು ಬಾಯಲ್ಲಿ ಕಕ್ಕಿಬಿಡುತ್ತಾರೆ.

ಒಂದು ವೇಳೆ ಪ್ರಥಮ ಮತ್ತು ದ್ವಿತೀಯ ಭಾಗ ಒಂದೇ ಸಮನಾದ ಉದ್ದ ಮತ್ತು ಒಂದೇ ಸಮನಾದ ದಪ್ಪ ಮತ್ತು ಒಂದೇ ಸಮನಾದ ಅಗಲವಿದ್ದರೆ ಅಂತಹ ವ್ಯಕ್ತಿಗಳು ಶಾಂತ ಮಸ್ತಿಷ್ಕರೆಂದು ಕರೆಯಲ್ಪಡುತ್ತಾರೆ. ಇಂತವರು ಕ್ಷಣಿಕ ಆವೇಶದಲ್ಲಿ ಕೋಪಗೊಳ್ಳುವುದೂ ಇಲ್ಲಾ ಮತ್ತು ಕ್ಷಣಿಕ ಹೊಗಳಿಕೆಯಿಂದ ಉಬ್ಬಿಹೋಗುವುದೂ ಇಲ್ಲಾ. ಜೀವನದಲ್ಲಿ ಇವರು ಪ್ರತಿಯೊಂದು ಹೆಜ್ಜೆಯನ್ನೂ ಬಹಳ ಎಚ್ಚರಿಕೆಯಿಂದ ಇಡುವುದರಿಂದ ಹೆಚ್ಚು ಮೋಸಹೋಗುವುದಿಲ್ಲ. ಇವರಲ್ಲಿ ಆತ್ಮ ವಿಶ್ವಾಸವೂ ಪ್ರಬಲವಾಗಿರುತ್ತದೆ. ಒಟ್ಟಿನಲ್ಲಿ ಇವರು ಸಭ್ಯರು, ಮೇಲ್ಮಟ್ಟದ ವ್ಯಾಪಾರಿಗಳು, ಮಹತ್ವಪೂರ್ಣ ಪದವಿಯಲ್ಲಿ ಅಧಿಕಾರಿಗಳೂ ಮತ್ತು ಹೆಸರಾಂತ ಕಲಾಕಾರರೂ ಆಗಿರುತ್ತಾರೆ.

ಒಂದು ವೇಳೆ ಪ್ರಥಮ ಭಾಗವು ದ್ವಿತೀಯ ಭಾಗಕ್ಕಿಂತ ನಿಶ್ಯಕ್ತವಾಗಿ, ತೆಳುವಾಗಿ ಮತ್ತು ದುರ್ಬಲವಾಗಿದ್ದರೆ ಅಂತಹ ವ್ಯಕ್ತಿಗಳು ತಮ್ಮ ಇಚ್ಛೆಯಂತೆ ನಡೆಯದೆ ಬೇರೆಯವರ ಅಧೀನತೆಯಲ್ಲಿ ನಡೆಯುವುದನ್ನು ಇಷ್ಟಪಡುತ್ತಾರೆ. ಸರಿಯಾಗಿ ಹೇಳುವುದಾದರೆ ಇವರು ಸ್ವತಃ ಯಾವ

ನಿರ್ಧಾರವನ್ನು ತೆಗೆದುಕೊಳ್ಳುವುದಿಲ್ಲ. ಇವರು ಯೋಜನೆಯಿಲ್ಲದೆ ಕೆಲಸವನ್ನು ಪ್ರಾರಂಭಿಸುವುದರಿಂದ ಸಫಲತೆ ಪಡೆಯಲು ಸಾಧ್ಯವಾಗುವುದಿಲ್ಲ. ಇವರ ಆತ್ಮ ನಿರ್ಬಲವಾದುದಾಗಿರುತ್ತದೆ. ಇವರ ವಿಚಾರಗಳು ಅಸ್ಥಿರವಾದುದಾಗಿರುತ್ತವೆ. ಇವರು ಜಗಳಗಂಟಿ ಸ್ವಭಾವದವರಾಗಿರುತ್ತಾರೆ. ವಾಸ್ತವವಾಗಿ ಇಂಥವರು ಅದೃಷ್ಟವಾದಿಗಳಾಗಿರುತ್ತಾರೆ. ಇಂಥವರು ಸೋಮಾರಿಗಳಾಗಿರುತ್ತಾರೆಂಬುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲ.

### 3. ತೃತೀಯಾ ಭಾಗ (ಅಧೋ ಭಾಗ) :

ಹೆಬ್ಬೆರಳಿನ ಮೂರನೇ ಭಾಗವನ್ನು ಶುಕ್ರಸ್ಥಾನ ಎಂದು ಕರೆಯುತ್ತಾರೆ. ಮೊದಲ ಎರಡು ಭಾಗಗಳಿಗಿಂತ ಈ ಭಾಗ ಉನ್ನತವಾದುದು, ಸದೃಢವಾದುದು ಮತ್ತು ಸುಂದರವಾದುದು ಆಗಿರುತ್ತದೆ. ಈ ಭಾಗ ಸಾಮಾನ್ಯ ರೀತಿಯಲ್ಲಿ ಹೆಚ್ಚು ಎತ್ತರಕ್ಕೆ ಎದ್ದಿದ್ದರೆ ಸುಂದರ ಮತ್ತು ಕಿಂಚಿತ್ ಗುಲಾಬಿ ಕಾಂತಿಯನ್ನು ಪಡೆದುಕೊಂಡಿರುವುದಾಗಿರುತ್ತದೆ. ಇಂತಹ ವ್ಯಕ್ತಿಗಳು ಪ್ರೇಮ ಮತ್ತು ಸ್ನೇಹದ ಕ್ಷೇತ್ರದಲ್ಲಿ ಸಾಕಷ್ಟು ಮೇಲೇರಿರುತ್ತಾರೆ. ಇಂತಹ ವ್ಯಕ್ತಿಗಳು ಸಮಾಜದಲ್ಲಿ ಗೌರವವನ್ನು ಪಡೆದುಕೊಳ್ಳುತ್ತಾರೆ ಮತ್ತು ಸ್ನೇಹಿತರಲ್ಲಿ ಸಾಕಷ್ಟು ಲೋಕಪ್ರಿಯತೆಯನ್ನು ಸಂಪಾದಿಸುತ್ತಾರೆ. ಈ ವ್ಯಕ್ತಿಗಳು ಕಷ್ಟದ ಸಮಯದಲ್ಲಿಯೂ ಮುಗುಳ್ನಗುತ್ತಿರುತ್ತಾರೆ ಮತ್ತು ತಮ್ಮ ಪ್ರಯತ್ನಗಳಿಂದ ಜೀವನದಲ್ಲಿ ಸಂಪೂರ್ಣ ಸಫಲತೆಯನ್ನು ಪಡೆದೇ ತೀರುತ್ತಾರೆ.

ಒಂದು ವೇಳೆ ಶುಕ್ರ ಪರ್ವತ ಅಧಿಕ ಎದ್ದಿರುವಂತೆ ಕಂಡರೆ ಅಂತಹ ವ್ಯಕ್ತಿ ಭೋಗಿ ಮತ್ತು ಕಾಮಿಯಾಗಿರುತ್ತಾನೆ. ಪ್ರೀತಿ ಮತ್ತು ಸೌಂದರ್ಯಕ್ಕೆ ಇಂತಹ ವ್ಯಕ್ತಿ ಹಿಂದೆ ಮುಂದೆ ಆಲೋಚಿಸದೆ ಏನು ಬೇಕಾದರೂ ಮಾಡಲು ಸಿದ್ಧನಾಗಿರುತ್ತಾನೆ. ಒಂದು ವೇಳೆ ಈ ಕ್ಷೇತ್ರ ಅದುಮಿದ್ದಂತೆ ಕಂಡರೆ ಅಂತಹ ವ್ಯಕ್ತಿ ಕಡಿಮೆ ಉನ್ನತಿಯನ್ನು ಗಳಿಸುತ್ತಾನೆ ಅಥವಾ ಈ ಕ್ಷೇತ್ರದ ಮೇಲೆ ಅವಶ್ಯಕತೆಗಿಂತ ಹೆಚ್ಚು ರೇಖೆಗಳು ಮತ್ತು ಜಾಲಗಳು ಕಂಡುಬಂದರೆ ಇಂತಹ ವ್ಯಕ್ತಿ ನಿರಾಶವಾದಿ ಪ್ರವೃತ್ತಿಯವನಾಗುತ್ತಾನೆ. ಇಂತಹ ವ್ಯಕ್ತಿಯ ಪ್ರೇಮವೂ ಸಹ ಶುದ್ಧಪ್ರೇಮವಾಗಿರದೆ ಆ ಪ್ರೀತಿಯ ಹಿಂದೆ ಸ್ವಾರ್ಥ ಮತ್ತು ಕಾಮವಾಂಛೆ ಅಡಗಿಕೊಂಡಿರುತ್ತದೆ. ಇಂತವರು ದೊಡ್ಡ ದೊಡ್ಡ ಯೋಜನೆಯನ್ನು ಹಾಕುತ್ತಾರೆ. ಹಗಲುಕನಸು ಕಾಣುತ್ತಾರೆ. ಆದರೆ ಇವರು ತಮ್ಮ ಉದ್ದೇಶ್ಯಗಳಲ್ಲಿ ಪೂರ್ಣ ಸಫಲತೆಯನ್ನು ಪಡೆಯಲಾರರು. ಇಂತವರು ಭಾವನಾಶೂನ್ಯರಾದ್ದರಿಂದ ಸಮಾಜದಲ್ಲಿ

ಸಂಪೂರ್ಣ ಯಶಸ್ಸು ಸಿಗುವುದಿಲ್ಲ. ಇವರ ಜೀವನದಲ್ಲಿ ಸಾಕಷ್ಟು ತೊಂದರೆಗಳನ್ನು ಎದುರಿಸಬೇಕಾಗುತ್ತದೆ.

**ಇನ್ನೂ ಹಲವು ಪ್ರಕಾರದ ಹೆಬ್ಬೆರಳುಗಳು:**

**1. ಉದ್ದನೆಯ ಹೆಬ್ಬೆರಳು**

ಇಂತಹ ಬೆರಳುಳ್ಳ ವ್ಯಕ್ತಿಗಳು ಸ್ವೇಚ್ಛಾಚಾರಿಗಳು, ಆತ್ಮ ನಿರ್ಭರರು ಮತ್ತು ಬೇರೆಯವರ ಮೇಲೆ ತಮ್ಮ ಅಧಿಕಾರವನ್ನಿಟ್ಟುಕೊಳ್ಳುವವ ರಾಗಿರುತ್ತಾರೆ. ಇವರ ಜೀವನದಲ್ಲಿ ಭಾವನೆಗಳ ಬದಲಾಗಿ ಬುದ್ಧಿ ಹೆಚ್ಚಿರುತ್ತದೆ ಮತ್ತು ಇವರನ್ನು ಒಂದು ರೀತಿಯಲ್ಲಿ ಬುದ್ಧಿಜೀವಿಗಳು ಎಂದು ಕರೆಯಬಹುದು. ಗಣಿತ, ತಾಂತ್ರಿಕತೆಯ ಬಗ್ಗೆ ಇವರಿಗೆ ವಿಶೇಷ ಆಸಕ್ತಿ ಇರುತ್ತದೆ.

**2. ಚಿಕ್ಕದಾದ ಹೆಬ್ಬೆರಳು**

ಇಂತಹ ವ್ಯಕ್ತಿ ತನ್ನ ಬುದ್ಧಿಯಿಂದ ಬಹಳ ಕಡಿಮೆ ಕೆಲಸ ತೆಗೆದುಕೊಳ್ಳುವವನಾಗಿರುತ್ತಾನೆ. ಆದರೆ ಬೇರೆಯವರಿಂದ ಪ್ರಭಾವಿತನಾಗಿ ಕೆಲಸ ಮಾಡುತ್ತಾನೆ. ಕಾವ್ಯ, ಚಿತ್ರಕಲೆ, ಸಂಗೀತ ಮುಂತಾದವುಗಳಲ್ಲಿ ಇವರಿಗೆ ವಿಶೇಷ ಆಸಕ್ತಿ ಇರುತ್ತದೆ.

**3. ಬಿರುಸಾದ ಹೆಬ್ಬೆರಳು**

ಇಂತಹ ವ್ಯಕ್ತಿಗಳು ಹಠ ಸ್ವಭಾವದವರೂ ಹಾಗೂ ಅತ್ಯಂತ ಜಾಗರೂಕತೆಯುಳ್ಳವರೂ ಆಗಿರುತ್ತಾರೆ. ಯಾವುದೇ ಮಾತನ್ನು ತಮ್ಮ ಹೊಟ್ಟೆಯಲ್ಲಿಯೇ ಅಡಗಿಸಿಟ್ಟುಕೊಳ್ಳುವ ವಿಶೇಷ ಸಾಮರ್ಥ್ಯವಿರುತ್ತದೆ. ಇವರ ಜೀವನದಲ್ಲಿ ಭಾವುಕತೆಯ ಅಭಾವವಿರುತ್ತದೆ ಮತ್ತು ಬುದ್ಧಿಯ ಬಲದಿಂದಲೇ ಇವರು ಸಫಲತೆಯನ್ನು ಪಡೆಯುತ್ತಾರೆ.

**4. ಬಳುಕುವ ಹೆಬ್ಬೆರಳು**

ಯಾವ ವ್ಯಕ್ತಿಯ ಕೈಯಲ್ಲಿ ಇಂತಹ ಹೆಬ್ಬೆರಳು ಇರುವುದೋ ಆ ವ್ಯಕ್ತಿ ಹಣ ಸಂಗ್ರಹ ಮಾಡುವುದರಲ್ಲಿ ವಿಶೇಷ ಆಸಕ್ತಿಯನ್ನು ಹೊಂದಿರುತ್ತಾನೆ ಮತ್ತು ಪರಿಸ್ಥಿತಿಗಳಿಗೆ ತಕ್ಕಂತೆ ತನ್ನನ್ನು ತಾನು ಅಳವಡಿಸಿಕೊಳ್ಳುವ ಸಾಮರ್ಥ್ಯವನ್ನು ಪಡೆದಿರುತ್ತಾನೆ.

ವಿಭಿನ್ನ ಪ್ರಕಾರದ ಅಗ್ರಭಾಗವುಳ್ಳ ಬೆರಳುಗಳು:

ಬೆರಳುಗಳ ಅಗ್ರಭಾಗವೂ ಸಹ ಭವಿಷ್ಯ ಕಥನದಲ್ಲಿ ಬಹಳ

ಮಹತ್ವದ್ದಾಗಿರುತ್ತದೆ.

ಹಸ್ತರೇಖೆಯು ಶಾಸ್ತ್ರದ ಅನುಸಾರ ಈ ಅಗ್ರಭಾಗದ ನಾಲ್ಕು ಪ್ರಕಾರಗಳಿವೆ.



1. ತೀಕ್ಷ್ಣ ಬೆರಳುಗಳು, 2. ಚಪ್ಪಟೆಯಾದ ಬೆರಳುಗಳು, 3. ಚೂಪಾದ ಬೆರಳುಗಳು, 3. ವರ್ಗಾಕಾರದ ಬೆರಳುಗಳು

**1. ತೀಕ್ಷ್ಣ ಬೆರಳುಗಳು**

ಯಾರ ಕೈಗಳಲ್ಲಿ ತೀಕ್ಷ್ಣ ಬೆರಳುಗಳು ಇರುತ್ತವೋ ಅಥವಾ ಯಾರ ಬೆರಳಿನ ಅಗ್ರಭಾಗ ತೀಕ್ಷ್ಣವಾಗಿರುತ್ತದೋ ಅಂತಹ ವ್ಯಕ್ತಿಗಳು ಅತ್ಯಂತ

ಶ್ರೇಷ್ಠರು ಮತ್ತು ಸಮಾಜದಲ್ಲಿ ಅಗ್ರಗಣ್ಯರಾಗಿರುತ್ತಾರೆ. ಇಂತಹ ವ್ಯಕ್ತಿಗಳು ದಾರ್ಶನಿಕರು, ಕಲಾಕಾರರು, ಸಂಗೀತಕಾರರು ಮತ್ತು ತಮ್ಮ ಆತ್ಮದ



ಅನುಸಾರ ನಡೆಯುವವರಾಗಿರುತ್ತಾರೆ. ಇಂತವರ ಹೃದಯದಲ್ಲಿ ತಿರಸ್ಕಾರ, ಕ್ರೋಧ ಮತ್ತು ಅವಿವೇಕತನ ಇರುವದಿಲ್ಲ. ಬದಲಾಗಿ ಇವರ ಹೃದಯ ದಯೆ, ಪ್ರೀತಿ ಮತ್ತು ಸ್ನೇಹದಿಂದ ತುಂಬಿರುತ್ತದೆ.

ಆದರೆ ಅತ್ಯಧಿಕ ತೀಕ್ಷ್ಣ ಬೆರಳುಗಳು ಮೆದುಳಿನ ಹುಚ್ಚುತನವನ್ನು ಸ್ಪಷ್ಟಪಡಿಸುತ್ತವೆ. ಇಂತಹ ವ್ಯಕ್ತಿಗಳು ಕೇವಲ ಕಲ್ಪನೆಯಲ್ಲೇ ಮುಳುಗಿರುತ್ತಾರೆ. ಇಂತವರಿಗೆ ಜೀವನದಲ್ಲಿ ಸಫಲತೆ ಬಹಳ ಕಡಿಮೆಯೇ ಇರುತ್ತದೆ. ತಾಂತ್ರಿಕರ ಬೆರಳುಗಳು ಸಾಮಾನ್ಯವಾಗಿ ಇದೇ ರೀತಿ ಕಾಣಲು ಸಿಗುತ್ತದೆ. ಇಂತಹ ವ್ಯಕ್ತಿಗಳು ಹೆಚ್ಚು ಉನ್ನತಿ ಪಡೆಯುತ್ತಾರೆ.

**2. ಚಪ್ಪಟೆಯಾದ ಬೆರಳುಗಳು**

ಚಪ್ಪಟೆಯಾದ ಬೆರಳುಗಳು ಕಾರ್ಯಕುಶಲತೆ ಮತ್ತು ಸ್ಫೂರ್ತಿಯ ಸೂಚಕವಾಗಿರುತ್ತದೆ. ಇಂತಹ ವ್ಯಕ್ತಿಗಳು ತಮ್ಮ ಕಾರ್ಯಗಳಲ್ಲಿ ನಿರಂತರ ತೊಡಗಿಕೊಂಡಿರುತ್ತಾರೆ ಮತ್ತು ಯಾವುದೇ ಕಾರ್ಯವನ್ನು ಮಧ್ಯದಲ್ಲೇ ಕೈ ಬಿಡುವುದಿಲ್ಲ. ಇವರಲ್ಲಿ ತುಂಬು ಆತ್ಮವಿಶ್ವಾಸವಿರುತ್ತದೆ. ಇಂತಹ ವ್ಯಕ್ತಿಗಳು ಸಫಲ ಯುದ್ಧವಿಶಾರದರು, ಸಂಗೀತಕಾರರು, ಕುಶಲ ಶಿಲ್ಪಿಗಳು, ಕುಶಲ ಆಟಗಾರರು ಮತ್ತು ಶ್ರೇಷ್ಠ ವಿದ್ವಾಂಸರಾಗಿರುತ್ತಾರೆ. ಕಲಿಯಬೇಕೆಂಬ ವಿಶೇಷ ಪ್ರವೃತ್ತಿ ಇವರಲ್ಲಿರುತ್ತದೆ. ಇವರ ಜೀವನದಲ್ಲಿ

ವ್ಯವಸ್ಥೆ ಮತ್ತು ಕ್ರಮಬದ್ಧತೆ ಇರುತ್ತದೆ. ಇಂತಹ ವ್ಯಕ್ತಿಗಳು ಧರ್ಮದ ಪ್ರತಿ ಅಂಧವಿಶ್ವಾಸವನ್ನಿಟ್ಟುಕೊಂಡಿರುವುದಿಲ್ಲ. ಇಂತವರು ಜೀವನದ ಪ್ರತ್ಯೇಕ ಕ್ಷೇತ್ರದಲ್ಲಿ ಉದಾರತೆಯಿಂದ ಕೆಲಸ ತೆಗೆದುಕೊಳ್ಳುತ್ತಾರೆ.



ವಾಸ್ತವವಾಗಿ ಇಂತಹ ವ್ಯಕ್ತಿಗಳೇ ತಮ್ಮ ಕಾರ್ಯಗಳಿಂದ ತಮ್ಮ ಸಮಾಜಕ್ಕೆ ಕೆಲವು ಹೊಸ ಯೋಗದಾನ ಮಾಡುವುದರಲ್ಲಿ ಸಫಲತೆಯನ್ನು ಪಡೆಯುತ್ತಾರೆ.

### 3. ಚೂಪಾದ ಬೆರಳುಗಳು

ಈ ಬೆರಳುಗಳು ಮಾನವನ ಸುಂದರ ವಿಚಾರಗಳು ಮತ್ತು ಸುಂದರ ಕಾರ್ಯಗಳ ಕಡೆಗೆ ಇಂಗಿತ ಮಾಡುತ್ತವೆ. ಇಂತಹ ವ್ಯಕ್ತಿಗಳು ಯಾವುದೇ ಕಾರ್ಯವನ್ನು ಮಾಡಿದರೂ ಕ್ರಮಬದ್ಧವಾಗಿ ಮಾಡುವರು. ಇವರ ಜೀವನದಲ್ಲಿ ಏರಿಳಿತಗಳು ಒಂದೇ ಸಮನಾಗಿ ಇರುತ್ತವೆ. ಒಂದು ಬಾರಿ ಇವರು ಸಂತೋಷದ ಶಿಖರದಲ್ಲಿರುತ್ತಾರೆ ಮತ್ತೊಂದು ಬಾರಿ ನಿರಾಶೆಯ ಕಂದಕದಲ್ಲಿರುತ್ತಾರೆ. ಇವರ ವೈವಾಹಿಕ ಜೀವನ ಅಸಫಲತೆಯಿಂದಲೇ ಕೂಡಿರುತ್ತದೆ.

ಬೆರಳುಗಳ ಅಗ್ರಭಾಗ ಹೆಚ್ಚು ಚೂಪಾಗಿರುವುದು ಅಷ್ಟೊಂದು ಶುಭವಾದುದಲ್ಲ. ಇಂಥಹ ವ್ಯಕ್ತಿಗಳಲ್ಲಿ ಆತ್ಮವಿಶ್ವಾಸ ಬಹು ಕಡಿಮೆ ಇರುತ್ತದೆ. ಇಂಥವರು ತಮ್ಮ ಭಾವನೆಗಳ ಅನುಸಾರವಾಗಿಯೇ

ನಡೆಯುತ್ತಾರೆ.

ಇಂತಹ ವ್ಯಕ್ತಿಗಳು ಸೋಮಾರಿಗಳು, ಕಾಮುಕರು ಎಂದು



ಕರೆಯಲ್ಪಡುತ್ತಾರೆ.

ಇಂತಹ ವ್ಯಕ್ತಿಗಳು ತಮ್ಮ ಹೊಟ್ಟೆಯಲ್ಲಿ ರಹಸ್ಯವನ್ನು ಅಡಗಿಸಿಟ್ಟುಕೊಳ್ಳಲಾರರು.

### 4. ವರ್ಗಾಕಾರದ ಬೆರಳುಗಳು

ಯಾವ ವ್ಯಕ್ತಿಗಳ ಕೈಗಳಲ್ಲಿ ವರ್ಗಾಕಾರದ ಬೆರಳುಗಳು ಇರುತ್ತವೋ ಅಂತಹ ವ್ಯಕ್ತಿಗಳು ಜೀವನದಲ್ಲಿ ದೂರದರ್ಶಿಗಳು ಮತ್ತು ನಿಯಮತೆಯಿಂದ ಕೆಲಸ ಮಾಡುವವರೂ ಆಗಿರುತ್ತಾರೆ. ಇಂತಹ ವ್ಯಕ್ತಿಗಳು ಹೆಚ್ಚಾಗಿ ' ವ್ಯಾಪಾರಿ ವರ್ಗದವರಾಗಿರುತ್ತಾರೆ. ಇವರು ಪ್ರತಿಯೊಂದು ಕಾರ್ಯದ ಯೋಜನೆಯನ್ನು ಬಹಳ ಚೆನ್ನಾಗಿ ಆಲೋಚಿಸಿ ಮಾಡುತ್ತಾರೆ. ಇಂತಹ ವ್ಯಕ್ತಿಗಳು ಬಹಳ ಜಾಗರೂಕತೆಯಿಂದ ಮುಂದೆ ಹೆಜ್ಜೆ ಇಡುತ್ತಾರೆ. ಇಂತವರು ಸ್ವತಃ ಪರಿಶ್ರಮಪಡುವುದರ ಜೊತೆಗೆ ಬೇರೆಯವರಿಂದಲೂ ಕೆಲಸ ತೆಗೆದುಕೊಳ್ಳುವ ಯುಕ್ತಿಯನ್ನು ಬಲ್ಲವರಾಗಿರುತ್ತಾರೆ. ಇವರಲ್ಲಿ ಸ್ವಚ್ಛತೆ, ಸಮಯಪಾಲನೆ, ಆತ್ಮವಿಶ್ವಾಸ ಮತ್ತು ಕೊಟ್ಟ ಮಾತು ತಪ್ಪದಂತಹ ವಿಶೇಷ ಗುಣಗಳಿರುತ್ತವೆ. ಇಂತಹ ವ್ಯಕ್ತಿಗಳು ಒಳ್ಳೆಯ ಗಣಿತಜ್ಞರು, ಇತಿಹಾಸಕಾರರು ಮತ್ತು

ಕವಿಗಳಾಗಿರುತ್ತಾರೆ. ಇಂತಹ ವ್ಯಕ್ತಿಗಳೇ ಜೀವನದಲ್ಲಿ ವಿಶೇಷ ಸಫಲತೆಯನ್ನು ಪಡೆದುಕೊಳ್ಳಬಲ್ಲರು.

**ಬೆರಳುಗಳಿಗಿರುವ ಅಂತರ:** ಎರಡು ಬೆರಳುಗಳ ಖಾಲಿ ಸ್ಥಾನವೂ



ಸಹ ಮಹತ್ವದ್ದಾಗಿರುತ್ತದೆ. ಒಂದು ಹೆಬ್ಬೆರಳು ಮತ್ತು ತೋರು ಬೆರಳಿನ ಮಧ್ಯೆ ಹೆಚ್ಚು ದೂರ ಅಥವಾ ಅಂತರವಿದ್ದರೆ ಅಂತಹ ವ್ಯಕ್ತಿಯಲ್ಲಿ ಮಾನವೀಯ ಗುಣ ತುಂಬಿಕೊಂಡಿರುತ್ತದೆ ಮತ್ತು ಅಂಥವರಲ್ಲಿ ಪ್ರೇಮ, ದಯೆ, ಕ್ಷಮೆ ಮುಂತಾದ ಮಾನವೀಯ ಗುಣಗಳು ಸಹಜವಾಗಿ ಸ್ವಾಭಾವಿಕವಾಗಿ ಇರುತ್ತವೆ. ಒಂದು ವೇಳೆ ತೋರುಬೆರಳು ಮತ್ತು ಮಧ್ಯದ ಬೆರಳಿನ ಮಧ್ಯೆ ಖಾಲಿಸ್ಥಾನ ಕಾಣಿಸಿದರೆ ಅಂತಹ ವ್ಯಕ್ತಿ ತನ್ನ ವಿಚಾರಗಳಲ್ಲಿ ಸ್ವತಂತ್ರನಾಗಿರುತ್ತಾನೆ ಮತ್ತು ತನ್ನ ಮಾತನ್ನು ಯಾರ ಎದುರಿಗೆ ಹೇಳುವುದ್ಕೂ ಹಿಂಜರಿಯುವುದಿಲ್ಲ. ಮಧ್ಯದ ಬೆರಳು ಮತ್ತು ಉಂಗುರದ ಬೆರಳಿನ ಮಧ್ಯೆ ಖಾಲಿ ಸ್ಥಳವಿದ್ದರೆ ಅಂತಹ ವ್ಯಕ್ತಿಯು ಬೇಜವಾಬ್ದಾರಿತನ ಮತ್ತು ಅಸಭ್ಯತೆಯನ್ನು ವ್ಯಕ್ತಪಡಿಸುತ್ತದೆ. ಇದೇ ರೀತಿ ಉಂಗುರದ ಬೆರಳು ಮತ್ತು ಕಿರುಬೆರಳಿನ ಮಧ್ಯೆ ಸಂದು ಅಂದರೆ ಖಾಲಿಸ್ಥಾನವಿದ್ದರೆ ಅಂತಹ ವ್ಯಕ್ತಿ ಕೊಲೆಗಾರ ಮತ್ತು ನಿರ್ದಯಿಯಾಗಿರುತ್ತಾನೆ.

**ಬೆರಳುಗಳ ದರ್ಶನ** ಒಂದು ವೇಳೆ ಬೆರಳುಗಳು ಒಳಗಡೆಯ ಕಡೆಗೆ ಬಾಗಿದ್ದರೆ ಅಂತಹ ವ್ಯಕ್ತಿ ಪ್ರಾಪಂಚಿಕ ವ್ಯವಹಾರದಲ್ಲಿ ಅತ್ಯಂತ ಚತುರರಾಗಿರುತ್ತಾರೆ ಹಾಗೂ ಇಂತಹ ವ್ಯಕ್ತಿ ಪ್ರತ್ಯೇಕ ಕಾರ್ಯವನ್ನು ಅಚ್ಚುಕಟ್ಟಾಗಿ ನಿರ್ವಹಿಸಬಲ್ಲವರಾಗಿರುತ್ತಾರೆ.

ಒಂದು ವೇಳೆ ಬೆರಳುಗಳ ಬಾಗುವಿಕೆ ಹೊರಭಾಗದ ಕಡೆಗೆ ಇದ್ದರೆ ಅಂತಹ ವ್ಯಕ್ತಿಗಳ ವ್ಯಕ್ತಿಗಳ ಹೃದಯ ಉದಾರವಾದುದಾಗಿರುತ್ತದೆ. ಇವರು ತಮ್ಮ ವಿಚಾರಗಳಲ್ಲಿ ಶ್ರೀಮಂತರಾಗಿರುತ್ತಾರೆ ಮತ್ತು ಕೊಟ್ಟ ಮಾತನ್ನು ಉಳಿಸಿಕೊಳ್ಳುವ ಪ್ರಯತ್ನ ಮಾಡುತ್ತಾರೆ. ಒಂದು ವೇಳೆ ಬೆರಳುಗಳು







ಆವಶ್ಯಕತೆಗಿಂತ ಹೆಚ್ಚು ಹೊರಭಾಗಕ್ಕೆ ಬಾಗಿದ್ದರೆ ಅಂತಹ ವ್ಯಕ್ತಿ ಬೇಜವಾಬ್ದಾರಿಯುವನಾಗಿರುತ್ತಾನೆ.

ಒಂದು ವೇಳೆ ಬೆರಳುಗಳು ವಕ್ರವಾಗಿ ಮತ್ತು ಕುರೂಪವಾಗಿದ್ದರೆ ಅಂತಹ ವ್ಯಕ್ತಿ ಅಪರಾಧಿ ವರ್ಗದವನಾಗಿರುತ್ತಾನೆ ಮತ್ತು ಅಪರಾಧ ಪೂರ್ಣ ಕಾರ್ಯಗಳಲ್ಲಿ ಆಸಕ್ತಿಯನ್ನಿಟ್ಟುಕೊಂಡಿರುತ್ತಾನೆ.

ಯಾರ ಬೆರಳುಗಳು ದಪ್ಪವಾಗಿಯೂ ಮತ್ತು ಊದಿಕೊಂಡಿಯೂ ಇರುತ್ತದೋ ಅಂತಹ ವ್ಯಕ್ತಿ ನಿರ್ಧನನಾಗಿರುತ್ತಾನೆ. ಇಂತವರು ಸಂಪಾದಿಸುವುದಕ್ಕಿಂತ ಹೆಚ್ಚು ಖರ್ಚು ಮಾಡುತ್ತಾರೆ.

ಒಂದು ವೇಳೆ ಬೆರಳುಗಳು ಚಪ್ಪಟೆಯಾಗಿದ್ದರೆ ಅಂತಹ ವ್ಯಕ್ತಿ ಸೇವಾಕಾರ್ಯಗಳಲ್ಲಿ ಸಫಲತೆಯನ್ನು ಪಡೆಯುತ್ತಾನೆ. ಜೀವನದಲ್ಲಿ ಮೇಲ್ಮಟ್ಟದ ಅಧಿಕಾರಿ ಪದವಿಯನ್ನು ಪಡೆದು ಪ್ರಶಂಸೆಯನ್ನು ಗಳಿಸುತ್ತಾನೆ.

ಯಾರ ಬೆರಳುಗಳು ಒಂದೇ ರೀತಿ ನೇರವಾಗಿ ಇರುತ್ತದೋ ಅಂತಹ ವ್ಯಕ್ತಿ ಭಾಗ್ಯಶಾಲಿಯಾಗಿರುತ್ತಾನೆ ಮತ್ತು ಅವನಿಗೆ ಸಮಾಜದಲ್ಲಿ ವಿಶೇಷ ಗೌರವ ದೊರೆಯುತ್ತದೆ.

ಒಂದು ವೇಳೆ ಎಲ್ಲಾ ಬೆರಳುಗಳು ಗಂಟುಗಳುಳ್ಳದ್ದಾಗಿ ಮತ್ತು ತಗ್ಗುದಿಣ್ಣೆ ಉಳ್ಳದ್ದಾಗಿ ಇರುತ್ತದೋ ಅಂತಹ ವ್ಯಕ್ತಿ ವಿಚಾರಶೀಲನು ಮತ್ತು ಅಧ್ಯಯನಪ್ರಿಯನು ಆಗಿರುತ್ತಾನೆ.

ಒಂದು ವೇಳೆ ಬೆರಳುಗಳಲ್ಲಿ ಗಂಟುಗಳು ಬಹಳ ಹೆಚ್ಚಾಗಿ ವಿಕಸಿತವಾಗಿದ್ದರೆ ಅಂತಹ ವ್ಯಕ್ತಿ ಪ್ರತಿಭಾವಂತನು ಮತ್ತು ಚಿಂತಕನೂ ಆಗಿರುತ್ತಾನೆ. ಇಂಥವನ ಪ್ರತ್ಯೇಕ ಕಾರ್ಯದಲ್ಲಿ ದೃಢತೆ ಮತ್ತು ಸುವ್ಯವಸ್ಥೆ ಇರುತ್ತದೆ.

ಒಂದು ವೇಳೆ ಬೆರಳುಗಳಲ್ಲಿನ ಗಂಟುಗಳು ಅತ್ಯಧಿಕವಾಗಿ ಉಬ್ಬಿಕೊಂಡಿದ್ದರೆ ಅಂತಹ ವ್ಯಕ್ತಿ ಜೀವನದಲ್ಲಿ ನಿರಾಶಾವಾದಿಯಾಗಿರುತ್ತಾನೆ ಮತ್ತು ಅಂತವನಿಗೆ ಅಕಾಲಮೃತ್ಯು ಪ್ರಾಪ್ತವಾಗುತ್ತದೆ.

ಒಂದು ವೇಳೆ ಈ ಗಂಟುಗಳು ನುಣುಪಾಗಿದ್ದರೆ ಅಂತಹ ವ್ಯಕ್ತಿ ಅವಶ್ಯಕತೆಗಿಂತ ಹೆಚ್ಚು ಭಾವುಕನಾಗಿರುತ್ತಾನೆ.

ಒಂದು ವೇಳೆ ಗಂಟುಗಳಿಲ್ಲದ ಬೆರಳುಗಳಿದ್ದರೆ ಅಂತಹ ವ್ಯಕ್ತಿ ದಾರ್ಶನಿಕನಾಗುತ್ತಾನೆ.

**ಬೆರಳುಗಳ ಮೇಲಿನ ಗುರುತುಗಳು:** ಬೆರಳುಗಳ ಮೇಲೆ ದೊರಕುವ ಗುರುತುಗಳು ಹಸ್ತರೇಖೆ ವಿಶೇಷಜ್ಞರಿಗೆ ಅತ್ಯಂತ ಮಹತ್ವ ಉಳ್ಳದ್ದಾಗಿರುತ್ತದೆ. ಇದೇ ಚಿಹ್ನೆಗಳ ಮಾಧ್ಯಮದಿಂದ ವ್ಯಕ್ತಿಯ ಚಾರಿತ್ರ್ಯ ಮತ್ತು ಮನೋವಿಜ್ಞಾನ ಮುಂತಾದವುಗಳನ್ನು ಚೆನ್ನಾಗಿ ಅರಿತುಕೊಳ್ಳಬಹುದು.

ಬೆರಳುಗಳ ಮೇಲೆ ಇರುವ ಚಿಹ್ನೆಗಳು ಕೆಳಕಂಡಂತೆ ಇರುತ್ತವೆ:

**1. ಶಂಖು:** ಬೆರಳುಗಳ ಮೇಲಿನ ಭಾಗದಲ್ಲಿ ಒಂದು ವೇಳೆ ಶಂಖುವಿನ ಚಿಹ್ನೆ ಕಾಣಿಸಿದರೆ ಅಂತಹ ವ್ಯಕ್ತಿ ಮಾನಸಿಕ ರೂಪದಿಂದ ಅತ್ಯಂತ ಸಮರ್ಥನೂ ಮತ್ತು ಶ್ರೇಷ್ಠನೂ ಆಗಿರುತ್ತಾನೆ. ಇಂತಹ ವ್ಯಕ್ತಿ

ಪ್ರತಿಕೂಲ ಪರಿಸ್ಥಿತಿಗಳಲ್ಲೂ ಸಹ ಉನ್ನತಿ ಗಳಿಸುತ್ತಿರುತ್ತಾನೆ ಮತ್ತು ಪರಿಸ್ಥಿತಿಗಳ ಮೇಲೆ ವಿಜಯವನ್ನು ಪಡೆಯುತ್ತಾನೆ, ಜೊತೆಗೆ ಪರಿಸ್ಥಿತಿಗಳಿಗನುಸಾರವಾಗಿ ತನ್ನನ್ನು ಅಳವಡಿಸಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಇಂತಹ ವ್ಯಕ್ತಿಗಳು ಜೀವನದಲ್ಲಿ ತಮ್ಮ ಪ್ರಯತ್ನಗಳಿಂದ ಸಫಲತೆಯನ್ನು ಪಡೆಯುತ್ತಾರೆ. ಆದರೆ ವೃದ್ಧಾಪ್ಯದಲ್ಲಿ ಇಂತಹ ವ್ಯಕ್ತಿಗಳು ಹೃದಯ ರೋಗಗಳಿಗೆ ಬಲಿಯಾಗುತ್ತಾರೆ.

2. **ಡೇರೆ:** ಅನೇಕ ವ್ಯಕ್ತಿಗಳ ಬೆರಳುಗಳ ಮೇಲಿನ ಭಾಗದಲ್ಲಿ ಡೇರೆಯ ಚಿಹ್ನೆ ಕಂಡುಬರುತ್ತವೆ. ಇಂತಹ ವ್ಯಕ್ತಿ ಹೆಚ್ಚು ಸಹೃದಯನು ಮತ್ತು ಕಲಾಕಾರನೂ ಆಗಿರುತ್ತಾನೆ ಹಾಗೂ ತನ್ನ ಕಲೆಯ ಮಾಧ್ಯಮದಿಂದ ಕೀರ್ತಿಯ ಶಿಖರವನ್ನು ತಲುಪುತ್ತಾನೆ. ಆದರೆ ಇಂತಹ ವ್ಯಕ್ತಿ ಭಾವುಕನಾಗಿರುತ್ತಾನೆ. ಆದ್ದರಿಂದ ಇಂಥವರಿಂದ ಇತರರು ಅನುಚಿತ ಲಾಭವನ್ನು ಪಡೆದುಕೊಳ್ಳುತ್ತಾರೆ. ಮಾನಸಿಕ ದೃಷ್ಟಿಯಿಂದ ಇಂತಹ ವ್ಯಕ್ತಿ ಅಸಂತುಲಿತನಾಗಿರುತ್ತಾನೆ ಮತ್ತು ಇಂಥವನ ಗೃಹಸ್ಥ ಜೀವನ ಬಹುಶಃ ದುಃಖಮಯವಾಗಿರುತ್ತದೆ.

3. **ಚಕ್ರ:** ಬೆರಳುಗಳ ಮೇಲೆ ಚಕ್ರದ ಗುರುತಿದ್ದರೆ ಶುಭವೆಂದು ನಂಬಲಾಗಿದೆ. ಇಂತಹ ವ್ಯಕ್ತಿಗಳು ತಮ್ಮ ವಿಚಾರಗಳಲ್ಲಿ ಸ್ವತಂತ್ರರಾಗಿರುತ್ತಾರೆ ಮತ್ತು ಇವರ ಪ್ರತ್ಯೇಕ ಕಾರ್ಯದಲ್ಲಿ ಮೌಲಿಕತೆ ಕಂಡುಬರುತ್ತದೆ. ಬುದ್ಧಿಯ ಬಲದಿಂದ ಇವರು ಸಮಾಜದಲ್ಲಿ ಗೌರವ ಪೂರ್ಣ ಸ್ಥಾನವನ್ನು ಪಡೆದುಕೊಳ್ಳುತ್ತಾರೆ ಮತ್ತು ಇವರು ರೂಢಿ, ಅಜ್ಞಾನಗಳಿಂದ ದೂರವಿರುತ್ತಾರೆ.

4. **ಕಮಾನು:** ಬೆರಳುಗಳ ಮೇಲಿನ ಭಾಗದಲ್ಲಿ ಕಮಾನಿನ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಹೆಚ್ಚು ಸೋಮಾರಿ ಮತ್ತು ಸಂದೇಹಶೀಲ ಪ್ರಕೃತಿಯವನಾಗಿರುತ್ತಾನೆ. ಇಂತಹ ವ್ಯಕ್ತಿಗೆ ಸ್ವತಃ ತನ್ನ ಮೇಲೆ ನಂಬಿಕೆಯಾಗಲೀ ಇತರರ ಮೇಲೆ ನಂಬಿಕೆಯಾಗಲೀ ಇರುವುದಿಲ್ಲ. ಇಂತಹ ವ್ಯಕ್ತಿ ತನ್ನ ಸುತ್ತಲೂ ಭ್ರಮೆಯ ವಾತಾವರಣವನ್ನು ನಿರ್ಮಿಸಿಕೊಂಡಿರುತ್ತಾನೆ. ರಹಸ್ಯಮಯ ಕಾರ್ಯಗಳಲ್ಲಿ ಮತ್ತು ಗುಪ್ತಚರದ ಕಾರ್ಯಗಳಲ್ಲಿ ವಿಶೇಷ ಸಫಲತೆಯನ್ನು ಇಂತಹ ವ್ಯಕ್ತಿ ಪಡೆಯಬಲ್ಲನು.

5. **ತ್ರಿಭುಜ:** ತ್ರಿಭುಜದ ಚಿಹ್ನೆ ವ್ಯಕ್ತಿಯನ್ನು ರಹಸ್ಯಮಯನನ್ನಾಗಿ ಮಾಡುತ್ತದೆ. ಇಂತಹ ವ್ಯಕ್ತಿ ಯೋಗಾಭ್ಯಾಸದ ಮೂಲಕ ತನ್ನ ಶರೀರವನ್ನು

ಸುಂದರವಾಗಿಟ್ಟುಕೊಳ್ಳುವುದರಲ್ಲಿ ಸಮರ್ಥನಾಗಿರುತ್ತಾನೆ. ಇಂತಹ ವ್ಯಕ್ತಿ ಏಕಾಂತ ಪ್ರೇಮಿಯೂ ಮತ್ತು ರೂಢಿವಾದಿಯೂ ಆಗಿರುತ್ತಾನೆ. ಇಂತಹ ವ್ಯಕ್ತಿಯ ಮನಸ್ಸಿನಲ್ಲಿ ಮನೆ ಮಾಡಿಕೊಳ್ಳುವ ವಿಷಯಗಳು ಸಹಜವಾಗಿ ಬಿಟ್ಟು ಹೋಗುವುದಿಲ್ಲ.

**6. ನಕ್ಷತ್ರ:** ಯಾವ ವ್ಯಕ್ತಿಗಳ ಬೆರಳುಗಳ ಮೇಲೆ ನಕ್ಷತ್ರ ಅಥವಾ ಕ್ರಾಸ್‌ನ ಗುರುತು ಇರುತ್ತದೋ ಅಂತಹ ವ್ಯಕ್ತಿ ಪ್ರಬಲ ಭಾಗ್ಯವಾದಿ ಮತ್ತು ಭಾಗ್ಯಶಾಲಿಯಾಗುತ್ತಾನೆ. ಇಂತಹ ವ್ಯಕ್ತಿಯು ಜೀವನದಲ್ಲಿ ಅನೇಕ ಬಾರಿ ಅನಿರೀಕ್ಷಿತ ಧನಲಾಭ ಉಂಟಾಗುತ್ತದೆ. ಆರ್ಥಿಕ ದೃಷ್ಟಿಯಲ್ಲಿ ಇಂತಹ ವ್ಯಕ್ತಿಗಳು ಜೀವನದಲ್ಲಿ ಸುಖಿಗಳಾಗಿರುತ್ತಾರೆ.

**7. ಚೆಂಡು:** ಒಂದು ವೇಳೆ ಬೆರಳುಗಳ ಮೇಲೆ ಚೆಂಡು ಅಥವಾ ಗೋಲಾಕಾರದ ಚಿಹ್ನೆ ಇದ್ದರೆ ಅಂತಹ ವ್ಯಕ್ತಿಗಳು ಆದರ್ಶ ಪ್ರೇಮಿಗಳು ಮತ್ತು ಆದರ್ಶ ಮಿತ್ರರು ಎಂದು ಕರೆಯಲ್ಪಡುತ್ತಾರೆ. ಒಂದು ಕಡೆ ಇವರ ಆಸಕ್ತಿ ಭೋಗದ ಕಡೆಗೆ ಇರುತ್ತದೆ ಹಾಗೂ ಮತ್ತೊಂದು ಕಡೆ ವೈರಾಗ್ಯದ ಕಡೆಗೂ ಇರುತ್ತದೆ. ಮಾನಸಿಕ ದೃಷ್ಟಿಯಿಂದ ಇವರು ಅಸ್ಥಿರರಾಗಿರುತ್ತಾರೆ ಮತ್ತು ಯಾವುದೇ ಕಾರ್ಯವನ್ನು ಸಂಪೂರ್ಣವಾಗಿ ಸಫಲಗೊಳಿಸುವ ಸ್ವಭಾವ ಇವರದ್ದಲ್ಲ.

**8.ಬಲೆ (ಜಾಲ):** ಒಂದು ವೇಳೆ ಬೆರಳುಗಳ ಮೇಲೆ ಬಲೆಯ ಚಿಹ್ನೆ ಇದ್ದರೆ ಅಂತಹ ವ್ಯಕ್ತಿಯ ಜೀವನದಲ್ಲಿ ಬಹಳಷ್ಟು ತೊಂದರೆಗಳು ಮತ್ತು ದುಃಖಗಳು ಬರುತ್ತವೆ. ಆದರೆ ಇವರ ಜೀವನ ಶಕ್ತಿ ದೃಢವಾಗಿರುತ್ತದೆ ಮತ್ತು ತಮ್ಮ ಇಚ್ಛಾಶಕ್ತಿಯ ಬಲದಿಂದ ಇವರು ಈ ಸಂಕಟಗಳಿಂದ ಕ್ಷೇಮವಾಗಿ ಹೊರಬರುತ್ತಾರೆ. ಆದರೂ ಸಹ ಇವರ ಜೀವನದಲ್ಲಿ ಸುಖ, ವಿಶ್ರಾಂತಿ ಕಡಿಮೆಯೇ ಇರುತ್ತದೆ. ಹೆಚ್ಚಾಗಿ ಈ ಚಿಹ್ನೆಗಳು ಅಪರಾಧಿ ಜನಗಳಲ್ಲಿ ಮತ್ತು ದರೋಡೆಖೋರರುಗಳಲ್ಲಿ ಕಂಡುಬರುತ್ತವೆ.

**9.ಚತುರ್ಭುಜ:** ಒಂದು ವೇಳೆ ಬೆರಳುಗಳ ಮೇಲೆ ವರ್ಗ ಅಥವಾ ಚತುರ್ಭುಜದ ಚಿಹ್ನೆ ಕಂಡುಬಂದರೆ ಅಂತಹ ವ್ಯಕ್ತಿ ಹೆಚ್ಚು ಪರಿಶ್ರಮಿಯಾಗಿರುತ್ತಾನೆ ಮತ್ತು ತನ್ನ ಪರಿಶ್ರಮದ ಬಲದಿಂದ ಮತ್ತು ಉದ್ಯಮದ ಬಲದಿಂದ ಚೆನ್ನಾಗಿ ಹಣವನ್ನು ಸಂಪಾದಿಸುತ್ತಾನೆ. ಇಂತಹ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಪೂರ್ಣ ಸಂಪನ್ನನು ಮತ್ತು ಸುಖಿಯೂ ಆಗಿರುತ್ತಾನೆ.

## ಉಗುರುಗಳು

ಉಗುರುಗಳು ಒಂದು ರೀತಿಯಲ್ಲಿ ಬೆರಳಿನ ರಕ್ಷಾಕವಚದ ಕಾರ್ಯ ನಿರ್ವಹಿಸುತ್ತವೆ. ಕೂದಲಿನಂತೆ ಕಂಡುಬರುವ ಸೂಕ್ಷ್ಮ ಎಳೆಗಳಿಂದ ಈ ಉಗುರು ಮಾಡಲ್ಪಟ್ಟಿರುತ್ತವೆ. ಒಂದೊಂದು ಎಳೆಗಳು ಬಹು ಹತ್ತಿರಕ್ಕೆ ಸೇರಿಕೊಂಡು ಕೊಂಬಿನಂತಹ ವಸ್ತುವಾಗಿರುತ್ತದೆ. ಇದು ಮಾಂಸದ ಗಂಟಿನಿಂದ ಅಥವಾ ಮೂಳೆಗಳಿಂದ ಹೊರಟಿರುವಂತೆ ಕಂಡುಬರುತ್ತದೆ. ಆದರೆ ವಾಸ್ತವವಾಗಿ ಆ ರೀತಿ ಇರುವುದಿಲ್ಲ.









ಉಗುರುಗಳು ಎರಡು ರೀತಿಯ ಕಾರ್ಯವನ್ನು ನಿರ್ವಹಿಸುತ್ತವೆ.

1. ಬೆರಳುಗಳು ಹೊರಗಿನ ಆಘಾತದಿಂದ ಕತ್ತರಿಸಿಹೋಗದಂತೆ ರಕ್ಷಣೆ ಮಾಡುತ್ತವೆ.
2. ಉಗುರುಗಳು ವಿದ್ಯುತ್ ಪ್ರವಾಹಕವಾಗಿರುತ್ತವೆ. ವಾಯುಮಂಡಲದಲ್ಲಿ ಯಾವ ಪ್ರಕೃತಿದತ್ತ ವಿದ್ಯುತ್ ಇರುತ್ತದೋ ಅವು ಇವುಗಳ ಮಾಧ್ಯಮದಿಂದಲೇ ಶರೀರದಲ್ಲಿ ಪ್ರವೇಶಿಸುತ್ತದೆ. ಅಷ್ಟೇ ಅಲ್ಲದೆ ಅನ್ಯಾಯ ಗ್ರಹಗಳ ಕಿರಣಗಳು ಇದೇ ಉಗುರುಗಳ ಮಾಧ್ಯಮದಿಂದ ಮಾನವ ದೇಹವನ್ನು ಪ್ರವೇಶಿಸಿ ವ್ಯಕ್ತಿಯನ್ನು

ಒಳ್ಳೆಯ ರೀತಿಯಲ್ಲಿ ಕಾರ್ಯ ನಿರ್ವಹಿಸುವಂತೆ ಪ್ರೇರಣೆ ನೀಡುತ್ತದೆ.

ಚರ್ಮದಂತೆ ಉಗುರು ಸಹ ಮನುಷ್ಯನ ವಿಶೇಷತೆಯನ್ನು ತಿಳಿಸುತ್ತವೆ. ಸುಂದರ ರಚನೆಯ ಕೈಗಳಲ್ಲಿ ಪ್ರಾಯಃ ಉಗುರುಗಳು ಸಹ ಸುಂದರವಾಗಿ ಕಾಣಲು ಸಿಗುತ್ತವೆ. ಕೆಲವು ಕೈಗಳಲ್ಲಿ ತದ್ವಿರುದ್ಧವಾಗಿಯೂ ಇರುತ್ತವೆ. ಅಸಂತುಲನವನ್ನು ಇವು ಪ್ರಕಟಗೊಳಿಸುತ್ತವೆ.

ಉಗುರುಗಳ ರಚನೆ, ಆಕಾರ, ಕಠೋರತೆ, ಸುಂದರತೆ, ಕುರೂಪತೆ ಮುಂತಾದವುಗಳಿಂದ ಮಾನವನ ಭಾಗ್ಯದ ಬಗ್ಗೆ ಅರಿತುಕೊಳ್ಳಬಹುದು.

ಸ್ವಸ್ಥ ಉಗುರು, ನಿರ್ಮಲವಾಗಿ, ನುಣುಪಾಗಿ, ಕೋಮಲವಾಗಿ ಮತ್ತು ಗುಲಾಬಿ ಬಣ್ಣದಿಂದ ಕೂಡಿರುತ್ತದೆ. ಉಗುರು ಸ್ವಸ್ಥ ಅಥವಾ ಅಸ್ವಸ್ಥವಾಗಿದ್ದರೆ ರೋಗಜ್ಞಾನ ಮಾಡಿಸುತ್ತದೆ. ಯಕೃತ್ತು, ಶ್ವಾಸಕೋಶ ಮತ್ತು ಹೃದಯ ರೋಗಗಳ ಬಗ್ಗೆ ಇಂದು ಡಾಕ್ಟರ್‌ಗಳು ಉಗುರುಗಳನ್ನು ನೋಡಿಯೇ ಅರಿತುಕೊಳ್ಳುತ್ತಾರೆ.

ಭಾರತೀಯ ಜ್ಯೋತಿಷಿಗಳು ಉಗುರುಗಳಿಂದ ಕೇವಲ ರೋಗವಷ್ಟೇ ಅಲ್ಲದೆ ವ್ಯಕ್ತಿಯ ಸಂಪೂರ್ಣ ಇತಿಹಾಸವನ್ನು ತಿಳಿಸುತ್ತಾರೆ. ಅಂದರೆ ವ್ಯಕ್ತಿಯ ಆರ್ಥಿಕ ಸ್ಥಿತಿ, ಸಾಮಾಜಿಕ ಸ್ಥಾನ, ಶಕ್ತಿ, ಪುಂಸತ್ವ, ಜಯಾಜಯ, ಕೀರ್ತಿ-ಅಪಕೀರ್ತಿ, ಪ್ರೇಮ-ಕಾಮ, ಸ್ವಭಾವ, ಸಂತಾನ ಮುಂತಾದವುಗಳನ್ನು ಉಗುರು ನೋಡಿಯೇ ಹೇಳುತ್ತಾರೆ.

**ಉಗುರುಗಳ ವಿಧಗಳು:**

**1. ಚಿಕ್ಕ ಉಗುರು:** ಚಿಕ್ಕ ಉಗುರುಗಳು ವಾದ-ವಿವಾದ, ತರ್ಕ, ಬೊಗಳೆ, ವ್ಯರ್ಥ ಆಲೋಚನೆ, ಅಸಭ್ಯತೆ ಮತ್ತು ಮಾನವನ ಸಂಕೀರ್ಣತೆಯನ್ನು ಪ್ರದರ್ಶಿಸುತ್ತವೆ. ಇಂತಹ ವ್ಯಕ್ತಿಯ ಸ್ವಭಾವ ದುಷ್ಟತನದಿಂದ ಮತ್ತು ನೀಚತನದಿಂದ ಕೂಡಿರುತ್ತದೆ. ಇಂತವನು ನಿಶ್ಶಕ್ತ ಹೃದಯದವನಾಗಿರುತ್ತಾನೆ.

**2. ಹಾಸಿಗೆಯಂತಹ ಉಗುರು:** ಉದ್ದವಾದ ಹಾಸಿಗೆಯಂತಹ ಉಗುರುಳ್ಳ ವ್ಯಕ್ತಿ ಅವಶ್ಯಕತೆಗಿಂತ ಹೆಚ್ಚು ಕಲ್ಪನಾಶೀಲನೂ, ಸಂವೇದನಾ ಶೀಲನೂ ಮತ್ತು ಭಾವುಕನೂ ಆಗಿರುತ್ತಾನೆ. ಸುಂದರ ಸ್ವಭಾವ, ಅಸ್ಥಿರ ಮನೋವೃತ್ತಿಯುಳ್ಳ ಇಂತಹ ವ್ಯಕ್ತಿಗಳು ಯಾವುದೇ ವಿಷಯದ ಮೇಲೂ ಶೀಘ್ರ ನಿರ್ಣಯ ತೆಗೆದುಕೊಳ್ಳಲಾರರು. ಬೇರೆಯವರ ಸಲಹೆಯಂತೆಯೇ ಯಾವಾಗಲೂ ಕಾರ್ಯ ನಿರ್ವಹಿಸುತ್ತಾರೆ.

**3. ಹಳದಿ ಬಣ್ಣದಿಂದ ಕೂಡಿದ ಚಿಕ್ಕ ಉಗುರು:** ಇಂತಹ ಉಗುರುಳ್ಳ ವ್ಯಕ್ತಿಗಳು ಸುಳ್ಳರೂ, ಚಾಲಾಕು ಮೋಸಗಾರರೂ ಆಗಿರುತ್ತಾರೆ. ಇವರ ಪ್ರತಿಯೊಂದು ಹೆಜ್ಜೆಯೂ ಸುಳ್ಳಿನ ಅಡಿಪಾಯದ ಮೇಲೆ ಇಡುವಂತಹದಾಗಿರುತ್ತದೆ. ಮೋಸ ಮತ್ತು ಧೂರ್ತತೆ ಇವರ ರಕ್ತದಲ್ಲೇ ಬೆರೆತುಕೊಂಡಿರುತ್ತದೆ. ಇವರನ್ನು ನಂಬಿಕಸ್ತರೆಂದು ಎಂದೂ ಹೇಳಲಾಗುವುದಿಲ್ಲ. ಇಂಥವರಿಗೆ ಜವಾಬ್ದಾರಿಯ ಕಾರ್ಯವನ್ನು ವಹಿಸಿ ಯಾರೂ ನಿಶ್ಚಿಂತೆಯಿಂದ ಇರಲು ಸಾಧ್ಯವೇ ಇಲ್ಲಾ.

**4.ಉದ್ದ ಮತ್ತು ಚಿಕ್ಕ ಉಗುರು:** ಚಿಕ್ಕ ಉಗುರುಗಳಿರುವ ವ್ಯಕ್ತಿಗಳು ಚಿಕ್ಕ ಚಿಕ್ಕ ಕಾರ್ಯಗಳ ಮೇಲೆ, ಚಿಕ್ಕ ವಿವರಣೆಗಳ ಮೇಲೆ ಹೆಚ್ಚು ಗಮನ ನೀಡುತ್ತಾರೆ. ಉದ್ದನೆಯ ಉಗುರುಳ್ಳ ವ್ಯಕ್ತಿಗಳು ಆದರ್ಶವಾದಿಗಳು ಮತ್ತು ಆಲೋಚನೆ, ನಿಂದೆ, ವಿರೋಧಗಳಲ್ಲಿ ನಂಬಿಕೆಯನ್ನಿರಿಸಿಕೊಳ್ಳುವುದಿಲ್ಲ.

**5.ಚಿಕ್ಕದಾದ ಚೌಕಾಕಾರದ ಉಗುರು:** ಈ ರೀತಿಯ ಉಗುರುಗಳು ಯಾವ ವ್ಯಕ್ತಿಯ ಕೈಲಿರುತ್ತದೋ ಆ ವ್ಯಕ್ತಿ ಜೀವನದಲ್ಲಿ ಹೃದಯರೋಗದಿಂದ ಬಳಲುತ್ತಾನೆ ಮತ್ತು ಹೃದಯ ರೋಗದಿಂದಲೇ ಆತನ ಮೃತ್ಯುವಾಗುತ್ತದೆ.

**6. ತ್ರಿಕೋನಾಕಾರದ ಉಗುರು:** ತ್ರಿಕೋನ, ಚಪ್ಪಟೆ ಮತ್ತು ಮಾಂಸದಲ್ಲಿ ಹೂತುಕೊಂಡಿರುವ ಉಗುರುಗಳು ಸ್ನಾಯುವ್ಯಾಧಿ, ನಿಶ್ಶಕ್ತ ಮನೋಬಲವ್ಯಾಧಿ ಮತ್ತು ಕೊನೆಗೆ ಲಕ್ವಾ ವ್ಯಾಧಿಯ ದೂರು ಉತ್ಪನ್ನ ಮಾಡುತ್ತವೆ. ಇಂತಹ ವ್ಯಕ್ತಿ ಸಮಯವಿರುವಾಗಲೇ ಎಚ್ಚರಿಕೆ ವಹಿಸಬೇಕು.

**7. ಚಿಕ್ಕದಾದ ಅಗಲವಾದ ಉಗುರು:** ಇಂತಹ ವ್ಯಕ್ತಿಗಳು ಜಗಳಗಂಟರು ಹಾಗೂ ಅರಾಜಕ ತತ್ವಗಳೊಂದಿಗೆ ಸಂಬಧವಿರಿಸಿಕೊಳ್ಳುತ್ತಾರೆ. ಪ್ರತಿಕ್ಷಣ ಇವರ ಮೆದುಳು ಉತ್ತೇಜನೆಯಿಂದ ಕೂಡಿರುತ್ತದೆ. ಆಲೋಚನೆ ಹಿಂದೆ, ಕೆಟ್ಟದು ಮಾಡುವ ಯೋಚನೆ, ಬೇರೆಯವರ ಕಾರ್ಯದಲ್ಲಿ ಪ್ರತಿಕ್ಷಣ ಹಸ್ತಕ್ಷೇಪ ಮಾಡುವುದು ಇವರ ಸ್ವಭಾವವಾಗಿರುತ್ತದೆ. ಇವರನ್ನು ಹಠ ಸ್ವಭಾವದವರೆಂದು ಕರೆಯಬಹುದು. ಇವರು ತಮ್ಮ ಎದುರು ಬೇರೆ ಯಾರ ಮಾತನ್ನೂ ಕೇಳುವವರಲ್ಲ ಹಾಗೂ ಒಪ್ಪುವವರಲ್ಲ.

**8.ಶಂಖಾಕಾರದ ಉಗುರು:** ಶಂಖಾಕಾರದ ಉಗುರುಗಳು ಒಂದು ವೇಳೆ ದಡಗಳಲ್ಲಿ ಗೋಲಾಕಾರವಾಗಿ ತಿರುಗಿಕೊಂಡಿದ್ದರೆ ಕ್ಷಯ, ಜೀರ್ಣಜ್ವರ, ಗಂಟಲಕುರು ಮುಂತಾದ ರೋಗ ಸಂಭವಿಸುವ ಪೂರ್ವ

ಸೂಚನೆ ನೀಡುತ್ತದೆ.

**9. ಕಠೋರ ಮತ್ತು ಸಂಕೀರ್ಣ ಉಗುರು:** ಸಾಮಾನ್ಯವಾಗಿ ಈ ರೀತಿಯ ಉಗುರುಳ್ಳ ವ್ಯಕ್ತಿ ಹೊಡೆದಾಟ-ಬಡೆದಾಟದಲ್ಲಿ ವಿಶ್ವಾಸವಿಡುವವರು, ಜಗಳಗಂಟರು, ಹಠಸ್ವಭಾವದವರು, ಬಯಸಿದ ಕಾರ್ಯವನ್ನು ಮಾಡಿ ಮುಗಿಸುವವರು ಆಗಿರುತ್ತಾರೆ. ಸರಿ-ತಪ್ಪು, ಕೀರ್ತಿ-ಅಪಕೀರ್ತಿ, ಜಯ-ಪರಾಜಯದ ಮಹತ್ವ ಇವರ ಎದುರು ಇರುವುದಿಲ್ಲ. ಸಮಾಜ - ಜಾತಿ, ಪರಿವಾರ - ಕುಟುಂಬ ಏನು ಅನ್ನುತ್ತದೆಂಬ ಪರಿವೇ ಇವರಿಗಿರುವುದಿಲ್ಲ. ಇಂತಹ ವ್ಯಕ್ತಿಗಳು ನಂಬಲು ಅರ್ಹರಾದವರಲ್ಲ.

10. ಗೋಲಾಕಾರದ ಮತ್ತು ತಿರುಗಿಕೊಂಡಿರುವ ಉಗುರುಗಳು: ಒಂದು ವೇಳೆ ಉಗುರು ತುದಿಯಿಂದ ಕೆಳಗಿನವರೆಗೆ ಬೆರಳಿನವರೆಗೆ ಬಹಳ ಹೆಚ್ಚು ತಿರುಗಿಕೊಂಡಿದ್ದರೆ ಅದು ರೋಗ ಪರಿಚಾಯಕವಾಗಿರುತ್ತದೆ ಮತ್ತು ಇಂಥವರು ಸಶಕ್ತ ವಿಚಾರಗಳ ಶೀಘ್ರ ನಿರ್ಣಯ ತೆಗೆದುಕೊಳ್ಳುವಂಥವರಾಗಿರುತ್ತಾರೆ.

**11. ಚೌಕಾಕಾರದ ಉಗುರು:** ಈ ಉಗುರುಗಳು ವ್ಯಕ್ತಿಯ ನಿರ್ಬಲತೆಯನ್ನು ಪರಿಚಯಿಸುತ್ತದೆ. ಇಂತಹ ಉಗುರುಳ್ಳ ವ್ಯಕ್ತಿ ಅಂಜುಬುರುಕನು, ಹೇಡಿಯೂ, ನಿರಾಶವಾದಿಯೂ ಆಗಿರುತ್ತಾನೆ.

**12. ದಪ್ಪದಾದ ಮತ್ತು ಗಡುಸಾದ ಉಗುರು:** ಇಂತಹ ವ್ಯಕ್ತಿ ಮಹಾನ್ ಕ್ರೂರಿಯು, ಪಶುವರ್ತನೆ ಮಾಡುವವನಾಗಿಯೂ, ಜನ ವಿರೋಧಿಯಾಗಿಯೂ ಮತ್ತು ನಾಸ್ತಿಕನಾಗಿಯೂ ಇರುತ್ತಾನೆ.

**13. ಚಿಕ್ಕ ತ್ರಿಕೋನವುಳ್ಳ ಉಗುರು:** ಸಾಮಾನ್ಯವಾಗಿ ಇಂತಹ ಉಗುರು ಮೇಲುಭಾಗದಲ್ಲಿ ಅಗಲವಾಗಿಯೂ ಮತ್ತು ಕೆಳಭಾಗದ ಕಡೆ ಸಂಕೀರ್ಣವಾಗಿಯೂ ಇರುತ್ತದೆ. ಯಾವ ವ್ಯಕ್ತಿಯ ಕೈಯಲ್ಲಿ ಇಂತಹ ಉಗುರುಗಳು ಇರುತ್ತವೆಯೋ ಅಂತಹ ವ್ಯಕ್ತಿ ಸೋಮಾರಿಯೂ, ಕೆಲಸ ಮಾಡದವನಾಗಿಯೂ, ವಚನಭಂಗಗೊಳಿಸುವವನಾಗಿಯೂ, ಅಸಾಮಾಜಿಕ ಕಾರ್ಯ ಮಾಡುವವನಾಗಿಯೂ ಮತ್ತು ಅಕರ್ಮಣ್ಯ ಏಕಾಂತವಾದಿಯಾಗಿಯೂ ಇರುತ್ತಾನೆ.

**14. ಉದ್ದವಾದ ತೆಳುವಾದ ಉಗುರು:** ಇಂತಹ ಉಗುರುಗಳು ನಿಶ್ಯಕ್ತತೆಯ ಪರಿಚಯ ನೀಡುತ್ತದೆ. ದೈಹಿಕ ಮತ್ತು ಮಾನಸಿಕ ಎರಡು ದೃಷ್ಟಿಗಳಿಂದಲೂ ಈ ವ್ಯಕ್ತಿ ನಿಶ್ಯಕ್ತನಾಗಿರುತ್ತಾನೆ.

**15. ಚಪ್ಪಟೆ ಉಗುರು:** ಚಿಕ್ಕ ಚಪ್ಪಟೆ ಉಗುರುಳ್ಳ ವ್ಯಕ್ತಿ ಪ್ರಾಯಃ ಹೃದಯ್ಗರೋಗಿಯಾಗಿರುತ್ತಾನೆ. ಒಂದು ವೇಳೆ ಉಗುರಿನ ಚಂದ್ರಾಕಾರ ಅದೃಶ್ಯವಾಗಿದ್ದರೆ ಅಥವಾ ಬಹಳ ಕಡಿಮೆ ಇದ್ದರೆ ಅಂತಹ ವ್ಯಕ್ತಿ ಖಂಡಿತಾ ರೋಗಿಯಾಗಿರುತ್ತಾನೆ.

**16. ಉದ್ದದ ಅಪೇಕ್ಷೆಯ ಚಿಕ್ಕ ಉಗುರು:** ಇಂತಹ ವ್ಯಕ್ತಿಗೆ ಸಿಟ್ಟು ಮೂಗಿನ ಮೇಲೆ ಇರುತ್ತದೆ. ಮಾತು ಮಾತಿಗೂ ಇವರು ಕ್ರೋಧಿತರಾಗುತ್ತಾರೆ. ಇಷ್ಟಾದರೂ ಸಹ ಇವರು ತಮ್ಮ ಕೆಲಸದಲ್ಲಿ ಪಕ್ವವಾಗಿರುತ್ತಾರೆ. ಯಾವ ಕೆಲಸದಲ್ಲಿ ತೊಡಗುತ್ತಾರೋ ಅದನ್ನು ಪೂರ್ಣಗೊಳಿಸಿಯೇ ತೀರುತ್ತಾರೆ. ತಮ್ಮ ಕೆಲಸದಲ್ಲಿ ಇವರು ಬೇರೆಯವರ ಆಲೋಚನೆ, ಹಸ್ತಕ್ಷೇಪ, ಸಲಹೆ ಬಯಸುವುದಿಲ್ಲ. ಏಕಾಂತವಾಸ ಇವರಿಗೆ ಬಹಳ ಪ್ರಿಯವಾಗಿರುತ್ತದೆ.

**17. ವೀಣೆಯಂತಹ ಉಗುರು:** ಈ ಉಗುರುಗಳು ಉದ್ದವಾಗಿರುತ್ತವೆ. ಇದರಿಂದ ನಾಜುಕತೆಯ ಸೂಚನೆ ದೊರೆಯುತ್ತದೆ. ಈ ಉಗುರುಗಳು ಉದ್ದವಾಗಿರುವುದರ ಜೊತೆಗೆ ವಕ್ರವೂ ಆಗಿದ್ದರೆ ಅಂತಹ ವ್ಯಕ್ತಿ ರೋಗಗ್ರಸ್ತನಾಗಿರುತ್ತಾನೆ ಮತ್ತು ಕ್ಷಯ ರೋಗಿಯಾಗಿರುತ್ತಾನೆ.

**17. ಚಿಕ್ಕ ಉಗುರಿನ ಗಂಟುಳ್ಳ ಬೆರಳುಗಳು:** ಇಂತಹ ವ್ಯಕ್ತಿಗಳು ಜಗಳವಾಡುವ ಪ್ರಕೃತಿಯವರು ಮತ್ತು ಕ್ರೋಧಿಗಳೂ ಆಗಿರುತ್ತಾರೆ. ಒಂದು ವೇಳೆ ಯಾವುದಾದರೂ ಸ್ತ್ರೀಯ ಕೈನಲ್ಲಿ ಇಂತಹ ಉಗುರಿದ್ದರೆ ಆ ಸ್ತ್ರೀ ತನ್ನ ಪತಿಯ ಮೇಲೆ ಅಡಳಿತ ನಡೆಸುತ್ತಾಳೆ ಮತ್ತು ಜಗಳಗಂಟಿಯಾಗಿರುತ್ತಾಳೆ.

**18. ಚಿಕ್ಕ ವರ್ಗಾಕಾರದ ಉಗುರು:** ಚಿಕ್ಕದಾದ ಮತ್ತು ವರ್ಗಾಕಾರದ ಉಗುರು ಹೃದಯ ರೋಗದ ಪರಿಚಯ ನೀಡುತ್ತದೆ.

**19. ಗೋಲಾಕಾರದ ಉಗುರು:** ಯಾರ ಉಗುರುಗಳು ಮೇಲುಗಡೆಯಿಂದ ಗೋಲಾಕಾರವಾಗಿರುತ್ತದೋ ಆ ವ್ಯಕ್ತಿಗಳು ಸಶಕ್ತ ವಿಚಾರಗಳುಳ್ಳವರು, ಶೀಘ್ರ ನಿರ್ಣಯ ತೆಗೆದುಕೊಳ್ಳುವರೂ ಆಗಿರುತ್ತಾರೆ.

**20. ಹಳದಿ ವರ್ಗಾಕಾರದ ಉಗುರು:** ಹಳದಿ ಮತ್ತು ವರ್ಗಾಕಾರದ ಉಗುರುಳ್ಳವರು ಚಾಲಾಕು ಸುಳ್ಳರು ಮತ್ತು ಧೂರ್ತರು ಆಗಿರುತ್ತಾರೆ.

**21. ಉದ್ದವಾದ ಮತ್ತು ತಿರುಗಿಕೊಂಡಿರುವ ಉಗುರು:** ಇಂತಹ ಉಗುರುಳ್ಳ ವ್ಯಕ್ತಿಗಳು ಚರಿತ್ರಹೀನರು, ಸುಳ್ಳರು, ಕಾಮುಕರೂ

ಆಗಿರುತ್ತಾರೆ. ಜೀವನದಲ್ಲಿ ಇವರಿಗೆ ಅನೇಕ ಬಾರಿ ಕೆಟ್ಟ ಹೆಸರು ಬರುತ್ತದೆ.

22. **ಪೂರ್ಣ ಉಗುರು:** ಈ ರೀತಿಯ ಉಗುರು ಅಗಲದ ಅಪೇಕ್ಷೆಗಿಂತ ಮಾಮೂಲಿ ಉದ್ದವಾಗಿರುತ್ತದೆ. ಪ್ರಕೃತಿದತ್ತ ಹೊಳಪು ಮತ್ತು ಸೌಂದರ್ಯವುಳ್ಳವರು, ಶ್ರೇಷ್ಠ ವಿಚಾರಕರು, ಮಾನವ ಪ್ರೇಮಿಗಳು, ಮಾನವೀಯ ಗುಣವುಳ್ಳವರು ಮತ್ತು ನಿರಂತರ ಉನ್ನತಿಯ ಕಡೆಗೆ ಅಗ್ರಸರರಾಗುವವರು ಇಂತಹ ಉಗುರುಳ್ಳವರಾಗಿರುತ್ತಾರೆ.

ಒಟ್ಟಿನಲ್ಲಿ ವಕ್ರಚೂಪಾದ ಉಗುರುಗಳು ದರಿದ್ರತೆಯ ಪರಿಚಯ ನೀಡುತ್ತದೆ.

ಕಪ್ಪೆಚಿಪ್ಪಿನಾಕಾರದ ಚಿಕ್ಕದಾದ ಹರಿದುಹೋಗಿರುವ ಉಗುರು ಬಡತನ ಮತ್ತು ನಿರ್ಧನತೆಯ ಪರಿಚಯ ನೀಡುತ್ತದೆ.

ಬಹಳ ದೊಡ್ಡದಾದ, ವಕ್ರವಾದ, ಚರ್ಮದಲ್ಲಿ ಹೂತುಕೊಂಡಿರುವ, ನಿಸ್ತೇಜ ಉಗುರುಗಳಿರುವವರು ದುಃಖದಿಂದ ಕೂಡಿರುತ್ತಾರೆ.

ಕಲೆಯುಳ್ಳ, ಅಸುಂದರ ಉಗುರು ಪರಾಧೀನತೆಯ ಪರಿಚಯ ನೀಡುತ್ತದೆ.

ಬಿಳಿಯ ದೊಡ್ಡ ತಿಲಕವುಳ್ಳ ಉಗುರು ಪರಾಶ್ರಯತೆಯ ಪರಿಚಯ ನೀಡುತ್ತದೆ. ಇವರು ದುಃಖಿಗಳು ಮತ್ತು ದುಷ್ಟರಾಗಿರುತ್ತಾರೆ.

ವಕ್ರವಾದ, ಒರಟಾದ, ಕ್ಷೀಣ ಉಗುರು ಪಾಪಿಯಾಗಿರುವುದರ ದ್ಯೋತಕವಾಗಿದೆ.

ಉಗುರುಗಳು ಆಮೆಯ ಬೆನ್ನಿನಂತೆ ಮೇಲಕ್ಕೆ ಎದ್ದಿದ್ದರೆ ಭಾಗ್ಯಹೀನತೆ ಇರುತ್ತದೆ.

ಹಳದಿ ಉಗುರು ರೋಗವನ್ನು ಪರಿಚಯಿಸುತ್ತದೆ. ಅಸುಂದರ ಮತ್ತು ಮುರಿದುಹೋಗಿರುವ ಉಗುರು ಪುರುಷತ್ವ ಕಡಿಮೆ ಇರುವುದನ್ನು ಸೂಚಿಸುತ್ತದೆ.

ಸುಂದರವಾದ ಶುದ್ಧವಾದ ಉಗುರು ಭಾಗ್ಯವಂತರಾಗಿರುವುದರ, ಸ್ವಲ್ಪ ಹೊರಗೆ ಹೊರಟಿರುವ ಉಗುರು ಉಚ್ಚ ಪದವಿಯ, ಮೇಲಕ್ಕೆ ಎದ್ದಿರುವ ಉಗುರು ಉನ್ನತಿಯ ಪರಿಚಯ ನೀಡುತ್ತದೆ.

ಬಿಳಿಯ ತಿಲಕದ ಉಗುರು ರಕ್ತ ನ್ಯೂನತೆಯ, ಹಳದಿ ಉಗುರು ಯಕೃತ್ ತೊಂದರೆಯ, ಕೆಂಪು ಉಗುರು ರಕ್ತ ಮುದ್ರೆಯ, ನೀಲಿ ಉಗುರು ರಕ್ತ ದೋಷದ, ಕಪ್ಪು ಉಗುರು ರೋಗದ ಪರಿಚಯ ನೀಡುತ್ತದೆ. ತ್ರಿಕೋನಾಕಾರದ ಉಗುರು ಸ್ನಾಯು ವಿಕಾರದ ಮತ್ತು ಕೂದಲಿನ ರೋಗದ

ಪರಿಚಯ ನೀಡುತ್ತದೆ.

ಇಕ್ಕಟ್ಟಾದ, ವಕ್ರವಾದ, ಉದ್ದವಾದ ಉಗುರು ಬೆನ್ನು ಹುರಿಯ ವಿಕೃತಿಯ, ಹಳದಿ ವರ್ಣವಾಗಿದ್ದರೆ ಚಾಲಾಕುತನದ ಅಥವಾ ಮಿಥ್ಯಾವಾದದ ಪರಿಚಯ ನೀಡುತ್ತದೆ.

ತೆಳುವಾದ ಉದ್ದನೆಯ ಉಗುರು ಶಾರೀರಿಕ ದುರ್ಬಲತೆಯ, ದಪ್ಪನಾದ ಮತ್ತು ಕಠೋರವಾದ ಉಗುರು ಕ್ರೂರತೆಯ ಪರಿಚಯ ನೀಡುತ್ತದೆ.

ಸ್ತ್ರೀಯರ ಬೆರಳಿನ ಅಗ್ರಭಾಗದಿಂದ ಮುಂದಕ್ಕೆ ಹೊರಟಿರುವ ಉಗುರುಗಳು ಒಂದು ವೇಳೆ ಗುಲಾಬಿ ಬಣ್ಣದ್ದಾಗಿದ್ದರೆ ಸೌಭಾಗ್ಯವನ್ನು ಸೂಚಿಸುತ್ತದೆ. ಎತ್ತರವಾದ ಮತ್ತು ಕೆಂಪು ಉಗುರು ಐಶ್ವರ್ಯದ ಪ್ರತೀಕವಾಗಿರುತ್ತದೆ. ಸುಂದರವಾದ, ಸಮಾನ ವರ್ಣಾಕಾರದ ಹೊಳಪಿನಿಂದ ಕೂಡಿದ ಉಗುರು ಪತಿ ಪ್ರೇಮವನ್ನು ವ್ಯಕ್ತಗೊಳಿಸುತ್ತದೆ.

ತೆಳು ಗುಲಾಬಿ ಬಣ್ಣದ ಉಗುರು ಸೌಭಾಗ್ಯ ಸೂಚಕವಾಗಿರುತ್ತದೆ. ದಟ್ಟ ಗುಲಾಬಿ ಬಣ್ಣದ ಉಗುರು ನಿರಂತರ ಉನ್ನತಿ–ಪತನದ ದ್ಯೋತಕವಾಗಿದೆ.

ಹರಿದ–ಮುರಿದ ಉಗುರು ಸಂಘರ್ಷಮಯ ಜೀವನವಾಗಿರುವುದೆಂದು ತಿಳಿಸುತ್ತದೆ. ಇಂತಹ ಸ್ತ್ರೀಯರು ಪ್ರೀತಿಯಲ್ಲಿ ಅಸಫಲರು ಮತ್ತು ವಿವಾಹ ವಿಚ್ಛೇದನಕ್ಕೆ ಒಳಗಾಗುವವರಾಗಿರುತ್ತಾರೆ.

ವಕ್ರವಾದ ಉಗುರು ಧನದ ಅಭಾವವನ್ನು ಸೂಚಿಸುತ್ತದೆ.

ಉಗುರುಗಳ ಮೇಲೆ ನೀಲಿ ಹೊಳಪು ಮನೋವಿಕಾರವನ್ನು ವ್ಯಕ್ತಪಡಿಸುತ್ತವೆ. ಇವರಲ್ಲಿ ರಕ್ತದ ಕೊರತೆ ಇರುತ್ತದೆ. ಬಿಳಿಯ ಬಿಂದು ಇರುವ ಉಗುರು ವ್ಯಭಿಚಾರದ ಪ್ರತೀಕವಾಗಿದೆ.

ಉಗುರುಗಳ ಮೇಲೆ ನಿಂತಿರುವ ರೇಖೆಗಳು ಸ್ವಾಭಾವಿಕ ನಿರ್ಬಲತೆಯನ್ನು ಪರಿಚಯಿಸುತ್ತದೆ.

## ಉಗುರಿನ ಚಿಹ್ನೆಗಳು

1. **ಅಡ್ಡರೇಖೆಗಳು**: ಉಗುರುಗಳ ಮೇಲೆ ಅಡ್ಡರೇಖೆಗಳು ರೋಗ ಸೂಚಕವಾಗಿರುತ್ತವೆ. ಇಂತಹ ವ್ಯಕ್ತಿ ನಿಶ್ಶಕ್ತನೂ, ರೋಗಿಯೂ ಮತ್ತು ವ್ಯಾಕುಲತೆಯಿಂದ ಕೂಡಿರುವವನೂ ಆಗಿರುತ್ತಾನೆ.

2. **ಉಗುರಿನ ಮಧ್ಯೆ ಅಡ್ಡರೇಖೆ**: ಉಗುರುಗಳ ಮಧ್ಯೆ ಅಡ್ಡ ರೇಖೆ

ಕಂಡುಬಂದರೆ ಎರಡು ಮೂರು ತಿಂಗಳ ಹಿಂದೆ ಜಾತಕನು ಯಾವುದೋ ಗಂಭೀರ ಖಾಯಿಲೆಯಿಂದ ನರಳಿದ್ದಾನೆಂದು ಸೂಚಿಸುತ್ತದೆ. ಒಂದು ವೇಳೆ ಈ ಅಡ್ಡರೇಖೆ ಉಗುರಿನ ಮೇಲಂಚಿನ ಹತ್ತಿರಕ್ಕೆ ತಲುಪುತ್ತಿರುವಂತೆ ಕಂಡರೆ ಅಂತಹ ವ್ಯಕ್ತಿ ರೋಗ ಪೀಡಿತನಾಗುವನೆಂದು ಪೂರ್ವ ಸೂಚನೆ ನೀಡುತ್ತದೆ.

**3.ಕಪ್ಪು ಬಿಂದು**: ವ್ಯಕ್ತಿಯ ಬೆರಳಿನ ಉಗುರಿನ ಮೇಲೆ ಕಪ್ಪು ಬಿಂದು ಇದ್ದರೆ ಅಂತಹ ವ್ಯಕ್ತಿಗೆ ಹತ್ತಿರದ ಭವಿಷ್ಯದಲ್ಲೇ ಭಯಂಕರ ವಿಪತ್ತು, ತೊಂದರೆ, ಕಷ್ಟ ಅಥವಾ ದುಃಖ ಬರುತ್ತದೆಂದು ತಿಳಿಸುತ್ತದೆ. ಈ ಕಪ್ಪು ಬಿಂದು ಯಾವಾಗಲೂ ಇರದೆ ಯಾವುದೋ ಸಮಯದಲ್ಲಿ ಮಾತ್ರ ಮೂಡುತ್ತವೆ ಮತ್ತು ಅಳಿಸಿ ಹೋಗುತ್ತವೆ. ಕಪ್ಪು ಬಿಂದು ಇರುವುದರ ಅರ್ಥ ರಕ್ತದಲ್ಲಿ ದೋಷ ಉಂಟಾಗಿದೆ ಎಂದು ತೋರಿಸುವುದೇ ಆಗಿದೆ. ಶೀಘ್ರವೇ ಅಂತಹ ವ್ಯಕ್ತಿ ಸಿಡುಬು, ಮಲೇರಿಯಾ, ಜ್ವರ ಅಥವಾ ರಕ್ತ ದೋಷದಿಂದ ಪೀಡಿತನಾಗುವನೆಂದು ಸೂಚಿಸುತ್ತದೆ.

**4. ಒಂದಕ್ಕಿಂತ ಹೆಚ್ಚು ಅಡ್ಡರೇಖೆಗಳು**: ಉಗುರುಗಳ ಮೇಲೆ ಎಷ್ಟು ಹೆಚ್ಚು ಅಡ್ಡರೇಖೆಗಳು ಇರುವುದೋ ರೋಗ ಅಷ್ಟೇ ಗಂಭೀರವಾದುದೆಂದು ಭಾವಿಸಬೇಕು. ಉಗುರಿನ ಬೇರುಗಳ ಕಡೆ ಇರುವ ರೇಖೆಗಳ ಭವಿಷ್ಯದಲ್ಲಿ ಉಂಟಾಗುವ ರೋಗವನ್ನು ಸೂಚಿಸುತ್ತವೆ.

ಹಳೆಯ ಉಗುರು ಹೋಗಿ ಹೊಸ ಉಗುರು ಬಂದರೆ ರೋಗನಾಶವಾಗಿ ಹೊಸ ಜೀವನ ದೊರಕಿದೆಯೆಂದು ತಿಳಿಯಬೇಕು. ಒಂದು ವೇಳೆ ಹೊಸ ಉಗುರು ಸಹ ಅಡ್ಡರೇಖೆಯಿಂದ ಕೂಡಿದ್ದರೆ ರೋಗವಮೂಲದಿಂದ ನಷ್ಟವಾಗಿವೆಯೆಂದು ಉದ್ದರೇಖೆಯಿಂದ ಕೂಡಿದ್ದರೆ ರೋಗ ಮೂಲದಿಂದ ನಷ್ಟವಾಗಿಲ್ಲವೆಂದು ಭಾವಿಸಬೇಕು.

**5. ಕೀಲಿ**: ಉಗುರಿನ ಮೇಲೆ ಬಿಳಿಯ ಬಣ್ಣದ ಕೀಲಿ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಛವಮಾಪೂರ್ಣ ಜೀವನ, ಅಸಫಲ ಪ್ರೇಮ, ಕಾಮುಕತೆ, ಆತ್ಮವಂಚನೆ, ಹೀನತೆ, ವ್ಯಕ್ತಿಪೂಜೆ ಮುಂತಾದ ಗುಣಗಳಿಂದ ಕೂಡಿರುತ್ತಾನೆಂದು ಸೂಚಿಸುತ್ತವೆ.

**6. ಬಿಳಿಯ ಬಿಂದು**: ಉಗುರಿನ ಮೇಲಿರುವ ಬಿಳಿಯ ಬಿಂದು ರಕ್ತ ದೋಷವನ್ನು ಸೂಚಿಸುತ್ತದೆ ಮತ್ತು ರಕ್ತಚಲನೆಯಲ್ಲಿ ಅಡಚಣೆ ಉಂಟಾಗಿದೆಯೆಂದು ತಿಳಿಸುತ್ತದೆ. ಇಂತಹ ಚಿಹ್ನೆ ಬೆರಳುಗಳ ಮೇಲೆ ಕಾಣಿಸಿದರೆ ಹತ್ತಿರದ ಭವಿಷ್ಯದಲ್ಲೇ ರೋಗ ಉಂಟಾಗುವುದೆಂದು

ಭಾವಿಸಬೇಕು.

**7. ಚಿಕ್ಕದಾದ ಚಂದ್ರನ ಚಿಹ್ನೆ:** ಯಾವುದೇ ಬೆರಳುಗಳ ಉಗುರಿನ ಮೇಲೆ ಈ ಚಿಹ್ನೆ ಕಂಡರೆ ಅದು ನಿಶ್ಯಕ್ತ ಹೃದಯದ ಪರಿಚಯ ನೀಡುತ್ತದೆ. ಇದರ ಪ್ರಭಾವದಿಂದ ಮನುಷ್ಯ ಸ್ವಲ್ಪವೇ ವಿಪತ್ತಿನಿಂದಲೂ ಗಾಬರಿಯಾಗುತ್ತಾನೆ ಮತ್ತು ಬೆವರು ಬರತೊಡಗುತ್ತದೆ. ಹೃದಯದ ಬಡಿತ ಹೆಚ್ಚಾಗುತ್ತದೆ ಮತ್ತು ಅವನ ಯಾವುದೇ ಕೆಲಸವನ್ನು ಮಾಡಲಾಗುವುದಿಲ್ಲ.

ಒಂದು ವೇಳೆ ಈ ಚಿಹ್ನೆ ತೋರು ಬೆರಳಿನ ಉಗುರಿನ ಮೇಲೆ ಗೋಚರಿಸಿದರೆ ತಕ್ಷಣವೇ ಏಳ್ಗೆ, ವ್ಯಾಪಾರ ವೃದ್ಧಿ, ಶುಭ ಸಂದೇಶ ದೊರೆಯುವ ಸೂಚನೆ ನೀಡುತ್ತದೆ.

ಒಂದು ವೇಳೆ ಈ ಚಿಹ್ನೆ ಮಧ್ಯದ ಬೆರಳಿನ ಉಗುರಿನ ಮೇಲೆ ಗೋಚರಿಸಿದರೆ ಅಂತಹ ವ್ಯಕ್ತಿ ಯಂತ್ರದ ಕಾರ್ಯದಿಂದ ಕೆಲಸ ಪಡೆದುಕೊಳ್ಳುತ್ತಾನೆ ಮತ್ತು ಆಕಸ್ಮಾತ್ ಧನಲಾಭ ಉಂಟಾಗುತ್ತದೆ.

ಒಂದು ವೇಳೆ ಉಂಗುರದ ಬೆರಳಿನ ಉಗುರಿನ ಮೇಲೆ ಈ ಚಿಹ್ನೆ ಕಂಡುಬಂದರೆ ಅಂತಹ ವ್ಯಕ್ತಿ ಶೀಘ್ರವೇ ಗೌರವ, ಉನ್ನತಿ, ಧನಲಾಭ, ಕೀರ್ತಿ ಪಡೆದುಕೊಳ್ಳುತ್ತಾನೆ.

ಒಂದು ವೇಳೆ ಕಿರುಬೆರಳಿನ ಉಗುರಿನ ಮೇಲೆ ಈ ಚಿಹ್ನೆ ಗೋಚರಿಸಿದರೆ ಅಂತಹ ವ್ಯಕ್ತಿ ಉದ್ಯಮ ಲಾಭ ಪಡೆಯುತ್ತಾನೆ.

ಒಂದು ವೇಳೆ ಹೆಬ್ಬೆರಳಿನ ಉಗುರಿನ ಜಡದಲ್ಲಿ ಈ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಐಶ್ವರ್ಯ, ಭೌತಿಕ ಸುಖ, ಉನ್ನತಿ ಪಡೆಯುತ್ತಾನೆ ಮತ್ತು ಆತನಿಗೆ ಎಲ್ಲಾ ಶುಭಕಾರ್ಯಗಳೇ ಸಂಭವಿಸುತ್ತವೆ.

**8. ದೊಡ್ಡದಾದ ಅರ್ಧಚಂದ್ರ:** ಚಿಕ್ಕದಾದ ಚಂದ್ರ ಚಿಹ್ನೆ ಇದ್ದರೆ ಯಾವ ಫಲ ದೊರೆಯುವುದೋ ದೊಡ್ಡದಾದ ಚಂದ್ರ ಚಿಹ್ನೆ ಇದ್ದರೆ ಅದರ ವಿರುದ್ಧ ಫಲ ದೊರೆಯುತ್ತದೆ. ಒಂದು ವೇಳೆ ಉಗುರಿನ ಮೇಲೆ ಪೂರ್ಣ ಚಂದ್ರ ಚಿಹ್ನೆ ಇದರೆ ಅಂತಹ ವ್ಯಕ್ತಿಗೆ ಬೆವರು ಧಾರಾಳವಾಗಿ ಸುರಿಯುತ್ತದೆ. ಪ್ರಾಯಃ ಇಂತಹ ವ್ಯಕ್ತಿ ನೆಗಡಿ ಮತ್ತು ಛಳಿಯಿಂದ ಪೀಡಿತನಾಗಿರುತ್ತಾನೆ. ನೀರಿನಿಂದ ಗಂಡಾಂತರ ಬರುತ್ತದೆ ಮತ್ತು ಇಂತಹ ವ್ಯಕ್ತಿ ನೀರನ್ನು ಕಂಡರೆ ಹೆದರುತ್ತಾನೆ.

ಉಗುರಿನ ಮೇಲೆ ಮಧ್ಯಮಾಕಾರದ ಚಂದ್ರ ಇರುವುದು ಶುಭ ಸೂಚಕವಾಗಿರುತ್ತದೆ. ಇದರಿಂದ ಹೃದಯಕ್ಕೆ ಶಕ್ತಿ ದೊರೆಯುತ್ತದೆ. ಇಂತಹ

ವ್ಯಕ್ತಿ ಧೈರ್ಯವಂತನು, ಶಾಂತನು, ಪರಿಶ್ರಮಿಯೂ, ಸಾಹಸಿಯೂ, ಆರೋಗ್ಯವಂತನೂ ಆಗಿರುತ್ತಾನೆ.

**9.ಕಪ್ಪು ಚಿಹ್ನೆ ಮತ್ತು ಬಿಳಿಯ ಚಿಹ್ನೆ**: ಹೆಬ್ಬೆರಳಿನ ಮೇಲೆ ಬಿಳಿಯ ಚಿಹ್ನೆ ಇದ್ದರೆ ಅದು ನಿಶ್ಶಕ್ತ ಪ್ರೇಮದ ಪ್ರತೀಕವಾಗಿರುತ್ತದೆ. ಹೆಬ್ಬೆರಳಿನ ಮೇಲೆ ಕಪ್ಪು ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಆವೇಶದಿಂದ ಅಪರಾಧ ಮಾಡುತ್ತಾನೆಂಬುದನ್ನು ಸೂಚಿಸುತ್ತದೆ.

ತೋರು ಬೆರಳಿನ ಮೇಲೆ ಬಿಳಿಯ ಚಿಹ್ನೆ ಇದ್ದರೆ ಕೆಲಸದ ಪ್ರತೀಕವಾಗಿರುತ್ತದೆ. ಕಪ್ಪು ಚಿಹ್ನೆ ಇದ್ದರೆ ನಷ್ಟ ಮತ್ತು ಅಪಮಾನದ ಸೂಚನೆ ದೊರೆಯುತ್ತದೆ.

ಮಧ್ಯದ ಬೆರಳಿನ ಉಗುರಿನ ಮೇಲೆ ಈ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ದೂರ ದೇಶದ ಸಫಲ ಯಾತ್ರೆ ಮಾಡುತ್ತಾನೆಂಬುದನ್ನು ಸೂಚಿಸುತ್ತದೆ. ಕಪ್ಪು ಚಿಹ್ನೆ ಅಶುಭ ಘಟನೆಗಳು ಸಂಭವಿಸುವುದೆಂದು ಸೂಚಿಸುತ್ತದೆ.

ಉಂಗುರದ ಬೆರಳಿನ ಉಗುರಿನ ಮೇಲೆ ಬಿಳಿಯ ಚಿಹ್ನೆ ಇದ್ದರೆ ಗೌರವ ಮತ್ತು ಸಂಪತ್ತು ದೊರೆಯುತ್ತದೆಂಬುದನ್ನು ಸೂಚಿಸುತ್ತದೆ. ಕಪ್ಪು ಚಿಹ್ನೆ ಇದ್ದರೆ ಗೌರವ ನಷ್ಟವಾಗುತ್ತದೆಂಬುದನ್ನು ತಿಳಿಸುತ್ತದೆ.

ಕಿರುಬೆರಳಿನ ಮೇಲೆ ಬಿಳಿಯ ಚಿಹ್ನೆ ಇದ್ದರೆ ವ್ಯಾಪಾರ ವೃದ್ಧಿಯಾಗುವ ಸೂಚನೆ ನೀಡುತ್ತದೆ. ಕಪ್ಪು ಚಿಹ್ನೆ ನಷ್ಟವಾಗುತ್ತದೆಂಬುದನ್ನು ತಿಳಿಸುತ್ತದೆ.

**10.ಹಲ್ಲಿನ ಚಿಹ್ನೆ**: ಒಂದು ವೇಳೆ ಉಗುರುಗಳ ಮೇಲೆ ಹಲ್ಲಿನಂತಹ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ದೊಡ್ಡ ಖಾಯಿಲೆಯಿಂದ ನರಳುತ್ತಾನೆಂಬುದನ್ನು ಸೂಚಿಸುತ್ತದೆ.

**11.ಬಿಳಿಯ ಚಿಕ್ಕ ಕಲೆ**: ಒಂದು ವೇಳೆ ಉಗುರುಗಳ ಮೇಲೆ ಬಿಳಿಯ ಚಿಕ್ಕ ಕಲೆಯು ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ವ್ಯಾಪಾರದಲ್ಲಿ ನಷ್ಟವನ್ನು ಹೊಂದುತ್ತಾನೆ.

**12.ವಿಭಿನ್ನ ಆಕೃತಿಗಳು**: ಒಂದು ವೇಳೆ ಕೆಂಪು ಉಗುರಗಳ ಮೇಲೆ ವಿಭಿನ್ನ ಅಕೃತಿಗಳ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಮಹಾದುಷ್ಟ ಸ್ವಭಾವದವನಾಗಿರುತ್ತಾನೆ.

**13.ನಕ್ಷತ್ರ**: ಒಂದು ವೇಳೆ ಉಗುರುಗಳ ಮೇಲೆ ಬಿಳಿ ಅಥವಾ ಕಪ್ಪು ಬಣ್ಣದ ನಕ್ಷತ್ರ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ವಿಚಿತ್ರ ಸ್ವಭಾವದವನು ಮತ್ತು

ಪ್ರದರ್ಶನಪ್ರಿಯನೂ ಆಗಿರುತ್ತಾನೆ.

**14.ತೋರು ಬೆರಳಿನ ಕಪ್ಪು ಎಳ್ಳು:** ಒಂದು ವೇಳೆ ತೋರು ಬೆರಳಿನ ಉಗುರಿನ ಮೇಲೆ ಕಪ್ಪು ಎಳ್ಳಿನ ಗುರುತಿದ್ದರೆ ಅಶುಭವೆಂದು ತಿಳಿದುಕೊಳ್ಳಬೇಕು. ಇಂತಹ ವ್ಯಕ್ತಿ ವ್ಯಾಪಾರದಲ್ಲಿ ಬಾರಿ ಬಾರಿಗೂ ನಷ್ಟವನ್ನೇ ಅನುಭವಿಸುತ್ತಾನೆ. ಇಂತಹ ವ್ಯಕ್ತಿ ತನ್ನ ಜೀವನದಲ್ಲಿ ಸದಾ ದುಃಖಿಯಾಗಿರುತ್ತಾನೆ.

**15. ಮಧ್ಯದ ಬೆರಳಿನ ಮೇಲೆ ಕವಡೆ:** ಒಂದು ವೇಳೆ ಮಧ್ಯದ ಬೆರಳಿನ ಉಗುರಿನ ಮೇಲೆ ಸ್ಥಾಯೀ ರೂಪದಲ್ಲಿ ಕವಡೆಯ ಚಿಹ್ನೆ ಅಂಕಿತವಾಗಿದ್ದರೆ ಅಂತಹ ವ್ಯಕ್ತಿ ಬಹಳ ಚೆನ್ನಾಗಿ ದೇಶಾಟನೆ ಮತ್ತು ಯಾತ್ರೆಗಳನ್ನು ಮಾಡುತ್ತಾನೆ. ಇದರ ಜೊತೆಗೆ ಒಂದು ವೇಳೆ ಚಂದ್ರಕ್ಷೇತ್ರದ ಮೇಲೆ ನ್ಯೂನಕೋನ (90°ಗಿಂತ ಕಡಿಮೆ) ವಾಗುತ್ತಾ ಎರಡು ರೇಖೆಗಳಿದ್ದರೆ ದೂರ ಯಾತ್ರೆಯಾಗುತ್ತದೆ.

ಆಯಸ್ಸಿನ ರೇಖೆಯಿಂದ ಚಂದ್ರಕ್ಷೇತ್ರದ ಮೇಲೆ ಹೋಗುವಂಥ ರೇಖೆಗಳು ಸಮುದ್ರ ಯಾತ್ರೆ ಅಥವಾ ನೌಕಾ ಪಡೆಯಲ್ಲಿ ಉದ್ಯೋಗ ಪಡೆಯುವ ಸೂಚನೆ ನೀಡುತ್ತದೆ.

**16.ಮಧ್ಯದ ಬೆರಳಿನ ಮೇಲೆ ಕಪ್ಪು ಎಳ್ಳು:** ಒಂದು ವೇಳೆ ಮಧ್ಯದ ಬೆರಳಿನ ಉಗುರಿನ ಮೇಲೆ ಕಪ್ಪು ಎಳ್ಳಿನ ಚಿಹ್ನೆ ಸ್ಥಾಯೀ ರೂಪದಲ್ಲಿ ಅಂಕಿತವಾಗಿದ್ದರೆ ಅಂತಹ ವ್ಯಕ್ತಿ ಯಾವಾಗಲೂ ಯಾವುದಾದರೊಂದು ರೋಗದಿಂದ ಪೀಡಿತನಾಗಿರುತ್ತಾನೆ. ಅನೇಕ ದೀರ್ಘ ಖಾಯಿಲೆಯಿಂದ ಬಳಲಿ ಬಳಲಿ ಬದುಕುತ್ತಾನೆ. ಅನೇಕ ಬಾರಿ ಆಘಾತಗಳನ್ನು ಅನುಭವಿಸುತ್ತಾನೆ.

**17. ಉಂಗುರದ ಬೆರಳಿನ ಮೇಲೆ ಕವಡೆ:** ಒಂದು ವೇಳೆ ಉಂಗುರದ ಬೆರಳಿನ ಉಗುರಿನ ಮೇಲೆ ಕವಡೆಯ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ತೀಕ್ಷ್ಣ ಬುದ್ಧಿಯವನು, ಹೆಚ್ಚು ಚುರುಕು, ಜ್ಞಾಪಕಶಕ್ತಿ ಉಳ್ಳವನು, ಚೆನ್ನಾಗಿ ಓದಿ ಬರೆಯುವವನು, ವಿದ್ವಾಂಸನು, ಕೀರ್ತಿಶಾಲಿಯೂ ಆಗಿರುತ್ತಾನೆ. ಮುಖಂಡತ್ವ ನಿರ್ವಹಿಸುವ ಪ್ರಧಾನ ಪದಾಧಿಕಾರಿಯೂ ಆಗಿರುತ್ತಾನೆ.

ಒಂದು ವೇಳೆ ಸೂರ್ಯರೇಖೆ ಮತ್ತು ಭಾಗ್ಯರೇಖೆಯೂ ಶುಭವಾಗಿದ್ದರೆ ಅದು ಚಿನ್ನದಲ್ಲಿ ಶ್ರೀಗಂಧದ ಸುಗಂಧ ಸೇರಿಕೊಂಡಿರುವಂತೆ ಕೆಲಸ ಮಾಡುತ್ತದೆ. ಪ್ರತಿಯೊಂದು ಕಾರ್ಯದಲ್ಲೂ ಇಂತಹ ವ್ಯಕ್ತಿ ಕೀರ್ತಿ

ಮತ್ತು ಗೌರವವನ್ನು ಪಡೆಯುತ್ತಾನೆ.

**18. ಉಂಗುರದ ಬೆರಳಿನ ಮೇಲೆ ಕಪ್ಪು ಎಳ್ಳು:** ಉಂಗುರದ ಬೆರಳಿನ ಉಗುರಿನ ಮೇಲೆ ಕಪ್ಪು ಎಳ್ಳಿನ ಗುರುತಿದ್ದರೆ ಅಂತಹ ವ್ಯಕ್ತಿ ವಾದ ವಿವಾದದಲ್ಲಿ ಯಾವಾಗಲೂ ಸೋಲನ್ನೇ ಪಡೆದುಕೊಳ್ಳುತ್ತಾನೆ ಮತ್ತು ಸಮಾಜ ಅವನನ್ನು ಬಾರಿ ಬಾರಿಗೂ ಅವಮಾನ ಮಾಡುತ್ತದೆ. ಇಂತಹ ವ್ಯಕ್ತಿ ಶುಭಕಾರ್ಯ ಮಾಡಲು ಪ್ರಾರಂಭಿಸಿದಾಗೆಲ್ಲಾ ಅಪಕೀರ್ತಿಗೆ ಪಾತ್ರನಾಗುತ್ತಾನೆ. ಈ ವ್ಯಕ್ತಿ ತನ್ನ ನಿಂದೆಯಿಂದ ನಾಚಿ ಏಕಾಂತವಾಸ ಮಾಡುತ್ತಾನೆ ಮತ್ತು ಸಮಾಜದಿಂದ ದೂರವಿರುತ್ತಾನೆ. ಅನೇಕ ಬಾರಿ ಲೋಕೋಪವಾದಕ್ಕೆ ಗುರಿಯಾಗಬೇಕಾಗುತ್ತದೆ. ಈ ಕಪ್ಪು ಎಳ್ಳಿನ ಚಿಹ್ನೆ ಯಾವುದೇ ರೀತಿಯಿಂದಲೂ ಶುಭವಾದುದಲ್ಲ.

**19. ಕಿರುಬೆರಳಿನ ಮೇಲೆ ಕವಡೆ:** ಈ ಚಿಹ್ನೆ ಇದ್ದವರು ಓದುವುದರಲ್ಲಿ ಸದಾ ತಲ್ಲೀನರಾಗಿರುತ್ತಾರೆ ಮತ್ತು ದೊಡ್ಡ ವಿದ್ವಾಂಸರಾಗುತ್ತಾರೆ. ಸಮಾಜದ ಗಣ್ಯವ್ಯಕ್ತಿಗಳು ಇಂಥವರನ್ನು ಬಹುವಾಗಿ ಗೌರವಿಸುತ್ತಾರೆ. ಕಾನೂನು ಮತ್ತು ಸಾಹಿತ್ಯಿಕ ಕ್ಷೇತ್ರದಲ್ಲಿ ಇಂತವರು ಬಹಳಷ್ಟು ಹಣವನ್ನು ಸಂಪಾದಿಸುತ್ತಾರೆ. ಶ್ರೇಷ್ಠ ವ್ಯಾಪಾರ ಮತ್ತು ಮೇಲ್ಮಟ್ಟದ ವ್ಯಾಪಾರದಿಂದಲೂ ಹಣವನ್ನು ಗಳಿಸುತ್ತಾರೆ. ಇಂಥವರು ಪರೋಪಕಾರಿಗಳೂ, ವಿಶ್ವಾಸನೀಯರು, ದಯಾಳುಗಳು, ಪ್ರಾಮಾಣಿಕರು ಮತ್ತು ಧಾರ್ಮಿಕರು ಆಗಿರುತ್ತಾರೆ. ಬಡಬಗ್ಗರ ಬಗ್ಗೆ ಇವರಿಗೆ ವಿಶೇಷ ಕಾಳಜಿ ಇರುತ್ತದೆ.

**20. ಕಿರುಬೆರಳಿನ ಮೇಲೆ ಕಪ್ಪು ಎಳ್ಳು:** ಇಂತಹ ಸ್ಥಾಯೀ ಅಥವಾ ಅಸ್ಥಾಯೀ ರೂಪದ ಚಿಹ್ನೆ ಯಾವಾಗಲೂ ಅಶುಭ ಫಲವನ್ನೇ ಕೊಡುತ್ತದೆ. ಇಂಥವರು ಒಂದು ವೇಳೆ ವ್ಯಾಪಾರ ಮಾಡಿದರೆ ವ್ಯಾಪಾರದಲ್ಲಿ ನಷ್ಟ ಉಂಟಾಗುತ್ತದೆ. ಕೆಲಸದಲ್ಲಿ ತೊಂದರೆಯಾಗುತ್ತದೆ. ಆರೋಗ್ಯ ಹದಗೆಡುತ್ತದೆ. ಗಡಿಬಿಡಿ ಮನಸ್ಸಿನಲ್ಲಿ ಉಚ್ಚಾಟನೆ, ಶಿಕ್ಷಣದಲ್ಲಿ ಸೋಲು, ಕುಟುಂಬದಲ್ಲಿ ವೈಮನಸ್ಯತೆ, ಮಿತ್ರರಿಂದ ಮೋಸ ಸಂಭವಿಸುತ್ತದೆ. ಮನೆಯಲ್ಲಿ ಕಳ್ಳತನವಾಗುತ್ತದೆ ಮತ್ತು ಯಾವಾಗಲೂ ನಿರಾಶೆಯ ಭಾವನೆ ಮನಸ್ಸಿನಲ್ಲಿ ಹರಡಿಕೊಂಡಿರುತ್ತದೆ.

**21. ನೀಲಿ ಚಿಹ್ನೆ:** ಉಗುರುಗಳ ಮೇಲೆ ನೀಲಿ ಚಿಹ್ನೆ ದುರ್ಭಾಗ್ಯ ಸೂಚಕವೆಂದು ನಂಬಲಾಗಿದೆ.

**22. ಹಳದಿ ಬಿಂದು:** ಉಗುರುಗಳ ಮೇಲೆ ಹಳದಿ ಬಿಂದು

ಮೃತ್ಯುಸೂಚಕವೆಂದು ನಂಬಲಾಗಿದೆ.

**23. ಮಿಶ್ರಿತ ಬಣ್ಣ:** ಉಗುರಗಳ ಆರಂಭದಲ್ಲಿ ಇರುವ ಬಣ್ಣ ಒಂದು ವೇಳೆ ಇತರೆ ಬಣ್ಣಗಳಿಂದ ಮಿಶ್ರಿತವಾಗಿದ್ದರೆ ಅಂತಹ ಜಾತಕನು ದುಷ್ಟನು ಮತ್ತು ಜಗಳಗಂಟಿಯೂ ಆಗಿರುತ್ತಾನೆ. ಅವನ ಸಾವು ಕಾಲರಾ ರೋಗದಿಂದ ಉಂಟಾಗುತ್ತದೆ.

**24. ಉಗುರಿನ ಕಲೆ:** ಉಗುರುಗಳ ಕಲೆಗಳು ಚಿಂತೆ, ರೋಗ, ರಕ್ತ ಸಂಚಾಲನ ಕ್ರಿಯೆಯ ಪರಿಣಾಮ, ಕಠಿಣ ಪರಿಶ್ರಮ, ಮಾನಸಿಕ ಕ್ರಿಯೆ, ಸ್ನಾಯು ಮಂಡಲದ ಕ್ಷೀಣತೆ, ಅಪ್ರಾಕೃತಿಕ ಮತ್ತು ಅಸ್ವಾಭಾವಿಕ ಕಾರ್ಯ, ವಿಷಮ ಪರಿಸ್ಥಿತಿಗಳ ಕಾರಣ, ಮದ್ಯ ಮುಂತಾದವುಗಳ ಸೇವನೆಗೆ ಕಾರಣ, ಬೀಡಿ – ಸಿಗರೇಟ್– ಹೊಗೆಸೊಪ್ಪು ಮುಂತಾದವುಗಳ ಸೇವನೆಯಿಂದ ಆಂಗ್ಯ ಮೇಲೆ ಮತ್ತು ಉಗುರುಗಳ ಮೇಲೆ ತಮ್ಮ ಪ್ರಭಾವವನ್ನು ಬಿಟ್ಟುಬಿಡುತ್ತವೆ. ಇದರಿಂದಾಗಿಯೇ ಉಗುರುಗಳು, ಕಪ್ಪು–ನೀಲಿ–ಹಳದಿ ಬಣ್ಣದಿಂದ ಕೂಡುತ್ತವೆ. ಶರೀರ ದುರ್ಬಲವಾಗುತ್ತದೆ ಮತ್ತು ಆಕೃತಿ ಕೆಡುತ್ತದೆ.

# ಅಧ್ಯಾಯ 3

# ಪರ್ವತ

ಅಂಗೈನ ಅಧ್ಯಯನ ಮಾಡುವಾಗ ಪರ್ವತಗಳ ಅಧ್ಯಯನ ಮಾಡುವುದು ಆವಶ್ಯಕವಾಗಿರುತ್ತದೆ. ರೇಖೆಗಳು ಉಂಟಾಗುವ ಮತ್ತು ವಿಕಾಸಗೊಳ್ಳುವ ಮಾಧ್ಯಮ ಪರ್ವತವೇ ಆಗಿರುತ್ತದೆ.

ಪ್ರತ್ಯೇಕ ಬೆರಳಿನ ಆಧಾರದ ಮೇಲೆ ಸ್ವಲ್ಪ ಹೆಚ್ಚು ಉಬ್ಬಿರುವ ಅಥವಾ ಮೇಲಕ್ಕೆ ಎದ್ದಿರುವ ಸ್ಥಳವನ್ನು ಪರ್ವತವೆಂದು ಕರೆಯುತ್ತಾರೆ. ಅನೇಕ ಬಾರಿ ಈ ಉಬ್ಬುವಿಕೆ ಅನುಪಸ್ಥಿಯಂತಿರುತ್ತದೆ. ಈ ಶಕ್ತಿ ಕೇಂದ್ರ ಪರ್ವತಗಳ ಮತ್ತು ಸ್ನಾಯು ಶಕ್ತಿ ರಥಗಳಿಗೆ ಮಸ್ತಿಷ್ಕ ಮತ್ತು ಬೆನ್ನು ಮೂಳೆಯ ಮಧ್ಯದ ಸಂಬಂಧಗಳ ಬಗ್ಗೆ ಹೇಳಲು ಸಾಧ್ಯವಾಗುತ್ತದೆ.

ಈ ಪರ್ವತ ಮಾನವ ಪ್ರಕೃತಿ, ಅಭಿರುಚಿ, ಸ್ವಭಾವ ಮತ್ತು ಘಟನೆಗಳ ನಿರೂಪಣೆ ಮಾಡುತ್ತದೆ.

ಏಳು ಮೂಲ ಗ್ರಹಗಳ ಆಧಾರದ ಮೇಲೆಯೇ ಪರ್ವತಗಳ ನಾಮಕರಣವಾಗಿದೆ. ಗ್ರಹಗಳ ಉಬ್ಬುವಿಕೆಯ ಅನುಸಾರ ಅವುಗಳ ಗುಣಾವಗುಣ ವ್ಯಕ್ತಿಯಲ್ಲಿ ವಿದ್ಯಮಾನವಾಗಿರುತ್ತವೆ. ಉದಾಹರಣೆಗೆ ಸೂರ್ಯ ಗೌರವ, ಕೀರ್ತಿ, ಪ್ರಸಿದ್ಧಿ ಮುಂತಾದವುಗಳ ಕಾರಕನಾಗಿದ್ದಾನೆ. ಒಂದು ವೇಳೆ ಸೂರ್ಯ ಪರ್ವತ ಉಬ್ಬಿದ್ದರೆ ಮೇಲೆ ಹೇಳಿದ ಗುಣಗಳು ವಿಶೇಷವಾಗಿ ಹೆಚ್ಚಾಗುತ್ತದೆ ಇಲ್ಲದೆ ಹೋದರೆ ಮೇಲೆ ತಿಳಿಸಿದ ಗುಣಗಳು ನ್ಯೂನತೆಯ ಕಡೆಗೆ ಹೋಗುತ್ತವೆ.

ಪರ್ವತಗಳು ಮೂರು ರೂಪದಲ್ಲಿರುತ್ತದೆ.

**1.ಅವಿಕಸಿತ ಪರ್ವತ, 2.ವಿಕಸಿತ ಪರ್ವತ, 3.ಸಾಮಾನ್ಯ ಪರ್ವತ**

## ಪರ್ವತ ಕ್ಷೇತ್ರದ ಪರಿಚಯ

1. ತೋರು ಬೆರಳು ಅರ್ಥಾತ್ ಪ್ರಥಮ ಬೆರಳಿನ ಮೂಲದಲ್ಲಿ ಯಾವ ಮಾಂಸದ ಚಿಕ್ಕ ಗಾದಿ ಇರುವುದೋ ಅದು ಜೀವನ ರೇಖೆಯವರೆಗೆ ಅವಸ್ಥಿತವಾಗಿರುತ್ತದೆ ಅದನ್ನೇ ಗುರು ಪರ್ವತ ಅಥವಾ ಬೃಹಸ್ಪತಿ ಪರ್ವತ ಎಂದು ಕರೆಯಲಾಗುತ್ತದೆ.

2. ಮಧ್ಯದ ಬೆರಳಿನ ಮೂಲದಲ್ಲಿ ಸ್ಥಿತವಾಗಿರುವ ಮಾಂಸದ ಚಿಕ್ಕಗಾದಿಯುಳ್ಳ ಭಾಗವನ್ನು ಶನಿಕ್ಷೇತ್ರ ಅಥವಾ ಶನಿ ಪರ್ವತ ಎಂದು ಕರೆಯುತ್ತಾರೆ.

3. ಉಂಗುರದ ಬೆರಳಿನ ಮೂಲದಲ್ಲಿ ಹೃದಯ ರೇಖೆಯವರೆಗಿನ ಮಾಂಸದ ಭಾಗ ಸೂರ್ಯ ಕ್ಷೇತ್ರ, ಅಥವಾ ಸೂರ್ಯ ಪರ್ವತ ಎಂದು ಕರೆಯಲ್ಪಡುತ್ತದೆ.

4. ಕಿರುಬೆರಳಿನ ಮೂಲದಿಂದ ಹೃದಯ ರೇಖೆಯವರೆಗಿನ ಮಾಂಸದ ಚಿಕ್ಕ ಗಾದಿ ಬುಧ ಕ್ಷೇತ್ರ ಅಥವಾ ಬುಧ ಪರ್ವತ ಎಂದು ಕರೆಯಲ್ಪಡುತ್ತದೆ.

5. ಹೆಬ್ಬೆರಳಿನ ಮೂಲದಲ್ಲಿ ಜೀವನ ರೇಖೆಯವರೆಗೆ ಹರಡಿರುವ




ಮಾಂಸದ ಭಾಗ ಶುಕ್ರಕ್ಷೇತ್ರ ಅಥವಾ ಶುಕ್ರ ಪರ್ವತ ಎಂದು ಕರೆಯಲ್ಪಡುತ್ತದೆ.

6. ಅಂಗೈನ ಎಡಭಾಗದಲ್ಲಿರುವ ಶುಕ್ರ ಕ್ಷೇತ್ರದ ಸರಿಯಾಗಿ ವಿರುದ್ಧದಲ್ಲಿ, ಬುಧ ಕ್ಷೇತ್ರದ ಕೆಳಗೆ, ಮಣಿಕಟ್ಟು ಮತ್ತು ಶೀರ್ಷ ರೇಖೆಯ ಮಧ್ಯದ ಭಾಗ ಚಂದ್ರಕ್ಷೇತ್ರ ಅಥವಾ ಚಂದ್ರ ಪರ್ವತ ಎಂದು ಕರೆಯಲ್ಪಡುತ್ತದೆ.

7. ಶುಕ್ರದ ಸರಿಯಾಗಿ ಮೇಲೆ ಮತ್ತು ಜೀವನ ರೇಖೆಯಿಂದ

ಸುತ್ತುವರೆಯಲ್ಪಟ್ಟ ಭಾಗವನ್ನು ಮಂಗಳ ಕ್ಷೇತ್ರ ಅಥವಾ ಮಂಗಳ ಪರ್ವತ ಎಂದು ಕರೆಯುತ್ತಾರೆ.

ವಿದ್ವಾಂಸರು ಮಂಗಳವನ್ನು ಎರಡು ಭಾಗವಾಗಿ ವಿಂಗಡಿಸಿದ್ದಾರೆ.

i) ಭೌತಿಕ ಮತ್ತು ii) ಮಾನಸಿಕ

ಮೇಲೆ ತಿಳಿಸಿದ ಕ್ಷೇತ್ರ ಭೌತಿಕ ಮಂಗಳದ್ದಾಗಿದೆ ಮತ್ತು ಅದರ ಸರಿಯಾಗಿ ವಿರುದ್ಧದ ಅಂಗೈನ ಎರಡನೇ ದಡದ ಮೇಲೆ ಹೃದಯ ಮತ್ತು ಶೀರ್ಷರೇಖೆಯ ಮಧ್ಯದ ಭಾಗ ಮಾನಸಿಕ ಮಂಗಳ ಕ್ಷೇತ್ರವಾಗಿದೆ.

8. ಅಂಗೈನ ಮಧ್ಯದ ಭಾಗವನ್ನು ಅಂದರೆ ಯಾವುದೋ ಆಳವಾದ ಹಳ್ಳದ ಭಾಗದಂತೆ ಇರುತ್ತದೋ ಅದನ್ನು ಎರಡು ಭಾಗಗಳಲ್ಲಿ ವಿಂಗಡಿಸಬಹುದು.

**i) ಶೀರ್ಷ ರೇಖೆಯ ಮೇಲುಭಾಗ, ii) ಶೀರ್ಷರೇಖೆಯ ಕೆಳಭಾಗ**

## ಗ್ರಹಗಳಿಗಿರುವ ಇಂಗ್ಲೀಷ್ ಹೆಸರುಗಳು

| | |
|---|---|
| **1. ಬೃಹಸ್ಪತಿ ಪರ್ವತ** | **– ಜುಪಿಟರ್** |
| **2. ಶನಿ ಪರ್ವತ** | **– ಸ್ಯಾಟರ್ನ್** |
| **3. ಸೂರ್ಯ ಪರ್ವತ** | **– ಸನ್** |
| **4. ಬುಧ ಪರ್ವತ** | **– ಮರ್ಕ್ಯುರಿ** |
| **5. ಶುಕ್ರ ಪರ್ವತ** | **– ವೀನಸ್** |
| **6. ಚಂದ್ರ ಪರ್ವತ** | **– ಮೂನ್** |
| **7. ಮಂಗಳ ಪರ್ವತ** | **– ಮಾರ್ಸ್** |
| **8. ರಾಹು ಪರ್ವತ** | **– ಡ್ರ್ಯಾಗನ್ಸ್ ಹೆಡ್** |
| **9. ಕೇತು ಪರ್ವತ** | **– ಡ್ರ್ಯಾಗನ್ಸ್ ಟೈಲ್** |

### ಗ್ರಹಗಳಿಗೆ ಸಂಬಂಧಪಟ್ಟ ಪ್ರಭಾವಗಳ ಪರಿಚಯ

**1. ಗುರು** – ರಾಜ್ಯ, ಸೇವೆ, ಇಚ್ಛಾ ಪ್ರದರ್ಶನ

**2. ಶನಿ** – ಮನನಶೀಲತೆ, ಏಕಾಂತಪ್ರಿಯತೆ, ರೋಗ, ಚಿಂತೆ, ಯಂತ್ರಗಳ ವ್ಯಾಪಾರ.

**3. ಸೂರ್ಯ** – ರಾಜ್ಯ, ಮಾನಸಿಕ ಉನ್ನತಿ, ಪ್ರಸಿದ್ಧಿ, ಗೌರವ, ಕೀರ್ತಿ, ಕಲಾಕೌಶಲ್ಯ.

**4. ಬುಧ** – ವೈವಾಹಿಕ ಉನ್ನತಿ, ವ್ಯಾಪಾರ, ಗಣಿತೀಯ ಕಾರ್ಯ.

**5. ಶುಕ್ರ** – ಸುಂದರತೆ, ಪ್ರೇಮ, ಸಿಂಗಾರ–ದರ್ಪ, ಐಶ್ವರ್ಯ, ಭೋಗ.

**6. ಚಂದ್ರ** – ಕಲ್ಪನೆ, ವಿಶಾಲತೆ, ಸಹೃದಯತೆ, ಮಾನಸಿಕ ಏಳ್ಗೆ, ಸಮುದ್ರದಾಚೆಯ ಪ್ರಯಾಣ.

**7. ಮಂಗಳ** – ಯುದ್ಧ, ಸಾಹಸ, ಶಕ್ತಿ, ಪರಿಶ್ರಮ, ಪೌರುಷೀಯ ಗುಣ.

**8. ರಾಹು** – ಆಕಸ್ಮಿಕ ಧನಪ್ರಾಪ್ತಿ, ಲಾಟರಿ, ಹೃದಯಾಘಾತ

**9. ಕೇತು** – ಧನ, ಭೌತಿಕ ಉನ್ನತಿ.

ಯಾರ ಕೈಗಳಲ್ಲಿ ಉನ್ನತ ಗ್ರಹದ ಕ್ಷೇತ್ರವಿರುತ್ತದೋ ಅಂಥವರಿಗೆ ಶುಭಫಲ ಉಂಟಾಗುತ್ತದೆ. ಉನ್ನತ ಗ್ರಹ ಕ್ಷೇತ್ರಗಳು ಯಾವಾಗಲೂ ಅನುಕೂಲ ಪ್ರಭಾವವನ್ನೇ ಬೀರುತ್ತವೆ. ಸದ್ಗುಣಗಳ, ಕರ್ತವ್ಯನಿಷ್ಠರ, ಸನ್ಮಾನಿತ ವ್ಯಕ್ತಿಗಳ ಕೈಗಳಲ್ಲಿ ಪರ್ವತ ಉಬ್ಬಿಕೊಂಡಿರುತ್ತದೆ.

ಸಮತಲ ಗ್ರಹ ಕ್ಷೇತ್ರ ಮಧ್ಯಮ ಫಲವನ್ನು ನೀಡುತ್ತದೆ. ಇದರಿಂದ ಹೆಚ್ಚು ಶುಭವೂ ಇಲ್ಲಾ ಮತ್ತು ಹೆಚ್ಚು ಅಶುಭವೂ ಇಲ್ಲ.

ಒಳಗೆ ಹೂತುಕೊಂಡಿರುವ ಗ್ರಹ ಕ್ಷೇತ್ರ ವಿರುದ್ಧ ಪ್ರಭಾವವನ್ನು ಬೀರುತ್ತದೆ ಅಂದರೆ ಅಶುಭ ಫಲವನ್ನು ನೀಡುತ್ತದೆ. ಒಂದೊಂದು ಬಾರಿ ಇದರ ಸ್ಥಿತಿ ಪ್ರಭಾವಹೀನವಾಗಿರುತ್ತದೆ.

ಉನ್ನತ ಗ್ರಹದ ಜೊತೆ ಬಣ್ಣ, ಕಲೆ, ಚರ್ಮದ ಸ್ಥಾನವನ್ನೂ ಸಹ ಅಧ್ಯಯನ ಮಾಡಬೇಕು.

ಸೂರ್ಯ ಪೃಥ್ವಿತತ್ವ, ಗುರು ಆಕಾಶ ತತ್ವ, ಶುಕ್ರಜಲತತ್ವ, ಶನಿವಾಯು ತತ್ವ, ಸೂರ್ಯ. ಅಹಂಕಾರ, ಚಂದ್ರಮನ ಮತ್ತು ಮಂಗಳ ಅಗ್ನಿಕ್ಷೇತ್ರವಾಗಿವೆ.

ಒಂದು ವೇಳೆ ಎಲ್ಲಾ ತತ್ವಗಳು ಸಮತಲವಾಗಿದ್ದರೆ ಈ ಅತಿವಾಂಛನೀಯ ಸ್ವರೂಪ ಜೀವನ ಸೂಚಕವಾಗಿರುತ್ತದೆ. ಇದನ್ನು ಶಕ್ತಿ ಮತ್ತು ಬಹುಲತೆಯಿಂದ ಕೂಡಿದ ಕೈ ಎಂದು ತಿಳಿದುಕೊಳ್ಳಬೇಕು.

ಪರ್ವತ ಸರ್ವಥಾ ಲುಪ್ತವಾಗಿದ್ದರೆ ನಕಾರಾತ್ಮಕ ಜೀವನವೆಂದು ತಿಳಿದುಕೊಳ್ಳಬೇಕು.

## 1. ಗುರು ಪರ್ವತ

ಇದು ತೋರು ಬೆರಳಿನ ಆಧಾರದ ಮೇಲಿರುತ್ತದೆ. ಮಂಗಳದಿಂದ ಮೇಲೆ ಸುವಿಕಸಿತವಾದ ಗುರುಪರ್ವತ ಮಹತ್ವಾಕಾಂಕ್ಷಿಯನ್ನಾಗಿ

ಮಾಡುತ್ತದೆ. ಇಂತಹ ವ್ಯಕ್ತಿ ಉತ್ಸಾಹಿ, ಲೇಖನದಕ್ಷ, ಸ್ವತಂತ್ರತೆಯ ಭಕ್ತ, ಆದರ್ಶಿಯಾಗಿರುತ್ತಾನೆ. ಉನ್ನತಿಯ ಕಡೆಗೆ ಸದಾ ಅಗ್ರಸರನಾಗಿರುತ್ತಾನೆ. ಇವನು ನಂಬಿಕಸ್ತನು, ಒಳ್ಳೆಯ ಮಿತ್ರನೂ ಆಗಿರುತ್ತಾನೆ. ಕರ್ತವ್ಯದ ಪ್ರತಿ ಸದಾ ಜಾಗರೂಕನೂ, ಆತ್ಮಗೌರವ ಇಟ್ಟುಕೊಂಡಿರುವನೂ, ವಿವೇಕಿಯೂ, ನೇತೃತ್ವ ಪ್ರಧಾನನೂ, ದೇಶಭಕ್ತನೂ ಆಗಿರುತ್ತಾನೆ.

ಒಂದು ವೇಳೆ ಗುರುಪರ್ವತ ಇಲ್ಲದೆ ಹೋದರೆ ಆತ್ಮ ಸಂಯಮ, ಧರ್ಮ, ತಂದೆ-ತಾಯಿಗಳ ಬಗ್ಗೆ ಕಾಳಜಿ ಇರುವುದಿಲ್ಲ. ಇಂತಹ ವ್ಯಕ್ತಿ ಮೂರ್ಖನೂ, ಗುಗ್ಗುವೂ ಆಗಿರುತ್ತಾನೆ. ಸಾಮಾನ್ಯ ಉಬ್ಬು ಇರುವ ಗುರು ಪರ್ವತ ಇದ್ದರೆ ಅಂತಹ ವ್ಯಕ್ತಿ ಗುರು ಗುಣಗಳಿಂದ ಕೂಡಿರುತ್ತಾನೆ. ಉಚ್ಚ ಆಕಾಂಕ್ಷೆ, ಉಚಿತ ಗರ್ವ, ಧರ್ಮದ ಪ್ರತಿ ಶ್ರದ್ಧೆ, ಪ್ರಕೃತಿ ಪ್ರೇಮ, ಆಡಂಬರ ಮತ್ತು ಸ್ನೇಹವನ್ನು ಮಾಡಿಕೊಳ್ಳುವುದರಲ್ಲಿ ದಕ್ಷನಾಗಿರುತ್ತಾನೆ. ಆತ್ಮಾಗ್ರಹ ಪ್ರಮುಖ ಸುಳ್ಳು ಪ್ರಶಂಸೆ ಇಷ್ಟವಾಗಿರುತ್ತದೆ.

ಸುವಿಕಸಿತ ಗುರು ಉಳ್ಳ ವ್ಯಕ್ತಿ ಸೌಂದರ್ಯೋಪಾಸಕನೂ, ಆರೋಗ್ಯವಂತನೂ, ಸುಂದರನು, ಇತರರಿಗೆ ಪ್ರಿಯನು, ಅಲ್ಪಾಯುವಿನಲ್ಲೇ ವಿವಾಹಿತನೂ ಆಗಿರುತ್ತಾನೆ. ಒಂದು ವೇಳೆ ಅಂಗೈ ಪುಷ್ಪವಾಗಿಯೂ ಮತ್ತು ಬಳುಕುವಂತೆಯೂ ಇದ್ದರೆ. ಈ ಗುಣಗಳು ಮತ್ತಷ್ಟು ವೃದ್ಧಿಯಾಗುತ್ತವೆ.

ಅತ್ಯಧಿಕವಾಗಿ ಉಬ್ಬಿರುವ ಗುರು ಕ್ಷೇತ್ರವುಳ್ಳ ವ್ಯಕ್ತಿ ಮಿಥ್ಯಾಭಿಮಾನಿಯೂ, ಅಹಂಕಾರಿಯೂ, ಪ್ರಭಾವಶಾಲಿ ವ್ಯಕ್ತಿತ್ವವುಳ್ಳವನಾಗಿಯೂ, ಪ್ರದರ್ಶನಪ್ರಿಯತೆ ಬಯಸುವವನಾಗಿಯೂ, ಸ್ವಾರ್ಥಿಯಾಗಿಯೂ, ಪ್ರತೀಕಾರದ ಮನೋಭಾವನೆ ಉಳ್ಳವನಾಗಿಯೂ, ಅಸೂಯೆಪಡುವವನಾಗಿಯೂ, ಒಣದರ್ಪ ತೋರಿಸುವವನಾಗಿಯೂ ಇರುತ್ತಾನೆ. ಇಂತಹ ವ್ಯಕ್ತಿ ದುಂದುವೆಚ್ಚ ಮಾಡುವವನಾಗಿಯೂ ಮತ್ತು ಇತರರನ್ನು ಅದುಮಿಡುವವನಾಗಿಯೂ ಇರುತ್ತಾನೆ.

ಅನ್ಯಾಯಾನ್ಯಯ ಗ್ರಹ ಪರ್ವತಗಳಿಗಿಂತ ಹೆಚ್ಚು ಉಬ್ಬು ಗುರುಪರ್ವತ ಇದ್ದರೆ ಆ ವ್ಯಕ್ತಿ ಸ್ವತಃ ಆಶಾತೀತ ಉನ್ನತಿ ಪಡೆಯುತ್ತಾನೆ ಮತ್ತು ಬೇರೆಯವರು ಉನ್ನತಿ ಪಡೆಯಲು ಸಹಾಯಕನಾಗುತ್ತಾನೆ. ದೈವಿಕ ಗುಣಗಳನ್ನು ಹೆಚ್ಚು ಹೊಂದಿರುವನಾಗಿಯೂ, ಸ್ವಾಭಿಮಾನಿಯಾಗಿಯೂ, ನ್ಯಾಯಿಯಾಗಿಯೂ, ವಚನಪಾಲಕನಾಗಿಯೂ, ದಯಾಳುವಾಗಿಯೂ, ಪರೋಪಕಾರಿಯಾಗಿಯೂ, ಜಾತಿ ದೇಶ-ಸಮಾಜದಲ್ಲಿ ಗೌರವ

ಪಡೆಯುವವನಾಗಿಯೂ, ಕಠಿಣ ಪರಿಸ್ಥಿತಿಯಲ್ಲೂ ಸಂಘರ್ಷ ಮಾಡುವವನಾಗಿಯೂ, ಧಾರ್ಮಿಕ ಮತ್ತು ಜನ ಹಿತೈಷಿಯಾಗಿಯೂ ಇಂತಹ ವ್ಯಕ್ತಿ ಇರುತ್ತಾನೆ.

ಹೂತುಹೋಗಿರುವ ಗುರು ಕ್ಷೇತ್ರ ಹೊಂದಿರುವ ವ್ಯಕ್ತಿ ಪರತಂತ್ರನಾಗಿಯೂ, ನಾಶ ಹೊಂದುವವನಾಗಿಯೂ ಇರುತ್ತಾನೆ. ಇಂತಹ ವ್ಯಕ್ತಿ ಪಾಪಕರ್ಮಿಯೂ, ಸ್ವಾರ್ಥಿಯೂ, ಅಪಕೀರ್ತಿ ಪಡೆಯುವವ ನಾಗಿಯೂ ಇರುತ್ತಾನೆ ಮತ್ತು ಅತೀವ ಕಾಮುಕನಾಗಿರುತ್ತಾನೆ.

ಶನಿಯ ಕಡೆಗೆ ಗುರುಪರ್ವತ ಬಾಗಿಕೊಂಡಿದ್ದರೆ ಅಂತಹ ವ್ಯಕ್ತಿಗೆ ಗಂಭೀರ ವಿಷಯಗಳ ಬಗ್ಗೆ, ಧರ್ಮಶಾಸ್ತ್ರದ ಪ್ರಾಚೀನ ಗ್ರಂಥಗಳ ಬಗ್ಗೆ ಮತ್ತು ಗಣಿತದ ಬಗ್ಗೆ ಹೆಚ್ಚು ಆಸಕ್ತಿ ಇರುತ್ತದೆ. ಇಂತಹ ವ್ಯಕ್ತಿಯ ಸ್ವಭಾವ ಗರ್ವಮಯ ಮತ್ತು ನಿರಾಶಾಪೂರ್ಣವಾಗಿ, ಚಿಂತಾಪೂರ್ಣವಾಗಿ ಮತ್ತು ಪ್ರತಿಕ್ಷಣ ತನ್ನಲ್ಲೇ ತಾನು ಮುಳುಗಿಹೋಗಿರುವಂತೆ ಇರುತ್ತದೆ. ಇಂತಹ ವ್ಯಕ್ತಿ ಗಂಭೀರನಾಗಿ ಮತ್ತು ಹಟಮಾರಿಯಾಗಿ ಇರುತ್ತಾನೆ.

ಒಂದು ವೇಳೆ ಗುರು ಪ್ರಧಾನ ಅಂಗೈ ಶ್ವೇತವರ್ಣವಾಗಿದ್ದರೆ ಅಂತಹ ವ್ಯಕ್ತಿಯ ವ್ಯಕ್ತಿತ್ವ ನಿಷ್ಕ್ರಿಯವಾಗಿರುತ್ತದೆ. ಕೆಂಪು ವರ್ಣ ಗುಣಗಳಿಗೆ ತೀಕ್ಷ್ಣತೆಯನ್ನು ನೀಡುತ್ತದೆ. ಗುಲಾಬಿ ವರ್ಣ ಸಾಮಾನ್ಯ ಫಲ ನೀಡುತ್ತದೆ. ಹಳದಿ ವರ್ಣ ಯಕೃತ್ ರೋಗವನ್ನು ಮತ್ತು ನೀಲಿ ವರ್ಣ ಹೃದಯ ದುರ್ಬಲತೆಯನ್ನು ಕೊಡುತ್ತದೆ.

ಒಂದು ವೇಳೆ ಗುರು ಪರ್ವತ ವಿಕಸಿತವಾಗಿದ್ದು ಮತ್ತು ಬೆರಳುಗಳು ಚೂಪಾಗಿದ್ದರೆ ಅಂತಹ ವ್ಯಕ್ತಿ ಕುರುಡು ನಂಬಿಕೆ ಉಳ್ಳವನಾಗಿರುತ್ತಾನೆ. ವಿಕಸಿತ ಪರ್ವತ ಮತ್ತು ವರ್ಗಾಕಾರದ ಬೆರಳುಗಳಿದ್ದರೆ ಅಂತಹ ವ್ಯಕ್ತಿ ನಿರಂಕುಶನೂ ಮತ್ತು ಅತ್ಯಾಚಾರಿಯೂ ಆಗಿರುತ್ತಾನೆ. ಉದ್ದನೆಯ ಬೆರಳು ಮತ್ತು ವಿಕಸಿತ ಪರ್ವತ ಇದ್ದರೆ ಅಂತಹ ವ್ಯಕ್ತಿ ದುಂದುವೆಚ್ಚ ಮಾಡುವವನಾಗಿಯೂ ಮತ್ತು ಭೋಗಿಯಾಗಿಯೂ ಇರುತ್ತಾನೆ. ಗುರು-ಶನಿ ಎರಡೂ ಸಹ ಉಬ್ಬಿಕೊಂಡಿದ್ದರೆ ಅಂತಹ ವ್ಯಕ್ತಿ ಪ್ರಬಲ ಭಾಗ್ಯಶಾಲಿಯಾಗಿರುತ್ತಾನೆ.

ಶುಕ್ರನಿಂದ ಹೊರಟಿರುವ ಯಾವುದಾದರೂ ರೇಖೆ ಗುರುಕ್ಷೇತ್ರವನ್ನು ಅತಿಕ್ರಮಣ ಮಾಡಿದರೆ ಮತ್ತು ಶನಿಕ್ಷೇತ್ರದ ಕಡೆಗೆ ಹಾದು ಹೋದರೆ ಅಂತಹ ವ್ಯಕ್ತಿ ಪಾರಿವಾರಿಕ ಉಪದ್ರವದಿಂದ ಬಾರಿ ಬಾರಿಗೂ ತೊಳಲುತ್ತಾನೆ.

ಭಾಗ್ಯರೇಖೆಯು ಯಾವುದಾದರೂ ಉಪಶಾಖೆ ಗುರುವಿನ ಮೇಲೆ ತಲುಪಿದರೆ ಶುಭವೆಂದು ತಿಳಿದುಕೊಳ್ಳಬೇಕು ಮತ್ತು ಜೀವನರೇಖೆಯು ಈ ಕ್ಷೇತ್ರದ ಮೇಲೆ ತಲುಪುವ ಶಾಖೆ ದೀರ್ಘ ಜೀವನದ ಪರಿಚಯು ನೀಡುತ್ತದೆ.

ಗುರು ಮತ್ತು ಸೂರ್ಯ ಪರ್ವತ ಉಬ್ಬಿಕೊಂಡಿದ್ದರೆ ಹಣ ಮತ್ತು ಖ್ಯಾತಿ ಪ್ರಾಪ್ತವಾಗುತ್ತದೆ. ಗುರು ಮತ್ತು ಬುಧ ಉಬ್ಬಿಕೊಂಡಿದ್ದರೆ ಅಂತಹ ವ್ಯಕ್ತಿಗೆ ವಿಜ್ಞಾನದಲ್ಲಿ ಆಸಕ್ತಿ ಇರುತ್ತದೆ ಮತ್ತು ಇಂತವರು ಕವಿಗಳು ಮತ್ತು ಸಫಲ ಚಿಕಿತ್ಸಕರೂ ಆಗುತ್ತಾರೆ.

ಗುರು ಮತ್ತು ಶುಕ್ರ ಪರ್ವತ ಉಬ್ಬಿಕೊಂಡಿದ್ದರೆ ಅಂತಹ ವ್ಯಕ್ತಿಗಳು ಸಮಾಜ ಪ್ರೇಮಿಗಳು, ಪ್ರಾಮಾಣಿಕರು, ಶುದ್ಧಪ್ರೇಮದವರು, ನಿಷ್ಠರು, ಉದಾರಿಗಳು ಮತ್ತು ಸ್ತ್ರೀಯರ ಪ್ರತಿ ನಿಸ್ವಾರ್ಥ ಸಹಾಯ ಮಾಡುವವರೂ ಆಗಿರುತ್ತಾರೆ.

ಗುರು ಮತ್ತು ಚಂದ್ರ ಪರ್ವತ ಉಬ್ಬಿಕೊಂಡಿದ್ದರೆ ಅಂತಹ ವ್ಯಕ್ತಿಗಳು ಗಂಭೀರರು, ನ್ಯಾಯಪ್ರಿಯರು, ಶಾಂತರೂ ಮತ್ತು ಪ್ರಾಮಾಣಿಕರೂ ಆಗಿರುತ್ತಾರೆ.

ಗುರು ಮತ್ತು ಮಂಗಳ ಪರ್ವತ ಉಬ್ಬಿಕೊಂಡಿದ್ದರೆ ಅಂತಹ ವ್ಯಕ್ತಿಗಳು ಆತ್ಮ ವಿಶ್ವಾಸಿಗಳೂ, ವೀರರೂ ಮತ್ತು ಸೇನಾಪತಿ ಗುಣ ಪ್ರಧಾನರೂ ಆಗಿರುತ್ತಾರೆ.

## 2. ಶನಿ ಪರ್ವತ

ಇದರ ಆಧಾರ ಮಧ್ಯದ ಬೆರಳಿನ ಮೂಲವಾಗಿರುತ್ತದೆ. ಅಂಗೈನಲ್ಲಿ ಇದರ ವಿಕಾಸ ಅಸಾಧಾರಣ ಪ್ರವೃತ್ತಿಯನ್ನು ಸೂಚಿಸುತ್ತದೆ. ಕೈನಲ್ಲಿ ಇದರ ಅಭಾವವಿದ್ದರೆ ಸಫಲತೆ ಮತ್ತು ಗೌರವ ದೊರೆಯುವುದರಲ್ಲಿ ಅಡಚಣೆ ಉಂಟಾಗುತ್ತದೆಂದು ನಂಬಲಾಗಿದೆ.

ಈ ಪರ್ವತ ಏಕಾಂತಪ್ರಿಯತೆ, ಭಾಗ್ಯವಾದಿತ, ಗಂಭೀರತೆ, ಬುದ್ಧಿವಂತಿಕೆ, ದೂರದರ್ಶಿತನ, ಆಧ್ಯಾತ್ಮವಾದಿತ, ಪರಿಶ್ರಮಶೀಲತೆ ಮುಂತಾದವುಗಳ ಪರಿಚಯು ನೀಡುತ್ತದೆ. ಇಂತಹ ವ್ಯಕ್ತಿಗಳು ಪ್ರೇಮ, ಸ್ನೇಹ ಮುಂತಾದವುಗಳನ್ನು ಪ್ರದರ್ಶಿಸುವುದಿಲ್ಲ ಮತ್ತು ಇಂಥವರ ಮನೋಭಾವವನ್ನು ಅರಿತುಕೊಳ್ಳುವುದು ಬಹಳ ಕಷ್ಟ.

ತಮ್ಮ ಸ್ವಾಭಾವಿಕ ಗಂಭೀರತೆಯ ಕಾರಣದಿಂದಾಗಿ ಇವರಿಗೆ ಮಿತ್ರರ ಸಂಖ್ಯೆ ಸೀಮಿತವಾಗಿರುತ್ತದೆ. ಒಂದೊಂದು ಬಾರಿ ಕಠಿಣ ಪರಿಶ್ರಮವೂ

ಇವರಿಗೆ ಫಲ ನೀಡುವುದಿಲ್ಲ. ಕೆಲಸದಲ್ಲಿ ಪರಿಶ್ರಮಕ್ಕೆ ಸರಿಯಾದ ಫಲ ದೊರಕದೆ ಹೋಗುವುದರಿಂದ ಇವರಲ್ಲಿ ಮಾನಸಿಕ ಅಶಾಂತಿ ಇರುತ್ತದೆ. ಇದರಿಂದ ಉತ್ಪನ್ನವಾದ ಸಿಡಿಮಿಡಿಯಿಂದ ಗೃಹಕಲಹ ಮತ್ತು ಹೊರಗಡೆಯ ವಿವಾದ ಉಂಟಾಗುತ್ತದೆ. ಇವರು ತಮ್ಮ ವಿಚಾರಗಳಲ್ಲೇ ಸದಾ ಮುಳುಗಿರುವುದರ ಕಾರಣದಿಂದಾಗಿ ಇವರ ಪ್ರಯತ್ನ ಸಂತುಲಿತವಾಗಿರುವುದಿಲ್ಲ ಮತ್ತು ಜನ ಇವರನ್ನು ಹುಚ್ಚನೆಂದು ಭಾವಿಸುತ್ತಾರೆ.

ಮಾತು ಮಾತಿಗೂ ಸಂದೇಹಪಡುವುದು ಶನಿಯ ಪ್ರಧಾನ ಗುಣವಾಗಿದೆ. ತಮ್ಮ ಸಂಬಂಧಿಕರನ್ನಾಗಲೀ, ಮಕ್ಕಳನ್ನಾಗಲೀ, ಪತ್ನಿಯನ್ನಾಗಲೀ ಇಂಥವರು ನಂಬುವುದಿಲ್ಲ. ಹುಚ್ಚು ಸ್ವಭಾವದಿಂದಾಗಿ ಇವರು ಜೀವನವನ್ನು ಸಮಸ್ಯೆಗೆ ಗುರಿಮಾಡಿ ದುಃಖವನ್ನು ಅನುಭವಿಸುತ್ತಾರೆ. ಅನೇಕ ಬಾರಿ ಸಂದೇಹದ ಕಾರಣದಿಂದ ಆತ್ಮಹತ್ಯೆ ಮಾಡಿಕೊಳ್ಳುವ ಮಟ್ಟಕ್ಕೆ ತಲುಪಿಬಿಡುತ್ತಾರೆ.

ಸಾಮಾನ್ಯವಾಗಿ ಸಮ ಉನ್ನತ ಶನಿ ಪರ್ವತ ಶುಭವಾದುದದೆಂದು ಪರಿಗಣಿಸಲಾಗಿದೆ. ಒಂದು ವೇಳೆ ಇದು ಸುಂದರವಾಗಿದ್ದರೆ ಅಶಾಂತಿ ಮತ್ತು ದುಃಖ ಇವರ ಬಳಿಗೂ ಸುಳಿಯುವುದಿಲ್ಲ.

ಹೆಚ್ಚು ಉಬ್ಬಿರುವ ಶನಿ ಪರ್ವತವಿದ್ದರೆ ದುರ್ಲಭ ದೋಷಯುಕ್ತ ಲಕ್ಷಣಗಳನ್ನು ಅಪಾಯದ ಎಲ್ಲೆಯವರೆಗೆ ಕೊಂಡೊಯ್ಯುತ್ತದೆ. ಮೃತ್ಯುವಿನ ಆತಂಕದ ನಿರಂತರ ಭಯ ಮತ್ತು ಆತ್ಮಹತ್ಯೆಯ ವಿಚಿತ್ರ ಉತ್ಸುಕತೆ, ಭಾವೀ ಹುಚ್ಚುತನದವರೆಗೂ ಸಹ ಸೂಚಿಸುತ್ತದೆ. ದರೋಡೆಖೋರರ, ಮೋಸಗಾರರ, ಲೂಟಿ ಮಾಡುವವರ ಕೈಯಲ್ಲಿ ಇಂತಹ ವಿಕಸಿತ ಪರ್ವತ ಕಂಡುಬರುತ್ತದೆ.

ಸಮ ಉನ್ನತ ಶನಿಕ್ಷೇತ್ರ ಅತ್ಯಂತ ಶುಭವಾಗಿರುತ್ತದೆ. ಒಂದು ವೇಳೆ ಇದು ಹೆಚ್ಚು ಸುಂದರವಾಗಿದ್ದರೆ ದುಃಖ ಮತ್ತು ಅಶಾಂತಿ ಇರುವುದಿಲ್ಲ.

ಅತ್ಯಧಿಕವಾಗಿ ಉಬ್ಬಿಕೊಂಡಿರುವ ಶನಿ ಕ್ಷೇತ್ರ ಏಕಾಂತಪ್ರಿಯತೆಯ ಲಕ್ಷಣವನ್ನು ತೋರಿಸುತ್ತದೆ. ಇಂತಹ ವ್ಯಕ್ತಿ ವೈರಾಗ್ಯ ತೆಗೆದುಕೊಂಡು ಸನ್ಯಾಸಿಯಾಗುತ್ತಾನೆ. ಇಂಥವರಲ್ಲಿ ದಾರ್ಶನಿಕ ಭಾವ ಪ್ರಕಾಶಿಸುತ್ತವೆ.

ಒಂದು ವೇಳೆ ಶನಿ ಪರ್ವತ ಸೂರ್ಯನ ಕಡೆಗೆ ಸರಿದಿದ್ದರೆ ಅನೇಕ ದೋಷಗಳು ಅಳಿಸಿಹೋಗುತ್ತವೆ.

ಶನಿ ಪರ್ವತ ಗುರು ಪರ್ವತದ ಕಡೆಗೆ ಸರಿದುಕೊಂಡಿದ್ದರೆ

ಶುಭವೆಂದು ನಂಬಲಾಗಿದೆ. ಸಮಾಜದಲ್ಲಿ ಇಂತಹ ವ್ಯಕ್ತಿ ಆದರಣೀಯನಾಗಿರುತ್ತಾನೆ. ಆದರೆ ಸೂರ್ಯನ ಕಡೆಗೆ ಸರಿದುಕೊಂಡಿರುವ ಈ ಪರ್ವತ ಮನುಷ್ಯನನ್ನು ಸೋಮಾರಿಯನ್ನಾಗಿಯೂ, ನಿರ್ಧನನ್ನಾಗಿಯೂ ಮಾಡುತ್ತದೆ. ಇಂಥವರಲ್ಲಿ ಅವಶ್ಯಕತೆಗಿಂತ ಹೆಚ್ಚು ನಿರಾಶೆ ತುಂಬಿರುತ್ತದೆ. ಇಂಥವರು ನಿಶ್ಶಕ್ತ ಪಕ್ಷದ ಮೇಲೆ ದೃಷ್ಟಿ ಬೀರುವವರಾಗಿರುತ್ತಾರೆ. ಇವರಿಗೆ ಕುಟುಂಬದ ಸಹಕಾರ ದೊರೆಯುವುದಿಲ್ಲ.

ವಿಕಸಿತ ಕ್ಷೇತ್ರದ ಜೊತೆ ಸುಂದರ ಸುಗಠಿತ ಬೆರಳುಗಳ ಶನಿದೋಷಗಳಿಗೆ ಪ್ರತೀಕಾರ ಮಾಡುತ್ತವೆ. ಕೋಮಲತೆಯನ್ನು ವ್ಯಕ್ತಪಡಿಸುತ್ತದೆ. ಇಂತಹ ವ್ಯಕ್ತಿ ಸಹೃದಯ ಮಿತ್ರ ಮತ್ತು ನಂಬಿಗಸ್ಥ ಜೊತೆಗಾರನಾಗುತ್ತಾನೆ. ಕಠೋರ ಬೆರಳುಗಳು ಕ್ರೂರತೆಯನ್ನು ಪ್ರದರ್ಶಿಸುತ್ತವೆ.

ಈ ಕ್ಷೇತ್ರದ ಬಣ್ಣ ಹಳದಿಯಾಗಿ ಮತ್ತು ಕೊಳಕುತನದಿಂದ ಕೂಡಿದ್ದರೆ ಇದು ಯಕೃತ್ತು ದೋಷವನ್ನು ಪ್ರದರ್ಶಿಸುತ್ತದೆ. ಇಂತಹ ವ್ಯಕ್ತಿಗಳು ರಕ್ತದ ಅಲ್ಪತೆ ಮತ್ತು ಪಾಂಡುರೋಗಕ್ಕೆ ಬಲಿಯಾಗುತ್ತಾರೆ. ಇವರಲ್ಲಿ ಸ್ಫೂರ್ತಿಯ ಕೊರತೆ ಇರುತ್ತದೆ. ಇವರಲ್ಲಿ ಸದಾ ಉದಾಸತನ ಮತ್ತು ಶೀಘ್ರ ಕೋಪಿಸಿಕೊಳ್ಳುವ ಪ್ರವೃತ್ತಿ ಇರುತ್ತದೆ.

ಕೆಂಪು ಬಣ್ಣ ಶುಭವಾದುದಾಗಿದೆ. ಆದರೆ ಗುಲಾಬಿ ಬಣ್ಣ ಮತ್ತೂ ಉತ್ತಮವಾದುದೆಂದು ನಂಬಲಾಗಿದೆ. ಇಂತಹ ವ್ಯಕ್ತಿ ಸ್ವಸ್ಥನೂ, ಸಂತುಲಿತನೂ, ಸುಖಿಯೂ ಆಗಿರುತ್ತಾನೆ.

ಬಿಳಿಯ ಬಣ್ಣ ವ್ಯಕ್ತಿತ್ವಹೀನತೆ, ಅನಾಕರ್ಷಣೆ ಮತ್ತು ಶಿಥಿಲತೆಯನ್ನು ನೀಡುತ್ತದೆ.

ನೀಲಿ ಬಣ್ಣ ರಕ್ತದೋಷವನ್ನು ನೀಡುತ್ತದೆ.

ಸೂರ್ಯ ಮತ್ತು ಶನಿ ಉನ್ನತವಾಗಿದ್ದರೆ ಮತ್ತು ಕೈನಲ್ಲಿ ರೇಖೆಗಳಿದ್ದರೆ ಒಳ್ಳೆಯ ಆರೋಗ್ಯ, ಪವಿತ್ರ ಹೃದಯ, ಶ್ರೇಷ್ಠ ಆಸಕ್ತಿಗಳು, ಬೇರೆಯವರ ಪ್ರತಿ ಗೌರವ ಭಾವನೆ ನೀಡುತ್ತವೆ. ನಿಕೃಷ್ಟ ರೇಖೆಗಳಿದ್ದರೆ ಕೆಟ್ಟ ಆಸಕ್ತಿಗಳು, ದುರ್ಬುದ್ಧಿ, ನಿರಾಶವಾದಿತನ ಮತ್ತು ಅಪಸ್ಮಾರ ರೋಗ ನೀಡುತ್ತದೆ.

ಶನಿ ಮತ್ತು ಬುಧಕ್ಷೇತ್ರ ಸಮ ಉನ್ನತಿಯಾಗಿದ್ದು ಮತ್ತು ರೇಖೆಗಳು ಚೆನ್ನಾಗಿದ್ದರೆ ಸುಖಜ್ಞಾನದ ಜಿಜ್ಞಾಸೆ, ವಿಜ್ಞಾನದಲ್ಲಿ ಆಸಕ್ತಿ, ಶೋಧಪ್ರಿಯತೆ

ಮತ್ತು ಸತತ ಪರಿಶ್ರಮಪ್ರಿಯತೆ ಇರುತ್ತದೆ. ಒಂದು ವೇಳೆ ನಿಕೃಷ್ಟ ರೇಖೆಗಳಿದ್ದರೆ ನಿಕೃಷ್ಟ ಪ್ರಕೃತಿ, ನಂಬಿಕೆ ದ್ರೋಹ, ಕಪಟಪೂರ್ಣ ಆಚರಣೆ, ಕಳ್ಳ ಮತ್ತು ಮೋಸ ಮಾಡುವ ವ್ಯಕ್ತಿ ಅಂತಹವನಾಗಿರುತ್ತಾನೆ.

ಶನಿ ಮತ್ತು ಶುಕ್ರಕ್ಷೇತ್ರ ಎರಡೂ ಸಮ ಉನ್ನತಿಯಾಗಿದ್ದರೆ ಅಂತಹ ವ್ಯಕ್ತಿ ತಂತ್ರಶಾಸ್ತ್ರವನ್ನು ಬಲ್ಲವನಾಗಿರುತ್ತಾನೆ.

ಶನಿ ಮತ್ತು ಮಂಗಳ ಕ್ಷೇತ್ರ ಉನ್ನತಿಯಲ್ಲಿದ್ದರೆ ಅಂತಹ ವ್ಯಕ್ತಿ ಜಗಳಗಂಟನೂ, ಉದ್ದಟನೂ, ರೇಗುವ ಸ್ವಭಾವದವನೂ ಆಗಿರುತ್ತಾನೆ.

ಮಧ್ಯದ ಬೆರಳಿನ ಮೇಲಿನ ಅಂಚು ಬೇರೆ ಬೆರಳುಗಳ ಅಂಚುಗಳಿಗಿಂತ ಅಸಾಧಾರಣ ರೂಪದಲ್ಲಿ ಭಿನ್ನ ಪ್ರಕಾರವಾಗಿದ್ದರೆ ಅವರಲ್ಲಿ ಶನಿ ಗುಣಗಳ ವಿಶೇಷತೆ ಇರುತ್ತದೆ. ಒಂದು ವೇಳೆ ಆ ಅಂಚು ಚೂಪಾಗಿದ್ದರೆ ಇದು ಕಲ್ಪನೆಯ ಎತ್ತರದ ಹಾರುವಿಕೆಯ ಪರಿಚಯ ನೀಡುತ್ತದೆ. ಇಂತಹ ವ್ಯಕ್ತಿ ಅಧಿಕ ಕಲ್ಪನಾಶೀಲನು ಮತ್ತು ಕನಸು ಕಾಣುವವನಾಗಿರುತ್ತಾನೆ.

ವರ್ಗಾಕಾರದ ಅಂಚುಳ್ಳ ಬೆರಳು ರಸಾಯನ ವಿಜ್ಞಾನ, ಚಿಕಿತ್ಸೆ ಮುಂತಾದವುಗಳಲ್ಲಿ ನಿಪುಣತೆಯನ್ನು ನೀಡುತ್ತದೆ. ಇಂತಹ ಜನಗಳು ಅನುಭವಿ ಚಿಕಿತ್ಸಕರು, ರಸಾಯನ ನಿರ್ಮಾಪಕರು ಅಥವಾ ವೈಜ್ಞಾನಿಕರು ಆಗಿರುತ್ತಾರೆ. ಇವರಲ್ಲಿ ಕವಿತ್ವದ ಸಮಾವೇಶವಿರುತ್ತದೆ. ಇವರು ವಿದ್ವತೆಯ ಪ್ರಯೋಗವನ್ನು ಕ್ರೂರ ಕರ್ಮಗಳಲ್ಲಿ ಮಾಡುತ್ತಾರೆ.

ಒಂದು ವೇಳೆ ಶನಿಪ್ರಧಾನ ವ್ಯಕ್ತಿಯ ಬೆರಳುಗಳ ಅಂಚು ಹರಡಿಕೊಂಡಿದ್ದರೆ ಇದು ಅಸ್ವಾಭಾವಿಕತೆಯ ಲಕ್ಷಣವನ್ನು ತೋರಿಸುತ್ತದೆ. ಈ ಜನಗಳು ತಮ್ಮವರೆಗೆ ಮಾತ್ರ ಕೇಂದ್ರಿತರಾಗಿರುತ್ತಾರೆ. ಇವರಿಗೆ ಪ್ರಪಂಚದಿಂದ ವಿರಕ್ತ ಉಂಟಾಗುತ್ತದೆ.

ಸುಂದರ ಮತ್ತು ಪುಷ್ಟ ಬೆರಳುಗಳು ಶಕ್ತಿಗೆ ಕಾಂತಿ ನೀಡುತ್ತದೆ. ಇಂತಹ ವ್ಯಕ್ತಿ ತನ್ನ ತರ್ಕಶಕ್ತಿ ಮತ್ತು ಅಧ್ಯಯನದ ಬಲದಿಂದ ಜನರನ್ನು ಪ್ರಭಾವಿತರನ್ನಾಗಿಸುತ್ತಾನೆ.

ಒಂದು ವೇಳೆ ಹೆಬ್ಬೆರಳು ಗಂಟುಳ್ಳದ್ದಾಗಿದ್ದರೆ ಅದರ ಪ್ರಭಾವದಿಂದ ಮನುಷ್ಯನ ಪ್ರತಿಭೆ ತೀವ್ರವಾಗಿಬಿಡುತ್ತದೆ ಮತ್ತು ಎಲ್ಲಾ ಕಾರ್ಯಗಳನ್ನು ಸರಿಯಾದ ರೀತಿಯಲ್ಲಿ ಮಾಡುವಂತೆ ಮಾಡುತ್ತದೆ.

ಶನಿ ಕ್ಷೇತ್ರದ ಮೇಲೆ ಅಡ್ಡರೇಖೆಗಳಿದ್ದರೆ ಲಾಭದಾಯಕವಾಗಿರುತ್ತದೆ. ನೆಟ್ಟಗೆ ನಿಂತ ರೇಖೆಗಳು ಅಶುಭವಾಗಿರುತ್ತವೆ. ಆದರೆ ವೃದ್ಧಾವಸ್ಥೆಯಲ್ಲಿ

ಸುಖ ದೊರೆಯುತ್ತದೆ. ವೃತ್ತ (ವ್ಯೂಹ), ಚತುಷ್ಕೋಣ, ತ್ರಿಕೋನ ಶುಭತ್ವ ನೀಡುತ್ತದೆ. ತ್ರಿಕೋನದಿಂದ ಯೋಗಿಕ ಕ್ರಿಯೆಯ ಅಭ್ಯಾಸ, ಚತುಷ್ಕೋನದಿಂದ ಆಧ್ಯಾತ್ಮಿಕ ಅಭಿರುಚಿ — ಯಾಂತ್ರಿಕ ಜ್ಞಾನ, ಜ್ಯೋತಿಷ್ಯ ಜ್ಞಾನ ಸಂಭವವಿದೆ. ವೃತ್ತವು ದುಃಖ ಮತ್ತು ದರಿದ್ರತೆಯನ್ನು ಪ್ರಕಟಗೊಳಿಸುತ್ತದೆ.

## 3. ಸೂರ್ಯ ಪರ್ವತ

ಸೂರ್ಯನ ಅನುಪಸ್ಥಿತಿ ಮಂದಬುದ್ಧಿ, ಭೌತಿಕತೆ, ಕಲೆ, ಸಾಹಿತ್ಯ ಮುಂತಾದವುಗಳ ಬಗ್ಗೆ ಯಾವುದೇ ರೀತಿ ಸಂಬಂಧವಿಲ್ಲದಂತಾಗುತ್ತದೆ.

ಸ್ವಲ್ಪ ವಿಕಸಿತವಾದ ಸೂರ್ಯಕ್ಷೇತ್ರ ಸೌಂದರ್ಯದ ಪ್ರತಿ ಆಸಕ್ತಿಯನ್ನು ಉಂಟು ಮಾಡುತ್ತದೆ. ಆದರೆ ಕಲೆ, ಸಂಗೀತ, ಸಾಹಿತ್ಯದಲ್ಲಿ ರಚನಾತ್ಮಕ ಪ್ರವೃತ್ತಿಯ ಅಭಾವವನ್ನು ಉತ್ಪನ್ನ ಮಾಡುತ್ತದೆ.

ಸೂರ್ಯ ಕ್ಷೇತ್ರ ಸಮ ಉನ್ನತಿಯಾಗಿದ್ದರೆ ಮನುಷ್ಯನ ಬೌದ್ಧಿಕ ಯೋಗ್ಯತೆ ಪ್ರಕಟವಾಗುತ್ತದೆ.

ಅಂಗೈನಲ್ಲಿ ಸೂರ್ಯಕ್ಷೇತ್ರ ಎಲ್ಲದಕ್ಕಿಂತ ಎತ್ತರವಾಗಿದ್ದರೆ ವ್ಯಕ್ತಿ ಪ್ರದರ್ಶನ ಪ್ರಿಯನು, ಆಡಂಬರಿಯು, ದುಷ್ಟನು, ಧೂರ್ತನು ಮತ್ತು ಅಹಂಕಾರಿಯೂ ಆಗುತ್ತಾನೆ. ಒಂದು ವೇಳೆ ಸೂರ್ಯಕ್ಷೇತ್ರ ತ್ರಿಕೋನ ಚಿಹ್ನೆಯಿಂದ ಕೂಡಿದ್ದರೆ ಉಚ್ಚ ಪದವಿಯನ್ನು ಪಡೆದುಕೊಳ್ಳುವ ಸಂಭವವಿದೆ. ಆದರೆ ವೃತ್ತ ಬಿಂದುವಿನ ಚಿಹ್ನೆ ಶುಭವಾದುದೆಂದು ಒಪ್ಪಲಾಗುವುದಿಲ್ಲ.

ಸ್ವಲ್ಪ ಪರಿಷ್ಕೃತ ಸೂರ್ಯ ಕ್ಷೇತ್ರ ವ್ಯಕ್ತಿಯನ್ನು ಸೌಂದರ್ಯೋಪಾಸಕನನ್ನಾಗಿ, ಕಲೆ ಮತ್ತು ಸಂಗೀತ ಪ್ರೇಮಿಯಾಗಿ ಮಾಡುತ್ತದೆ. ಆದರೆ ಸಾಹಿತ್ಯದಲ್ಲಿ ರಚನಾತ್ಮಕ ಅಭಾವವನ್ನು ಉಂಟು ಮಾಡುತ್ತದೆ.

ಶನಿಯ ಕಡೆಗೆ ಸರಿದುಕೊಂಡಿರುವ ಸೂರ್ಯಕ್ಷೇತ್ರ ಕೀರ್ತಿ ಮತ್ತು ಆಚರಣೆಯ ಮೇಲೆ ಕೆಟ್ಟ ಪ್ರಭಾವವನ್ನು ಬೀರುತ್ತದೆ. ಇಂತಹ ವ್ಯಕ್ತಿ ಕ್ರೋಧಿಯೂ, ದುರಾಚಾರಿಯೂ, ಹಿಂಸಕನು ಮತ್ತು ಕುಖ್ಯಾತನಾಗುತ್ತಾನೆ. ಆದರೆ ಬುಧನ ಕಡೆಗೆ ಸರಿದುಕೊಂಡಿರುವ ಸೂರ್ಯ ಲೋಕಪ್ರಿಯತೆಯನ್ನು ಕೊಡುತ್ತಾನೆ. ಇಂತಹ ವ್ಯಕ್ತಿ ದಯಾಳುವೂ, ಪರೋಪಕಾರಿಯೂ, ವಿದ್ವಾಂಸನೂ, ವ್ಯಾಪಾರಿಯೂ, ಕಲಾಪ್ರೇಮಿಯೂ ಮತ್ತು ಸಂಬಂಧದಲ್ಲಿ ಕುಶಲನೂ, ಶತ್ರುನಾಶಕನೂ ಆಗುತ್ತಾನೆ.

ಸಾಮಾನ್ಯ ಹಾಗೂ ಸುವಿಕಸಿತ ಸೂರ್ಯ ಕಲೆ, ಸಾಹಿತ್ಯ, ವಾಕ್‌ಚಾತುರ್ಯ, ಆತ್ಮವಿಶ್ವಾಸ, ಸಜ್ಜನತೆ, ಸೌಂದರ್ಯ, ಆವಿಷ್ಕಾರಕ, ದಯೆ, ಪ್ರೀತಿ, ಧಾರ್ಮಿಕತೆ, ಖ್ಯಾತಿ ಮುಂತಾದ ಗುಣಗಳನ್ನು ನೀಡುತ್ತಾನೆ. ಇಂತಹ ವ್ಯಕ್ತಿ ನಗುಮುಖನು, ಮಿತ್ರ ಸಹಾಯಕನು, ಲೋಕಪ್ರಿಯನು, ಪ್ರಾಮಾಣಿಕನು ಮತ್ತು ಜನಹಿತೈಷಿಯೂ ಆಗುತ್ತಾನೆ. ಜೀವನದಲ್ಲಿ ಒಟ್ಟಿಗೆ ಒಂದಕ್ಕಿಂತ ಹೆಚ್ಚು ಕಾರ್ಯಗಳನ್ನು ಮಾಡಿ ಧನ ಸಂಪಾದಿಸುತ್ತಾನೆ. ಇಂತಹ ವ್ಯಕ್ತಿ ವಸ್ತ್ರಾಭೂಷಣ ಪ್ರಿಯನು, ಮೇಧಾವಿಯೂ, ದೃಢಪ್ರೇಮಿಯೂ, ವಿವಾಹಿತ ಜೀವನದಲ್ಲಿ ಭಾಗ್ಯಶಾಲಿಯೂ, ಆದರ್ಶ ಪತಿ (ಪತ್ನಿ) ಎಂದು ಸಿದ್ಧವಾಗುತ್ತಾನೆ.

ಈ ಪರ್ವತದ ಕೈನ ಬೆರಳುಗಳ ಅಗ್ರಭಾಗ ವರ್ಗಾಕಾರವಾಗಿದ್ದರೆ ಸಂದು ಇಲ್ಲದ ಗಂಟುಗಳ ಹಾಗೂ ಹೆಬ್ಬೆರಳಿನ ಎರಡನೇ ಪರ್ವ ಉದ್ದವಾಗಿರುತ್ತದೆ.

ಸೂರ್ಯ ಪರ್ವತದ ಮೇಲೆ ನಿಂತಿರುವ ಮೂರು ರೇಖೆಗಳು ಶುಭವನ್ನು ನೀಡುತ್ತವೆ. ಇವುಗಳಲ್ಲಿ ಯಾವುದಾದರೂ ಒಂದು ರೇಖೆ ಭಾಗ್ಯರೇಖೆಯೊಂದಿಗೆ ಹೋಗಿ ಸೇರಿಕೊಂಡಿದ್ದರೆ ಇದು ಅತ್ಯಂತ ಸೌಭಾಗ್ಯವನ್ನು ಉತ್ಪನ್ನ ಮಾಡುತ್ತದೆ. ಅಂತಹ ವ್ಯಕ್ತಿ ಸಮಸ್ತ ಭೌತಿಕ ಸುಖವನ್ನು ಪಡೆದುಕೊಳ್ಳುತ್ತಾನೆ.

ಎರಡು ನಿಂತಿರುವ ರೇಖೆಗಳಿದ್ದರೆ ವ್ಯಕ್ತಿ ಸುಖ ಜೀವನವನ್ನು ಕಳೆಯುತ್ತಾನೆ. ಒಂದು ವೇಳೆ ಈ ರೇಖೆಗಳು ವಕ್ರವಾಗಿದ್ದರೆ ಅವುಗಳ ಪ್ರಭಾವ ಕ್ಷೀಣಿಸುತ್ತದೆ. ಒಂದು ವೇಳೆ ಯಾವುದಾದರೂ ನೆಟ್ಟ ರೇಖೆ ಜೀವನರೇಖೆಯಿಂದ ಮೇಲೆದ್ದು ಶನಿಯ ಕಡೆಗೆ ತಲುಪಿದ್ದರೆ ಅದು ಮನುಷ್ಯನ ಸೌಭಾಗ್ಯವನ್ನು ಪ್ರಕಟಗೊಳಿಸುತ್ತದೆ.

ಸೂರ್ಯ ಪರ್ವತ ಇಲ್ಲದ ವ್ಯಕ್ತಿ ಮಂದಬುದ್ಧಿಯೂ, ಮೂರ್ಖನೂ, ಸೌಂದರ್ಯದ ಪ್ರತಿ ಉದಾಸೀನನೂ ಆಗಿರುತ್ತಾನೆ.

ಆವಶ್ಯಕತೆಗಿಂತ ಅಧಿಕವಾಗಿ ಉಬ್ಬಿರುವ ಸೂರ್ಯ ಅತ್ಯಂತ ದರ್ಪ; ಸುಳ್ಳು ಪ್ರಶಂಸೆಗೆ ಓಡಾಡುವ, ಸಣ್ಣ ಬುದ್ಧಿಯ ಉಚಿತ ಧರ್ಮಾನುರಾಗಿಯಾಗದಂತಹ ಗುಣಗಳನ್ನು ನೀಡುತ್ತದೆ. ಇಂತಹವರು ವ್ಯರ್ಥ ಖರ್ಚು ಮಾಡುವವರಾಗಿಯೂ, ಜಡಬುದ್ಧಿಯವರಾಗಿಯೂ, ಅಸೂಯೆಪಡುವಂಥವರಾಗಿಯೂ, ಜಗಳಗಂಟರಾಗಿಯೂ, ಕುತರ್ಕ ಮಾಡುವವರಾಗಿಯೂ, ಚಾಡಿಕೋರರಾಗಿಯೂ ಇರುತ್ತಾರೆ.

ಇಂಥವರನ್ನು ಅತಿ ಪ್ರಶಂಸೆ ಮಾಡುವ ಸ್ತ್ರೀಯರು ಇವರನ್ನು ಸರ್ವನಾಶದ ಕಡೆಗೆ ಕೊಂಡೊಯ್ಯುತ್ತಾರೆ. ಈ ಪರ್ವತದ ಜೊತೆಗೆ ತಿರುಗಿಕೊಂಡಿರುವ ಬೆರಳುಗಳು, ಚಪ್ಪಟೆ ಅಗ್ರಭಾಗ, ಹೆಬ್ಬೆರಳಿನ ಪ್ರಥಮ ಪರ್ವ ಉದ್ದವಾಗಿದ್ದರೆ ಹಠ ಸ್ವಭಾವದವನನ್ನಾಗಿಯೂ ಮತ್ತು ಎರಡನೆಯ ಪರ್ವ ಚಿಕ್ಕದಾಗಿದ್ದರೆ ವಿವೇಕಹೀನನನ್ನಾಗಿ ಮಾಡುತ್ತದೆ.

ಸೂರ್ಯ ಕ್ಷೇತ್ರದ ಮೇಲೆ ಇರುವ ರೇಖೆಗಳು ಆರೋಗ್ಯ ನಾಶ ಮಾಡುತ್ತವೆ. ಇಂತಹ ವ್ಯಕ್ತಿ ರೋಗಗ್ರಸ್ತನೂ, ದೃಷ್ಟಿ ದೌರ್ಬಲ್ಯವುಳ್ಳವನೂ ಮತ್ತು ಮಾನಸಿಕ ರೋಗಿಯೂ ಆಗುತ್ತಾನೆ.

ಸೂರ್ಯ ಮತ್ತು ಬುಧ ಸಮಾನ ವಿಕಸಿತವಾಗಿದ್ದರೆ ವ್ಯಕ್ತಿ ದೃಢತೆ, ಸೂಕ್ಷ್ಮದೃಷ್ಟಿ, ವೈಜ್ಞಾನಿಕ ಅಧ್ಯಯನಪ್ರೇಮಿ ಮತ್ತು ವಾಕ್‌ಪಟು ಆಗುತ್ತಾನೆ.

ಸೂರ್ಯ ಮತ್ತು ಶುಕ್ರ ಸಮಾನ ವಿಕಸಿತವಾಗಿದ್ದರೆ ವ್ಯಕ್ತಿ ಸಜ್ಜನತೆಯವನು ಮತ್ತು ಎಲ್ಲರನ್ನೂ ಸಂತೋಷವಾಗಿಡಲು ಪ್ರಯತ್ನಿಸುವವನೂ ಆಗುತ್ತಾನೆ.

ಸೂರ್ಯ ಮತ್ತು ಚಂದ್ರ ಸಮಾನ ವಿಕಸಿತವಾಗಿದ್ದರೆ ಅಂತಹ ವ್ಯಕ್ತಿ ಸಹಜ ಬುದ್ಧಿಯವನು, ಸ್ವಸ್ಥ ಕಲ್ಪನೆಯ ಪ್ರವಾಹದವನು ಮತ್ತು ನಿಷ್ಕಪಟಿಯೂ ಆಗಿರುತ್ತಾನೆ.

ಸೂರ್ಯ ಮತ್ತು ಮಂಗಳ ಪರ್ವತ ಸಮಾನ ವಿಕಸಿತವಾಗಿದ್ದರೆ ಕಲೆಯ ಬಗ್ಗೆ ಉತ್ಸಾಹ ಧೈರ್ಯ, ಬೌದ್ಧಿಕ ಸತ್ಯದ ಪ್ರವೃತ್ತಿ ಇರುತ್ತದೆ.

ಸೂರ್ಯ ಕ್ಷೇತ್ರ ಸಶಕ್ತವಾಗಿದ್ದರೂ ಸಹ ಅದರ ಮೇಲಿನ ಬೆರಳಿನ ಮೇಲಿನ ಪರ್ವ ವಕ್ರವಾಗಿ, ಕುರೂಪವಾಗಿ ಅಥವಾ ಗಂಟುಗಳುಳ್ಳದ್ದಾಗಿದ್ದರೆ ಅದು ತನ್ನ ಕ್ಷೇತ್ರದ ಪ್ರಭಾವವನ್ನು ಕಳೆದುಕೊಳ್ಳುತ್ತದೆ. ಇಂತಹ ಜನಗಳು ಅಸೂಯೆಪಡುವವರು, ದ್ವೇಷಿಗಳೂ, ಕ್ರೋಧಿಗಳು, ಕಪಟಿಗಳೂ ಮತ್ತು ಪ್ರತೀಕಾರದ ಮನೋಭಾವ ಉಳ್ಳವರಾಗಿರುತ್ತಾರೆ.

ಸೂರ್ಯನ ಬೆರಳು ಒಂದು ವೇಳೆ ಬುಧನ ಕಡೆಗೆ ಮತ್ತು ಬುಧನ ಬೆರಳಿನ ಅಂಚು ಸೂರ್ಯನ ಕಡೆಗೆ ಬಾಗಿದ್ದರೆ ವ್ಯಕ್ತಿ ಸಫಲನೂ, ಯಶಸ್ವಿಯೂ, ಸೌಂದರ್ಯಪ್ರಿಯನು, ಕಲಾರನೂ, ಧೂರ್ತನೂ, ಕೂಟನೀತಿಜ್ಞನೂ ಮತ್ತು ಅವಿಶ್ವಾಸಿಯೂ ಆಗುತ್ತಾನೆ.

ಸೂರ್ಯಕ್ಷೇತ್ರದ ಬೆರಳು ತೋರುಬೆರಳಿಗಿಂತ ದೊಡ್ಡದಾಗಿರುವುದು ವಿಕಾಸದ ಲಕ್ಷಣವಾಗಿರುತ್ತದೆ. ಇಂತಹ ವ್ಯಕ್ತಿ ಪ್ರತಿಯೊಂದು

ಕಾರ್ಯದಲ್ಲೂ ಸಫಲತೆಯನ್ನು ಪಡೆಯುತ್ತಾನೆ.

ಉಂಗುರದ ಬೆರಳು ಮಧ್ಯದ ಬೆರಳಿಗೆ ಸಮನಾಗಿ ಉದ್ದವಾಗಿದ್ದರೆ ಆಶ್ಚರ್ಯಕರ ರೀತಿಯ ಸಫಲತೆ ದೊರೆಯುತ್ತದೆ. ಇಂತಹ ವ್ಯಕ್ತಿಯ ಜೀವನದಲ್ಲಿ ಸುವರ್ಣಾವಕಾಶಗಳು ಆಗಾಗ್ಗೆ ಬರುತ್ತಿರುತ್ತವೆ. ಇಂಥವರು ಎಂದಿಗೂ ಯಾವುದೇ ಕಾರ್ಯದಲ್ಲೂ ನಿರಾಶೆ ಹೊಂದುವುದಿಲ್ಲ.

ಸಮತಲ ಸೂರ್ಯ ಕ್ಷೇತ್ರ ಭಯ, ಹೇಡಿತನ ಮತ್ತು ಗುಲಾಮತನದ ಪರಿಚಯ ನೀಡುತ್ತದೆ. ಅಲ್ಲಿಯೇ ಅದುಮಲ್ಪಟ್ಟ ಕ್ಷೇತ್ರ ಮತ್ತಷ್ಟು ನಿಕೃಷ್ಟತೆಯನ್ನು ನೀಡುತ್ತದೆ. ಇಂತಹ ವ್ಯಕ್ತಿ ಆರ್ಥಿಕ ದೃಷ್ಟಿಯಲ್ಲಿ ಹೀನನಾಗಿರುತ್ತಾನೆ ಮತ್ತು ಯಾವಾಗಲೂ ನಿರಾಶೆ ಮನೆ ಮಾಡಿಕೊಂಡಿರುತ್ತದೆ.

## 4. ಬುಧ ಪರ್ವತ

ಕಿರುಬೆರಳಿನ ಕೆಳಗಿರುವ ಈ ಕ್ಷೇತ್ರ ಮನುಷ್ಯನನ್ನು ವಿದ್ವಾಂಸ, ಕಲಾಕಾರ, ವೈಜ್ಞಾನಿಕ ಮುಂತಾದವುಗಳಾಗುವುದಕ್ಕೆ ಸಹಾಯ ಮಾಡುತ್ತದೆ. ಇಂತಹ ವ್ಯಕ್ತಿ ಜೀವನದಲ್ಲಿ ಬಹಳಷ್ಟು ಯಾತ್ರೆಗಳನ್ನು ಮಾಡುತ್ತಾನೆ. ಹೊಸ ಹೊಸ ಜನರೊಂದಿಗೆ ಸಂಪರ್ಕ ಸೂತ್ರ ಜೋಡಿಸಿಕೊಳ್ಳುತ್ತಾನೆ. ಒಂದು ಸ್ಥಾನದಲ್ಲಿ ಸ್ಥಿರವಾಗಿ ನಿಲ್ಲುವುದು ಇಂತವರಿಗೆ ಇಷ್ಟವಿರುವುದಿಲ್ಲ. ಇವರು ವಾಕ್‌ಚಾತುರ್ಯಯುಕ್ತ ಆಕರ್ಷಕರಾಗಿರುತ್ತಾರೆ.

ಬುಧನ ಸ್ವಭಾವ ಜಾಗರೂಕತೆಯ ದೃಷ್ಟಿಯನ್ನಿರಿಸಿಕೊಳ್ಳುವುದಾಗಿದೆ. ಯಾವುದೇ ಕಾರ್ಯವನ್ನು ಮಾಡುವುದಕ್ಕೆ ಮುಂಚೆ ಕೀರ್ತಿ–ಅಪಕೀರ್ತಿ, ನಷ್ಟ–ಲಾಭ, ಜಯ–ಪರಾಜಯದ ಬಗ್ಗೆ ಚೆನ್ನಾಗಿ ಪರೀಕ್ಷಿಸುತ್ತಾರೆ. ತಮ್ಮ ತಿಳುವಳಿಕೆ, ಬುದ್ಧಿಯಿಂದ ಜನಗಳ ಮೇಲೆ ಪ್ರಾಯಃ ಆಡಳಿತ ನಡೆಸುತ್ತಾರೆ.

ಭೌತಿಕ ಸಂಪತ್ತು, ಸಮೃದ್ಧಿ ಮತ್ತು ಐಶ್ವರ್ಯದ ಕಾರಕ ಬುಧಕ್ಷೇತ್ರವಾಗಿದೆ. ಈ ವ್ಯಕ್ತಿಗಳು ಫಲವತ್ತಾದ ಮಸ್ತಿಷ್ಕದವರು, ತೀಕ್ಷ್ಣ ಬುದ್ಧಿಯವರು ಮತ್ತು ಪರಿಸ್ಥಿತಿಯನ್ನು ಬಹಳ ಚೆನ್ನಾಗಿ ಅರ್ಥ ಮಾಡಿಕೊಳ್ಳುವ ಶಕ್ತಿ ಇರಿಸಿಕೊಂಡಿರುವವರಾಗಿರುತ್ತಾರೆ.

ಆವಶ್ಯಕತೆಗಿಂತ ಹೆಚ್ಚು ವಿಕಸಿತವಾಗಿರುವ ಬುಧ ಪರ್ವತ ಉಚಿತವೆಂದು ಹೇಳಲಾಗುವುದಿಲ್ಲ. ಇಂತಹ ವ್ಯಕ್ತಿಗಳು ಧೂರ್ತರು, ಚತುರರು, ಮೋಸಗಾರರು, ಕಪಟಿಗಳು, ದ್ರೋಹಿಗಳು, ಕಳ್ಳರು ಮತ್ತು ಎಲ್ಲಾ ಗೊತ್ತಿದ್ದು ಏನೊಂದೂ ತಿಳಿಯದಂತೆ ನಟಿಸುವ ಪ್ರವೃತ್ತಿ

ಇಟ್ಟುಕೊಂಡಿರುವವರಾಗಿರುತ್ತಾರೆ. ಇವರು ಧನಪ್ರಾಪ್ತಿ ಮಾಡಿಕೊಳ್ಳಲು ಉಗ್ರ ಮಂತ್ರದ ಉಪಯೋಗವನ್ನು ಸಹ ಮಾಡುತ್ತಿರುತ್ತಾರೆ.

ಸಮ ಉನ್ನತ ಬುಧ ಪರ್ವತದಿಂದ ಉದ್ಯಮದಲ್ಲಿ ಕುಶಲತೆ, ವೈಜ್ಞಾನಿಕ ಉಪಲಬ್ಧ, ಅಧಿಕಲಾಭ ನೀಡುತ್ತದೆ. ಇಂತಹ ವ್ಯಕ್ತಿ ಮನೋರಂಜನಲಿಪ್ತ, ಭ್ರಮಣಶೀಲ, ಯಾತ್ರೆ ಮಾಡುವವ ಮತ್ತು ವಿನೋದಪ್ರಿಯನಾಗಿರುತ್ತಾನೆ. ಇವರು ಕ್ಷಣಿಕ ಮೈತ್ರಿ ಇಟ್ಟುಕೊಳ್ಳುವವರು,



ಚಂಚಲರು, ಅಸ್ಥಿರರು ಮತ್ತು ವಾಕ್‌ಪಟುಗಳು ಆಗಿರುತ್ತಾರೆ.

ಸರಿಯಾದ ರೀತಿಯಲ್ಲಿ ವಿಕಸಿತವಾಗಿರುವ ಬುಧ ಪರ್ವತದಿಂದ ಮನುಷ್ಯ ಮನೋವಿಜ್ಞಾನ ಪ್ರೇಮಿಯಾಗಿ ಬಿಡುತ್ತಾನೆ. ಇವರು ವ್ಯಾಪಾರಿಕ ಕಾರ್ಯದಲ್ಲಿ ಸಫಲರಾಗುತ್ತಾರೆ. ಇವರು ಅವಸರ ಪ್ರವೃತ್ತಿಯವರು ಮತ್ತು ಭೌತಿಕವಾದಿಗಳಾಗಿರುತ್ತಾರೆ. ಇವರು ಹಣ ಕೂಡಿಡುವುದರಲ್ಲಿ ದಕ್ಷರಾಗಿರುತ್ತಾರೆ ಆದರೆ ಉಚಿತ-ಅನುಚಿತದ ಬಗ್ಗೆ ಸ್ವಲ್ಪವೂ ಗಮನ

ಕೊಡುವುದಿಲ್ಲ. ಇವರು ದರ್ಶನ ಮತ್ತು ಗಣಿತದಲ್ಲಿ ಆಸಕ್ತಿ ಉಳ್ಳವರಾಗಿರುತ್ತಾರೆ. ಇಂತಹ ವ್ಯಕ್ತಿಗಳು ಶ್ರೇಷ್ಠ ಭಾಷಣಕಾರರು ಮತ್ತು ಶ್ರೇಷ್ಠ ನಟರೂ ಆಗುತ್ತಾರೆ.

ಸಮ ಉನ್ನತ ಬುಧ ಕ್ಷೇತ್ರ ಮತ್ತು ಉದ್ದವಾದ ಹಾಗೂ ದೊಡ್ಡ ಬೆರಳಿನ ವ್ಯಕ್ತಿ ಚಿಕ್ಕ ಆಕಾರದ, ಸುಂದರ ಶರೀರದ, ಕೃಶಕಾಯದ, ಸ್ವಚ್ಛ ಮತ್ತು ಪ್ರಭಾವಶೀಲ ವ್ಯಕ್ತಿತ್ವದವನಾಗಿರುತ್ತಾನೆ. ಗುಂಡುಮುಖ, ಸಂತುಲಿತ ದೃಢಯುಕ್ತನಾಗಿರುತ್ತಾನೆ.

ಸೂರ್ಯನ ಕಡೆಗೆ ಬುಧ ಪರ್ವತ ಬಾಗಿರುವುದರ ಅರ್ಥ ಶುಭತೆ, ವಾಕ್‌ಪಟುತೆ ಮತ್ತು ವೈಜ್ಞಾನಿಕ ಆಸಕ್ತಿ ಇರುವದಾಗಿದೆ.

ಬುಧ ಮತ್ತು ಶುಕ್ರ ಸಮಾನವಾಗಿ ಎದ್ದಿದ್ದರೆ ಮತ್ತು ಕೈನ ರೇಖೆಗಳು ಚೆನ್ನಾಗಿದ್ದರೆ ಪವಿತ್ರತೆ, ಭಾಷಾ ಪ್ರವಾಹ, ಪ್ರೇಮಪೂರ್ಣ ವ್ಯಕ್ತಿತ್ವ, ಸೌಂದರ್ಯ ಪ್ರೇಮ ಪ್ರಕಟಗೊಳಿಸುತ್ತದೆ. ಒಂದು ವೇಳೆ ರೇಖೆಗಳು ನಿಕೃಷ್ಟವಾಗಿದ್ದರೆ ಮತ್ತು ಬೆರಳುಗಳು ಹಾಗೂ ಹೆಬ್ಬೆರಳಿನ ಪ್ರಥಮ ಪರ್ವ ತಿರುಗಿಕೊಂಡಿದ್ದರೆ ಧೈರ್ಯದ ಅಭಾವ, ಚಂಚಲತೆ, ಅಸಂಯಮಿತ ಮನಸ್ಸಿನ ಪರಿಚಯ ನೀಡುತ್ತದೆ.

ಬುಧ ಕ್ಷೇತ್ರದ ಮೇಲೆ ತ್ರಿಕೋನದ ಚಿಹ್ನೆ ಶುಭ ಫಲದಾಯಕವಾದುದೆಂದು ನಂಬಲಾಗಿದೆ. ನಿಂತಿರುವ ರೇಖೆಗಳು ಸಫಲತೆಯನ್ನು ಸೂಚಿಸುತ್ತದೆ. ಮೂರು ನಿಂತಿರುವ ರೇಖೆಗಳು ಚಿಕಿತ್ಸಾಕ್ಷೇತ್ರದಲ್ಲಿ ಕೀರ್ತಿಯನ್ನು ನೀಡುತ್ತದೆ. ಇಂತಹ ವ್ಯಕ್ತಿ ಕುಶಲ ವೈದ್ಯನಾಗುತ್ತಾನೆ.

ಬುಧ ಮತ್ತು ಚಂದ್ರ ಸಮಾನವಾಗಿ ಉನ್ನತವಾಗಿದ್ದರೆ ಮನುಷ್ಯನಲ್ಲಿ ಅನುಶೀಲನೆಯ ಗುಣ, ವೈಜ್ಞಾನಿಕ ವಿಷಯಗಳಲ್ಲಿ ಅಂತಃಪ್ರೇರಣೆ ಮತ್ತು ಕೆಟ್ಟ ಕೈನಲ್ಲಿ ವಿಚಿತ್ರ ಯೋಜನಾಪ್ರಕೃತಿ, ಕಪಟಪೂರ್ಣ ವ್ಯವಹಾರ ಮತ್ತು ವ್ಯರ್ಥ ಯೋಜನೆ ಮಾಡುವಂತಹ ಗುಣಗಳಿರುತ್ತವೆ.

ಬುಧ ಮತ್ತು ಮಂಗಳ ಸಮಾನ ಉನ್ನತವಾಗಿದ್ದರೆ ವ್ಯಕ್ತಿಯು ಯುಕ್ತಿ ಕುಶಲನು, ತೀವ್ರ ವಿಚಾರಶಕ್ತಿಯುಕ್ತನು ಮತ್ತು ಕೆಟ್ಟ ಕೈನಲ್ಲಿ ನಾಸ್ತಿಕನು ಮತ್ತು ವ್ಯರ್ಥ ತರ್ಕ ಉಂಟುಮಾಡುವವನು ಆಗಿರುತ್ತಾನೆ.

ಚೂಪಾದ ಕಿರುಬೆರಳು ಕಾಂತಿಯುಕ್ತ ವ್ಯಾಖ್ಯಾನ ಮಾಡುವ ಶಕ್ತಿ ನೀಡುತ್ತದೆ. ಪ್ರಥಮ ಪರ್ವದ ಉದ್ದದ ಮೇಲೆ ಚಿಕ್ಕ ಉಗುರು ವಕೀಲನಾಗುವ ಪರಿಚಯ ನೀಡುತ್ತದೆ. ಮಧ್ಯದ ಪರ್ವ

ದೊಡ್ಡದಾಗಿರುವುದು ವಿಜ್ಞಾನಿ ಅಥವಾ ಚಿಕಿತ್ಸಕನಾಗಿರುವುದರ ಲಕ್ಷಣ ತಿಳಿಸುತ್ತದೆ. ಮೂರನೇ ಪರ್ವ ದೊಡ್ಡದಾಗಿದ್ದರೆ ವ್ಯಾಪಾರ ಕುಶಲತೆ ಮತ್ತು ಧನ ಸಂಗ್ರಹಿಸುವ ಯೋಗ್ಯತೆ ನೀಡುತ್ತದೆ. ಇಂತಪ ವ್ಯಕ್ತಿಗಳು ಸಂಪರ್ಕ ಸ್ಥಾಪಿಸುವುದರಲ್ಲಿ ಬುದ್ಧಿವಂತರಾಗಿರುತ್ತಾರೆ. ಈ ಪರ್ವದ ಅಂಚು ಒಂದು ವೇಳೆ ವರ್ಗಾಕಾರವಾಗಿದ್ದರೆ ಅಧಿಕಾರಯುಕ್ತ ಅಧ್ಯಯನದಲ್ಲಿ ಸಫಲತೆ ದೊರೆಯುತ್ತದೆ.

ಬುಧ ಕ್ಷೇತ್ರದ ಮೇಲೆ ಬಿಂದು ಚಿಹ್ನೆ ಶುಭವಾದುದಲ್ಲ. ಅಡ್ಡರೇಖೆಗಳು ಚಿಂತೆಯನ್ನು ನೀಡುತ್ತವೆ. ದ್ವೀಪ ಚಿಹ್ನೆ ವಿರುದ್ಧ ಫಲ ನೀಡುತ್ತದೆ. ಕಲೆ, ಗುರುತು ಅಥವಾ ಕ್ರಾಸ್ ಎಳ್ಳು ಸಹ ಅನುಕೂಲತೆಯನ್ನು ನೀಡುವುದಿಲ್ಲ.

ಈ ಕ್ಷೇತ್ರ ನಿರ್ದೋಷವಾಗಿದ್ದು ಮತ್ತು ಎಲ್ಲಾ ಬೆರಳುಗಳು ತಮ್ಮ ಸಾಮಾನ್ಯ ಆಕಾರದಲ್ಲಿ ಸುಂದರ ಮತ್ತು ವಿರುದ್ಧ ಚಿಹ್ನೆರಹಿತವಾಗಿದ್ದರೆ ಶುಭಲಕ್ಷಣವಾಗಿರುತ್ತದೆ. ನುಣುಪು ಬೆರಳುಗಳು, ವಿಶ್ಲೇಷಣ ಶಕ್ತಿಯ ಪರಿಚಯ ನೀಡುತ್ತದೆ. ದೃಢ ಸುಂದರ ಬೆರಳುಗಳು ಬೌದ್ಧಿಕ ವಿಕಾಸವನ್ನು, ಚಿಕ್ಕ ಬೆರಳುಗಳು ತೀಕ್ಷ್ಣತೆಯ ಬುದ್ಧಿಯನ್ನು, ದೊಡ್ಡದಾದ ಮತ್ತು ಉದ್ದವಾದ ಬೆರಳುಗಳು ಸೂಕ್ಷ್ಮದರ್ಶಿತನವನ್ನು ಪ್ರಕಟಿಸುತ್ತದೆ.

ದೋಷವಿಲ್ಲದ ಬುಧ ಕ್ಷೇತ್ರದ ಜೊತೆಗೆ ಬಳುಕುವ ಅಂಗೈ ಇದ್ದರೆ ಮಸ್ತಿಷ್ಕ ಪರಿಷ್ಕೃತವಾಗಿರುವುದನ್ನು ವ್ಯಕ್ತಪಡಿಸುತ್ತದೆ. ಇಂತಹ ವ್ಯಕ್ತಿ ಪ್ರಖರ ಬುದ್ಧಿಯಿಂದಾಗಿ ವಿಷಮ ಪರಿಸ್ಥಿತಿಗಳಲ್ಲೂ ಸಹ ಕಾರ್ಯ ಸಾಧಿಸಿಯೇ ತೀರುತ್ತಾನೆ.

ಅಂಗೈನ ಬಣ್ಣ ಹಳದಿಯಾಗಿದ್ದರೆ ರಕ್ತದ ಕೊರತೆ, ಹೊಟ್ಟೆ ಮತ್ತು ಯಕೃತ್ ತೊಂದರೆ ನೀಡುತ್ತದೆ. ಗುಲಾಬಿ ವರ್ಣದ ಅಂಗೈ ಶುಭವನ್ನು ನೀಡುತ್ತದೆ.

ಬುಧ ಕ್ಷೇತ್ರದ ಮೇಲೆ ಚತುಷ್ಕೋಣದ ಚಿಹ್ನೆ ತೀಕ್ಷ್ಣ ದೃಷ್ಟಿಯ ಸಂಕೇತವಾಗಿದೆ. ಇಂತಹ ವ್ಯಕ್ತಿ ಬೇರೆಯವರ ಮನೋಭಾವನೆಗಳನ್ನು ಅರ್ಥ ಮಾಡಿಕೊಳ್ಳುವುದರಲ್ಲಿ ಕುಶಲನಾಗಿರುತ್ತಾನೆ. ಒಂದು ವೇಳೆ ಈ ಕ್ಷೇತ್ರ ಮಂಗಳದ ಕಡೆಗೆ ತಿರುಗಿಕೊಂಡಿದ್ದರೆ ಸೌಮ್ಯ ಪ್ರಕೃತಿಯ ಪರಿಚಯ ಪ್ರಾಪ್ತವಾಗುತ್ತದೆ.

## 5. ಶುಕ್ರ ಪರ್ವತ

ಹೆಬ್ಬೆರಳಿನ ಎರಡನೇ ಪರ್ವದ ಕೆಳಗೆ ಮತ್ತು ಆಯುಸ್ಸು ರೇಖೆಯಿಂದ ಸುತ್ತುವರೆಯಲ್ಪಟ್ಟ ಯಾವ ಕ್ಷೇತ್ರವಿದೆಯೋ ಅದೇ ಶುಕ್ರ ಕ್ಷೇತ್ರವಾಗಿದೆ. ಶುಕ್ರ ಸೌಂದರ್ಯದ ದೇವತೆ ಎಂದು ನಂಬಲಾಗಿದೆ. ಯಾರ ಕೈಲಿ ಶುಕ್ರನ ಶ್ರೇಷ್ಠತೆ ಇರುತ್ತದೋ ಅಂತಹ ವ್ಯಕ್ತಿ ಸುಂದರನು, ಸಭ್ಯನು ಮತ್ತು ಆದರ್ಶಪ್ರೇಮಿಯೂ ಆಗಿರುತ್ತಾನೆ. ಇಂತಹ ವ್ಯಕ್ತಿ ಆರೋಗ್ಯವಂತನೂ, ಸಾಹಸಿಯೂ ಮತ್ತು ಧೈರ್ಯಶಾಲಿಯೂ ಆಗಿರುತ್ತಾನೆ. ಇಂತಹ ವ್ಯಕ್ತಿ ಸ್ತ್ರೀಪ್ರೇಮಿಯೂ, ದಯಾವಂತನೂ, ಉದಾರಿಯೂ, ಕಲಾ ಮತ್ತು ಸಂಗೀತ ಪ್ರೇಮಿಯೂ ಆಗಿರುತ್ತಾನೆ.



ಸಾಮಾನ್ಯ ರೀತಿಯಲ್ಲಿ ಉನ್ನತವಾಗಿರುವ ಶುಕ್ರ ಕ್ಷೇತ್ರ ಇರುವಂತಹ ವ್ಯಕ್ತಿ ಧನಧಾನ್ಯ ಸಂಪನ್ನನೂ, ಆರೋಗ್ಯವಂತನೂ, ಸುಖಿಯೂ,

ಶಾಂತನೂ, ಪುರುಷತ್ವದಿಂದ ಕೂಡಿದವನೂ, ಶುದ್ಧಪ್ರೇಮಿಯು, ದಾನಿಯೂ, ನೃತ್ಯ-ಗೀತ ಪ್ರೇಮಿಯೂ ಆಗುತ್ತಾನೆ.

ಆವಶ್ಯಕತೆಗಿಂತ ಹೆಚ್ಚು ಉನ್ನತ ಶುಕ್ರ ಕ್ಷೇತ್ರ ಇದ್ದರೆ ಇದರ ಪ್ರಭಾವದಿಂದ ವ್ಯಕ್ತಿ ಕಾಮುಕನೂ, ದರ್ಪ ಉಳ್ಳವನೂ, ಕಪಟಿಯೂ, ಹೃದಯಹೀನ ಸ್ವಾರ್ಥಿಯೂ, ಅತ್ಯಧಿಕ ಭೋಗಿಯೂ ಆಗುತ್ತಾನೆ.

ಶುಕ್ರನಿಲ್ಲದ ಕೈ ಇರುವ ವ್ಯಕ್ತಿ ವಿರಕ್ತಿಯಾಗಿ ಸಾಧು ಸನ್ಯಾಸಿಗಳಂತೆ ಜೀವನ ಕಳೆಯುತ್ತಾನೆ.

ಶುಕ್ರ ಮತ್ತು ಚಂದ್ರ ಎರಡೂ ವಿಕಸಿತಗೊಂಡಿದ್ದರೆ ಪ್ರಿಯತಮ ಪ್ರೇಯಸಿಯೊಂದಿಗೆ ಪರಾರಿಯಾಗುತ್ತಾನೆ. ಆದರೆ ಕೈನ ರೇಖೆಗಳು ಒಂದು ವೇಳೆ ನಿಕೃಷ್ಟವಾಗಿದ್ದರೆ ಪ್ರೀತಿಯ ವಿಚಾರಗಳಲ್ಲಿ ಅಸ್ವಾಭಾವಿಕ ಮನೋವೃತ್ತಿ ಮತ್ತು ಅಸ್ಥಿರತೆ ಬೆಳೆಯುತ್ತದೆ.

ಶುಕ್ರ ಮತ್ತು ಮಂಗಳ ಎರಡೂ ವಿಕಸಿತಗೊಂಡಿದ್ದರೆ ಕಾಮುಕತೆ, ಅಸೂಯೆ, ಸಂಗೀತ ಮತ್ತು ನೃತ್ಯದಲ್ಲಿ ಹೆಚ್ಚು ಆಸಕ್ತಿ ಇರುತ್ತದೆ. ಸಫಲತೆ ವಿಳಂಬದಿಂದ ದೊರೆಯುತ್ತದೆ.

ಮಸ್ತಿಷ್ಕ ರೇಖೆ ಸಂತುಲಿತವಾಗಿರದಿದ್ದರೆ ವ್ಯಕ್ತಿ ಪ್ರೇಮ ಮತ್ತು ಭೋಗದ ಕ್ಷೇತ್ರದಲ್ಲಿ ಕೆಟ್ಟ ಹೆಸರು ಪಡೆಯುತ್ತಾನೆ. ಇವರಲ್ಲಿ ಪ್ರೇಮ ಮತ್ತು ಕಾಮವಾಂಛೆ ಪ್ರಧಾನವಾಗಿರುತ್ತದೆ.

ಕಡಿಮೆ ರೇಖಾಯುಕ್ತ ನುಣುಪು ಶುಕ್ರ ಪರ್ವತ ಸಫಲತೆಯ ಕಾರಕವಾಗಿರುತ್ತದೆ.

ಅಧಿಕ ರೇಖಾಯುಕ್ತ ಶುಕ್ರ ಜೀವನದಲ್ಲಿ ಪದೇ ಪದೇ ತೊಂದರೆಗಳನ್ನು ಉತ್ಪನ್ನ ಮಾಡುತ್ತದೆ. ಸಫಲತೆ ಪಡೆದರೂ ಸಹ ಕಷ್ಟಗಳು ಉಂಟಾಗುತ್ತವೆ.

ಬಿರುಸಾದ ಶುಕ್ರ ವ್ಯಾಕುಲತೆಯನ್ನು ನೀಡುತ್ತದೆ. ಕುರೂಪ ಶುಕ್ರ ವಿಫಲತೆಯನ್ನು ನೀಡುತ್ತದೆ. ದೃಢ ಅಂಗೈ, ಚಿಕ್ಕ ಬೆರಳುಗಳು ಮಾನಸಿಕ ವಿಕಾಸದಲ್ಲಿ ದೋಷವನ್ನುಂಟು ಮಾಡುತ್ತದೆ. ಇಂಥವರು ಕಲಾಪ್ರೇಮಿಗಳಾಗಿರುವುದಿಲ್ಲ. ಆದರೆ ಉತ್ತೇಜಿತರಾಗಿರುತ್ತಾರೆ. ಇವರ ಕಾಮವಾಂಛೆ ಪಶುಗಳ ರೀತಿಯಲ್ಲಿ ವಿಕೃತವಾಗಿ ಮತ್ತು ಸ್ವಾರ್ಥಪೂರ್ಣವಾಗಿರುತ್ತದೆ.

ಶುಕ್ರ ಪ್ರಧಾನ ವ್ಯಕ್ತಿಗಳು ಗಂಟಲುರೋಗದಿಂದ ಪೀಡಿತರಾಗಿರುತ್ತಾರೆ. ದೇವರ ಬಗ್ಗೆ ಅನಾಸಕ್ತಿ ಇವರಿಗಿರುತ್ತದೆ. ಇವರು

ಬಹಳ ಜನ ಮಿತ್ರರನ್ನು ಹೊಂದಿರುವವರು ಮತ್ತು ಭೋಗ ಪ್ರಿಯರಾಗಿರುತ್ತಾರೆ.

ಹೆಬ್ಬೆರಳಿನ ಅಂಚು ಕೂಡಡಿಯಂತಿದ್ದು ಶುಕ್ರ ವಿಕಸಿತವಾಗಿದ್ದರೆ ವ್ಯಕ್ತಿ ಕಲಾತ್ಮಕ ಅಭಿರುಚಿ ಇಟ್ಟುಕೊಳ್ಳುತ್ತಾನೆ. ಹೆಬ್ಬೆರಳು ವರ್ಗಾಕಾರವಾಗಿದ್ದರೆ ವ್ಯಕ್ತಿ ತಾರ್ಕಿಕನು ಮತ್ತು ತಿಳುವಳಿಕೆ ಉಳ್ಳವನೂ ಆಗಿರುತ್ತಾನೆ. ಹರಡಿಕೊಂಡಿರುವ ಹೆಬ್ಬೆರಳಿನ ಅಂಚು ಇದ್ದರೆ ಉದಾರತೆಯನ್ನು ನೀಡುತ್ತದೆ.

ತ್ರಿಕೋನದ ಚಿಹ್ನೆ ಈ ಕ್ಷೇತ್ರದ ಮೇಲೆ ಇದ್ದರೆ ಅದು ಕಾರ್ಯಕುಶಲತೆಯನ್ನು ಸೂಚಿಸುತ್ತದೆ. ಆದರೆ ಇಂತವರು ಸ್ವಾರ್ಥಿಗಳಾಗಿರುತ್ತಾರೆ. ಬಿಂದು ಅಥವಾ ವೃತ್ತ ಚಿಹ್ನೆ ಅಶುಭವನ್ನು ಕೊಡುತ್ತದೆ. ಕ್ರಾಸ್‌ನ ಚಿಹ್ನೆ ತೊಂದರೆಯನ್ನು ನೀಡುತ್ತದೆ. ದ್ವೀಪ ಚಿಹ್ನೆ ಶುಭ ಕಾರ್ಯದಲ್ಲಿ ಅಡಚಣೆಯನ್ನು ಮತ್ತು ಸಫಲತೆಯನ್ನು ಕೊಡುತ್ತದೆ.

ಈ ಶುಕ್ರ ಕ್ಷೇತ್ರದಿಂದ ಹೊರಟಿರುವ ಡೊಂಕು ರೇಖೆ ಜೀವನ ಅಥವಾ ಶೀರ್ಷರೇಖೆಯಿಂದ ಹಾದು ವಿವಾಹ ರೇಖೆಯವರೆಗೆ ತಲುಪಿದ್ದರೆ ಪ್ರೇಮದಲ್ಲಿ ಅಸಫಲತೆ ಉಂಟಾಗುತ್ತದೆ. ಒಂದು ವೇಳೆ ಈ ರೇಖೆ ಹೃದಯ ರೇಖೆಯನ್ನು ಕತ್ತರಿಸಿಕೊಂಡು ಹಾದು ಹೋದರೆ ಪತಿ-ಪತ್ನಿಯರಲ್ಲಿ ವಿರಸವಿರುತ್ತದೆ ಮತ್ತು ವಿಚ್ಛೇದನ ಉಂಟಾಗುತ್ತದೆ.

ಭಾಗ್ಯ ರೇಖೆಯನ್ನು ಕತ್ತರಿಸಿಕೊಂಡು ಹೋಗಿದ್ದರೆ ದುರದೃಷ್ಟ ಸೂಚಿಸುತ್ತದೆ.

ಶುಕ್ರ ಮಣಿಕಟ್ಟಿನ ಕಡೆಗೆ ಕತ್ತರಿಸಲ್ಪಟ್ಟಿದ್ದರೆ ನೃತ್ಯದ ಕಡೆಗೆ ಒಲವು ತೋರಿಸುತ್ತದೆ. ಅದುಮಲ್ಪಟ್ಟ ಈ ಕ್ಷೇತ್ರ ತನ್ನ ಗುಣಗಳ ವಿರುದ್ಧ ಕಾರ್ಯ ನಿರ್ವಹಿಸುತ್ತದೆ. ವಿಕಸಿತವಾದ್ದ ಮತ್ತು ಉನ್ನತವಾಗಿರುವ ಕ್ಷೇತ್ರ ಸಂತಾನೋತ್ಪತ್ತಿಯಲ್ಲಿ ವೃದ್ಧಿ ನೀಡುತ್ತದೆ. ಒಂದು ವೇಳೆ ರೇಖೆ ಜೀವನ -ಭಾಗ್ಯ-ಶೀರ್ಷ ರೇಖೆಗಳನ್ನು ಕತ್ತರಿಸಿಕೊಂಡು ಮಂಗಳದವರೆಗೆ ತಲುಪಿದರೆ ಪತ್ನಿಯಿಂದ ಕಾನೂನಿನ ವಿವಾದ ಉತ್ಪನ್ನ ಮಾಡುತ್ತದೆ.

## 6. ಚಂದ್ರ ಪರ್ವತ

ಇದು ಮಾನವನ ಸರ್ವಾಧಿಕ ಹತ್ತಿರದ ಗ್ರಹವಾಗಿದೆ. ಸುಂದರತೆ ಮತ್ತು ಕಲ್ಪನೆಯ ಗ್ರಹ ಇದಾಗಿದೆ.

ಅಂಗೈನಲ್ಲಿ ಆಯಸ್ಸು ರೇಖೆಯಿಂದ ಎಡಗಡೆಯ ಕಡೆಗೆ ಮತ್ತು

ಮಣಿಕಟ್ಟಿನ ಮೇಲೆ ಭಾಗ್ಯರೇಖೆಯೊಂದಿಗೆ ಅಂಟಿಕೊಂಡಿರುವ ಯಾವ ಕ್ಷೇತ್ರವಿದೆ ಅದು ಚಂದ್ರ ಪರ್ವತವೆಂದು ಕರೆಯಲ್ಪಡುತ್ತದೆ.

ಚಂದ್ರ ಪರ್ವತ ಉನ್ನತವಾಗಿದ್ದು, ಮೇಲಕ್ಕೆ ಎದ್ದಿದ್ದು ಮತ್ತು ಸುಂದರವಾಗಿದ್ದರೆ ಸುಖ, ಸಂತೋಷ, ಶಾಂತಿಯನ್ನು ನೀಡುತ್ತದೆ. ಇಂತಹ ವ್ಯಕ್ತಿ ಕಲಾಪ್ರೇಮಿ ಅಥವಾ ಕಲಾಕಾರ, ಮೇಲ್ಮಟ್ಟದ ತಿಳುವಳಿಕೆ ಉಳ್ಳವನು, ಸಾಹಿತ್ಯಕಾರ, ಕವಿ, ಪತ್ರಕಾರ ಮತ್ತು ಸೌಂದರ್ಯ ಪ್ರೇಮಿ ಆಗುತ್ತಾನೆ. ಕಲ್ಪನೆಯ ಬಲದಿಂದ ಹಣ ಸಂಪಾದಿಸುತ್ತಾನೆ. ಒಳ್ಳೆಯ ಯೋಜನೆಯನ್ನು ಹಾಕುವವನಾಗುತ್ತಾನೆ.

ಒಂದು ವೇಳೆ ಈ ಕ್ಷೇತ್ರ ಅವಶ್ಯಕತೆಗಿಂತ ಹೆಚ್ಚು ಉನ್ನತವಾಗಿದ್ದರೆ ಫಲಗಳಲ್ಲಿ ವಿಕೃತಿ ಉಂಟಾಗುತ್ತದೆ. ಇಂತಹ ವ್ಯಕ್ತಿ ಹೆಚ್ಚು ಆವೇಶದವನು,



ಚಂಚಲನು, ಅಸತ್ಯದವನು ಆಗುತ್ತಾನೆ.

ಸಾಮಾನ್ಯ ಚಂದ್ರ ಪರ್ವತ, ಇದು ಮಂಗಳ ಪರ್ವತದ ಹತ್ತಿರ ಮೇಲಿನ ಭಾಗಕ್ಕಿಂತ ಮಣಿಕಟ್ಟಿನ ಹತ್ತಿರ ಹೆಚ್ಚು ತುಂಬಿಕೊಂಡಿರಬೇಕು. ಇಂತಹ ಪರ್ವತ ಸ್ವಸ್ಥಕಲ್ಪನೆ, ಪವಿತ್ರತೆ, ಕಾವ್ಯರಹಸ್ಯಾತ್ಮಕತೆ, ಸಂಗೀತಜ್ಞತೆ ಅಥವಾ ಪದೇ ಪದೇ ಯಾತ್ರೆಗಳ ಬಗ್ಗೆ ಆಸಕ್ತಿ ಉತ್ಪನ್ನ ಮಾಡುತ್ತದೆ.

ಇವರು ಒಳ್ಳೆಯ ಭವಿಷ್ಯಕಾರರಾಗಿರುತ್ತಾರೆ. ಇವರು ಬಹಳ ಉದಾಸವಾಗಿರುತ್ತಾರೆ. ಇವರು ಅಸಾಧಾರಣ ರೂಪದಿಂದ ವಿವಾಹ ಮಾಡಿಕೊಳ್ಳುತ್ತಾರೆ. ವಿಚಾರಗಳಲ್ಲಿ ಸೋಮಾರಿತನ ತೋರುತ್ತಾರೆ, ಆದರೆ ಕೆಲಸದಲ್ಲಿ ಸೋಮಾರಿತನ ತೋರುವುದಿಲ್ಲ.

ಸಾಮಾನ್ಯವಾಗಿ ಆದರೆ ಸರಿಯಾಗಿ ಕೇಂದ್ರದಿಂದ ತುಂಬಿಕೊಂಡಿರುವ ಚಂದ್ರ ಆಂತರಿಕ ಅಥವಾ ಕರುಳು ಸಂಬಂಧದ ಕಷ್ಟವನ್ನು ಕೊಡುತ್ತಾನೆ. ಸಾಮಾನ್ಯದ ಮೇಲೆ ಮೇಲುಭಾಗದಿಂದ ತುಂಬಿಕೊಂಡಿರುವ ಚಂದ್ರ ವಾತರೋಗ ಮತ್ತು ನೆಗಡಿಯನ್ನು ಕೊಡುತ್ತಾನೆ.

ಆಳವಾದ ಚಂದ್ರ ಕ್ಷೇತ್ರ ದುಃಖ ಮತ್ತು ಮಾನಸಿಕ ಚಿಂತೆಯನ್ನು ಕೊಡುತ್ತಾನೆ.

ಅತ್ಯಂತ ಉಬ್ಬಿಕೊಂಡಿರುವ ಚಂದ್ರ ರೋಗವನ್ನು, ಅಸ್ಥಿರತೆಯನ್ನು, ಶೀಘ್ರ ಕೋಪವನ್ನು, ಭ್ರಮೆಯನ್ನು, ಹುಚ್ಚುತನವನ್ನು ಮತ್ತು ಶಿರೋರೋಗವನ್ನು ನೀಡುತ್ತಾನೆ.

ಎತ್ತರಕ್ಕೆ ಇರದ ಚಿಕ್ಕ ಮತ್ತು ಉದ್ದವಾದ ಚಂದ್ರ ಕ್ಷೇತ್ರ ಸಂತೋಷ, ವಿಚಾರ ಮಗ್ನತೆ ಮತ್ತು ಬಲಹೀನತೆಯನ್ನು ಕೊಡುತ್ತಾನೆ.

ಚಂದ್ರ ಮತ್ತು ಮಂಗಳ ಎರಡೂ ಪುಷ್ಟವಾಗಿದ್ದರೆ ಸಮುದ್ರ ಯಾತ್ರೆಯಾಗುತ್ತದೆ.

ಚಂದ್ರನ ಮೇಲೆ ಗಂಟು ಅಥವಾ ಗುಂಡಾದ ಗುರುತು ಕ್ರೋಧ, ಹತ್ಯೆ ಮತ್ತು ನೀಚ ಕಾರ್ಯಗಳನ್ನು ಮಾಡಿಸುತ್ತದೆ.

ಚಂದ್ರನ ಮೇಲೆ ತ್ರಿಕೋನ ಚಿಹ್ನೆ ಶುಭತ್ವ ಮತ್ತು ಗುಪ್ತ ವಿದ್ಯೆಗಳಲ್ಲಿ ದಕ್ಷತೆಯನ್ನು ಕೊಡುತ್ತದೆ. ಚಿಕ್ಕ ತ್ರಿಕೋನ ಅಸಫಲತೆಯ ಸೂಚಕವಾಗಿರುತ್ತದೆ. ದೊಡ್ಡ ತ್ರಿಕೋನ ಮಹಾಫಲಕಾರಿಯಾದುದಾಗಿರುತ್ತದೆ.

ನೆಟ್ಟಗಿರುವ ರೇಖೆಗಳು ಶುಭ ಫಲ ನೀಡುತ್ತವೆ. 2-3 ರೇಖೆಗಳು ಸುಖ ಸೂಚಕವಾಗಿರುತ್ತವೆ. ಯಾವುದಾದರೂ ರೇಖೆ ಶುಕ್ರನವರೆಗೆ ತಲುಪಿದ್ದರೆ ಜಲಯಾತ್ರೆಯ ಸೂಚನೆ ನೀಡುತ್ತದೆ. ಮಣಿಕಟ್ಟಿನಿಂದ ಎದ್ದು ಯಾವುದಾದರೂ ರೇಖೆ ಚಂದ್ರನ ಮೇಲೆ ತಲುಪಿದರೂ ಸಹ ಅದು ಶುಭವನ್ನು ನೀಡುತ್ತದೆ.

ಮಂಗಳದವರೆಗೆ ಚಂದ್ರನಿಂದ ತಲುಪುವ ರೇಖೆ ಸಮುದ್ರ ಯಾತ್ರೆಯ ಕಾರಕವಾಗಿದೆ. ಜೀವನ ರೇಖೆಯ ಯಾವುದಾದರೂ ಶಾಖೆ ಚಂದ್ರಕ್ಷೇತ್ರದ ಮೇಲೆ ತಲುಪಿದ್ದರೆ ಸಂಪತ್ತಿನಲ್ಲಿ ಲಾಭ, ಅನಾಯಾಸ ಧನ

ಪ್ರಾಪ್ತಿಯಾಗುತ್ತದೆ. ಚಂದ್ರನಿಂದ ಶುಕ್ರನವರೆಗೆ ಹೋಗುವ ಅಡ್ಡರೇಖೆ ವ್ಯಸ್ತಜೀವನದ ಪರಿಚಯ ನೀಡುತ್ತದೆ.

## 7. ಮಂಗಳ ಪರ್ವತ

ಜೀವನ ರೇಖೆಯ ಪ್ರಾರಂಭಿಕ ಸ್ಥಾನದ ಕೆಳಗೆ ಮತ್ತು ಅದರಿಂದ ಸುತ್ತುವರೆಯಲ್ಪಟ್ಟ ಶುಕ್ರಪರ್ವತ, ಅದರ ಮೇಲೆ ಯಾವ ಅರಳಿಕೊಂಡಿರುವ ಭಾಗವಿದೆಯೋ ಅದು ಮಂಗಳ ಪರ್ವತ ಎಂದು ಕರೆಯಲ್ಪಡುತ್ತದೆ. ಮಂಗಳ ಯುದ್ಧದ ಪ್ರತೀಕವಾಗಿದೆ. ಇಂತಹ ವ್ಯಕ್ತಿಗಳು ಸಾಹಸಿಗಳು, ಧೈರ್ಯ ಶಾಲಿಗಳು ಮತ್ತು ಶಕ್ತಿಶಾಲಿಗಳಾಗಿರುತ್ತಾರೆ.

ಯಾರ ಕೈಗಳಲ್ಲಿ ಮಂಗಳ ಪರ್ವತ ಶಕ್ತಿಯುತವಾಗಿರುತ್ತದೋ ಅಂತಹ ವ್ಯಕ್ತಿಗಳು ಧೈರ್ಯಶಾಲಿಗಳು, ಸಾಹಸಿಗಳು, ನಿರ್ಭಯರೂ ಆಗಿರುತ್ತಾರೆ. ಮಂಗಳವಿಲ್ಲದ ವ್ಯಕ್ತಿ ಹೇಡಿಯಾಗಿರುತ್ತಾನೆ.

ಮಂಗಳ ಪ್ರಧಾನ ವ್ಯಕ್ತಿ ದಷ್ಟಪುಷ್ಟನು, ನೀಳಕಾಯನು, ಧೈರ್ಯವಂತನೂ, ಸಾಹಸಿಯೂ, ಅನ್ಯಾಯದ ವಿರೋಧಿಯು, ಪೊಲೀಸ್ ಅಥವಾ ಸೇನೆಯಲ್ಲಿ ಉನ್ನತಿ ಹೊಂದುವವನಾಗಿರುತ್ತಾನೆ. ಇಂತವರು ಸಮಾಜದ ನೇತೃತ್ವ ಮಾಡಬಲ್ಲರು.

ಬಹಳ ಹೆಚ್ಚು ವಿಕಸಿತವಾದ ಮಂಗಳ ಕ್ಷೇತ್ರ ಹೊಂದಿರುವ ವ್ಯಕ್ತಿ ದುರಾಚಾರಿಯು, ಅತ್ಯಾಚಾರಿಯೂ, ಕೊಲೆಗಾರನೂ, ಅಪರಾಧಿಯೂ ಸಮಾಜ ವಿರೋಧಿಯೂ, ಲಂಪಟನು, ಧೂರ್ತನೂ ಆಗಿರುತ್ತಾನೆ.

ಶುಕ್ರನ ಕಡೆಗೆ ಬಾಗಿರುವ ಮಂಗಳ ದುರ್ಗುಣಗಳನ್ನು ಉತ್ಪನ್ನ ಮಾಡುತ್ತದೆ. ಇಂತವರು ಆವೇಶಿಗಳು, ತೀವ್ರ ಶತ್ರುಗಳನ್ನು ಹೊಂದಿರುವವರು, ಸುಳ್ಳು ಗೌರವ ಇಟ್ಟುಕೊಂಡಿರುವವರು, ಒಣ ಆಡಂಬರದವರು, ಬೊಗಳ ಬಿಡುವವರು ಮತ್ತು ಪ್ರದರ್ಶನ ಪ್ರಿಯರು ಆಗಿರುತ್ತಾರೆ.

ಅವಿಕಸಿತ ಮಂಗಳ ಕ್ಷೇತ್ರ ಉಳ್ಳವರು ಪಾಪಕರ್ಮಿಗಳು, ಕಾಮುಕರು ಆಗಿರುತ್ತಾರೆ. ಇವರು ಸ್ವಸ್ಥರು, ಶಕ್ತಿಶಾಲಿಗಳು, ನೇತೃತ್ವ ಯುಕ್ತನೂ ಆಗಿರುತ್ತಾರೆ.

ಅಂಗೈನ ಹಳದಿ ಬಣ್ಣ ಅಪರಾಧಿ ವೃತ್ತಿಯನ್ನು ವೃದ್ಧಿಸುತ್ತದೆ. ನೀಲಿ ಬಣ್ಣ ವಾತರೋಗವನ್ನು ನೀಡುತ್ತದೆ.

ಉಬ್ಬಿರುವ ಮಂಗಳ ಕ್ಷೇತ್ರ ಮತ್ತು ಕೋನಗಳುಳ್ಳ ಬೆರಳುಗಳಿದ್ದರೆ ಅಂತಹ ವ್ಯಕ್ತಿ ಆದರ್ಶದವನಾಗಿರುತ್ತಾನೆ. ವರ್ಗಾಕಾರದ ಬೆರಳುಗಳುಳ್ಳ

ವ್ಯಕ್ತಿ ವ್ಯಾವಹಾರಿಕನು, ಚತುರನು, ಚಾಲಾಕನು ಮತ್ತು ತನ್ನ ಹಿತ ಬಯಸುವವನಾಗಿರುತ್ತಾನೆ.

ಗಂಟುಳ್ಳ ಬೆರಳುಗಳು ಮತ್ತು ಉನ್ನತ ಮಂಗಳ ಕ್ಷೇತ್ರ ವ್ಯಕ್ತಿಯನ್ನು ತಾರ್ಕಿಕನನ್ನಾಗಿ ಮಾಡುತ್ತದೆ.

ಮಂಗಳದ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ಅದು ಅಸ್ತ್ರ ಶಸ್ತ್ರದಿಂದ ಮೃತ್ಯುವಾಗುತ್ತದೆಂದು ಸೂಚಿಸುತ್ತದೆ.

ಅಂಕು ಡೊಂಕು ರೇಖೆಗಳು ಮತ್ತು ಬಲೆಯ ಚಿಹ್ನೆ ದುರ್ಘಟನೆಯಿಂದ ಮೃತ್ಯುವಾಗುವುದನ್ನು ಸೂಚಿಸುತ್ತದೆ.

ದೋಷಯುಕ್ತ ಕ್ಷೇತ್ರದ ಜೊತೆಯಲ್ಲಿ ಅಂಗೈನಲ್ಲಿ ಒರಟುತನ, ಚಿಕ್ಕ ಬೆರಳುಗಳು, ಗೋಲಾಕಾರದ ಹೆಬ್ಬೆರಳು ಇದ್ದರೆ ಅದು ಹಿಂಸೆಯನ್ನು ಸೂಚಿಸುತ್ತದೆ.

ಅಂಗೈ ಬಳುಕುವಂತೆ ಇರುವವರ ' ಜೊತೆಗೆ ಈ ಕ್ಷೇತ್ರವಿದ್ದರೆ ಶುಭವಾದುದಾಗಿರುತ್ತದೆ. ಈ ಜನಗಳು ಸಂಯಮಿಗಳು, ಶಾಂತರು ಮತ್ತು ಮಹತ್ವಾಕಾಂಕ್ಷಿಗಳಾಗಿರುತ್ತಾರೆ.

ಮಂಗಳದ ಮೇಲೆ ದ್ವೀಪದ ಚಿಹ್ನೆ ಇದ್ದರೆ ಅದು ರೋಗದ ಪರಿಚಯವನ್ನು ನೀಡುತ್ತದೆ.

ದೋಷ ಉಳ್ಳ ಶೀರ್ಷ ರೇಖೆ ಇದ್ದರೆ ವ್ಯಕ್ತಿ ಹುಚ್ಚನಾಗುತ್ತಾನೆ.

ಮಂಗಳದ ಎರಡೂ ಕ್ಷೇತ್ರಗಳಲ್ಲಿ ನಿಮ್ನ ಕ್ಷೇತ್ರ ಶಕ್ತಿಯುತವಾಗಿ ಮತ್ತು ಉಚ್ಚಮಂಗಳ ಕ್ಷೇತ್ರ ದುರ್ಬಲವಾಗಿದ್ದರೆ ಇದು ವ್ಯಕ್ತಿ ವಿಶ್ವಾಸಘಾತ ಮಾಡುವವನೆಂಬುದನ್ನು ಸೂಚಿಸುತ್ತದೆ.

---

# ಅಧ್ಯಾಯ 4

# ರೇಖೆಗಳು

ಕೈಯನ್ನು ಅಧ್ಯಯನ ಮಾಡುವುದಕ್ಕೆ ಮೊದಲು ರೇಖೆಗಳ ಸರಿಯಾದ ಪರಿಚಯವನ್ನು ತಿಳಿದುಕೊಳ್ಳುವುದು ಆವಶ್ಯಕ. ಪ್ರತ್ಯೇಕ ವ್ಯಕ್ತಿಯ ಕೈಯಲ್ಲಿ ಏಳು ಮುಖ್ಯ ರೇಖೆಗಳು ಇರುತ್ತವೆ ಮತ್ತು ಹನ್ನೆರಡು ಸಹಾಯಕ ರೇಖೆಗಳಿರುತ್ತವೆ.

**ಮುಖ್ಯ ರೇಖೆಗಳು**

1.ಜೀವನ ರೇಖೆ, 2.ಮಸ್ತಿಷ್ಕ ರೇಖೆ, 3.ಹೃದಯ ರೇಖೆ, 4.ಸೂರ್ಯ ರೇಖೆ, 5.ಭಾಗ್ಯ ರೇಖೆ, 6.ಆರೋಗ್ಯ ರೇಖೆ, 7.ವಿವಾಹ ರೇಖೆ

**ಸಾಧಾರಣ ರೇಖೆಗಳು**

1. ಗುರುವಲಯ, 2. ಮಂಗಳರೇಖೆ, 3. ಶನಿವಲಯ, 4. ರವಿ ವಲಯ, 5. ಶುಕ್ರ ವಲಯ, 6. ಚಂದ್ರ ರೇಖೆ, 7. ಪ್ರತಿಭಾ ಪ್ರಭಾವಕ ರೇಖೆ, 8. ಯಾತ್ರಾ ರೇಖೆ, 9. ಸಂತತಿ ರೇಖೆ, 10. ಮಣಿಕಟ್ಟು ರೇಖೆ, 11. ಆಕಸ್ಮಿಕ ರೇಖೆ, 12. ಉಚ್ಚ ಪದವಿಯ ರೇಖೆ

ರೇಖೆಗಳಲ್ಲಿ ಮುಖ್ಯವಾಗಿ ನಾಲ್ಕು ಪ್ರಕಾರಗಳಿರುತ್ತವೆ.

**1.ದಪ್ಪ ರೇಖೆ:** ಈ ರೇಖೆಗಳು ತಮ್ಮೊಳಗೇ ಆಳವಾದ, ಸ್ಪಷ್ಟವಾದ ಮತ್ತು ಸಾಮಾನ್ಯವಾಗಿ ಅಗಲವಾಗಿ ಇರುತ್ತವೆ. ಇಂತಹ ರೇಖೆಗಳು ಕತ್ತಲೆಯಲ್ಲಿಯೂ ಸ್ಪಷ್ಟವಾಗಿ ಗೋಚರಿಸುತ್ತವೆ.

**2. ತೆಳು ರೇಖೆ:** ಈ ರೇಖೆಗಳು ಪ್ರಾರಂಭದಿಂದ ಅಂತ್ಯದವರೆಗೆ ತೆಳುವಾಗಿ ಆದರೆ ಸ್ಪಷ್ಟವಾಗಿ ಇರುತ್ತವೆ. ಇಂತಹ ರೇಖೆಗಳು ಹೆಚ್ಚು ಪ್ರಭಾವಶಾಲಿಯಾದುದೆಂದು ಹೇಳಲಾಗುತ್ತದೆ.

**3. ಆಳವಾದ ರೇಖೆ:** ಈ ರೇಖೆಗಳು ಸಾಮಾನ್ಯ ತೆಳುವಾಗಿರುತ್ತವೆ ಜೊತೆಗೆ ಆಳವಾಗಿಯೂ ಇರುತ್ತವೆ. ಅಂಗೈನ ಮಾಂಸದೊಳಗೆ ಹೂತುಕೊಂಡಿರುವಂತೆ ಈ ರೇಖೆಗಳು ಗೋಚರಿಸುತ್ತವೆ.

**4. ಇಳಿಜಾರು ರೇಖೆ:** ಈ ರೇಖೆಗಳು ಪ್ರಾರಂಭದಲ್ಲಿ ದಪ್ಪವಾಗಿರುತ್ತವೆ. ಆದರೆ ಮುಂದುವರೆಯುತ್ತಾ ತೆಳುವಾಗಿರುತ್ತವೆ.

**ರೇಖೆಗಳ ಬಗ್ಗೆ ಹಲವು ವಿವರಗಳು:**

ರೇಖೆಗಳು ಸ್ಪಷ್ಟವಾದ ಸುಂದರವಾದ ಕೆಂಪು ಬಣ್ಣ ಹೊಂದಿರಬೇಕು ಹಾಗೂ ಶುದ್ಧವಾಗಿರಬೇಕು. ಇವುಗಳ ಮಾರ್ಗದಲ್ಲಿ ಯಾವುದೇ ರೀತಿಯ

ಚಿಹ್ನೆಯಾಗಲೀ ಅಥವಾ ಯಾವುದೇ ರೀತಿಯ ದ್ವೀಪವಾಗಲೀ ಇರಬಾರದು. ಜೊತೆಗೆ ರೇಖೆಗಳು ಕತ್ತರಿಸಿಯೂ ಸಹ ಹೋಗಿರಬಾರದು.

ಒಂದು ವೇಳೆ ಅಂಗೈನಲ್ಲಿ ರೇಖೆಗಳು ಸ್ವಲ್ಪ ಹಳದಿ ವರ್ಣವನ್ನು ತಾಳಿದ್ದರೆ ಇಂತಹ ರೇಖೆಗಳು ಆರೋಗ್ಯದಲ್ಲಿ ಕೊರತೆಯನ್ನು ಮತ್ತು ರಕ್ತದೂಷಿತೆಯನ್ನು ಸ್ಪಷ್ಟಗೊಳಿಸುತ್ತದೆ. ಇಂತಹ ರೇಖೆಗಳು ನಿರಾಶವಾದಿ ಭಾವನೆಯನ್ನು ಸಹ ಬಿಂಬಿಸುತ್ತವೆ.

ರಕ್ತವರ್ಣದ ರೇಖೆಗಳು ಮನುಷ್ಯನ ಪ್ರಸನ್ನತೆಯನ್ನು ಮತ್ತು ಸ್ವಸ್ಥ ಮನೋವೃತ್ತಿಯನ್ನು ಸ್ಪಷ್ಟಪಡಿಸುತ್ತವೆ.

ಅಂಗೈನಲ್ಲಿ ಕಪ್ಪು ರೇಖೆಗಳು ನಿರಾಶೆ ಮತ್ತು ನಿರ್ಬಲತೆಯನ್ನು ವ್ಯಕ್ತಪಡಿಸುತ್ತವೆ.

ಬಾಡಿರುವ ಅಥವಾ ನಿಶ್ಶಕ್ತ ರೇಖೆಗಳು ಭವಿಷ್ಯದಲ್ಲಿ ಬರುವ ತೊಂದರೆಗಳನ್ನು ಸೂಚಿಸುತ್ತವೆ.

ಒಂದು ವೇಳೆ ಯಾವುದಾದರೂ ರೇಖೆಯ ಜೊತೆ ಜೊತೆಯಲ್ಲೇ ಬೇರೆ ಇನ್ನಾವುದಾದರೂ ರೇಖೆ ಮುಂದುವರೆದರೆ ಆ ರೇಖೆಗೆ ವಿಶೇಷ ಬಲ ದೊರೆಯುತ್ತದೆ ಮತ್ತು ಆ ರೇಖೆಯ ಪ್ರಭಾವ ವಿಶೇಷವಾಗಿರುತ್ತದೆಂದು ಭಾವಿಸಬೇಕು.

ಒಂದು ವೇಳೆ ಯಾವುದಾದರೂ ಕತ್ತರಿಸಲ್ಪಟ್ಟ ಅಥವಾ ಹರಿದು ಹೋದ ರೇಖೆಯೊಂದಿಗೆ ಸಹಾಯಕ ರೇಖೆ ಹಾದು ಹೋಗಿರುವಂತೆ ಕಂಡರೆ ಆ ಭಗ್ನರೇಖೆಯ ವಿರುದ್ಧ ಫಲ ಉಂಟಾಗುತ್ತದೆ.

ಜೀವನ ರೇಖೆಯ ಹೊರತು ಒಂದು ವೇಳೆ ಬೇರೆ ಯಾವುದಾದರೂ ರೇಖೆ ತನ್ನ ಕೊನೆಯ ಅಂಚಿನಲ್ಲಿ ತಲುಪಿ ಎರಡು ಭಾಗಗಳಲ್ಲಿ ವಿಭಕ್ತಿಗೊಂಡರೆ ಅಂತಹ ರೇಖೆ ಶ್ರೇಷ್ಠವಾದುದು ಮತ್ತು ಪ್ರಭಾವ ಪೂರ್ಣವಾದುದೆಂದು ಹೇಳಲಾಗುತ್ತದೆ. ಆದರೆ ಒಂದು ವೇಳೆ ಹೃದಯರೇಖೆ ಅಂತ್ಯಕ್ಕೆ ತಲುಪಿ ಎರಡು ಭಾಗವಾಗಿ ವಿಭಕ್ತಗೊಂಡರೆ ಅಂತಹ ವ್ಯಕ್ತಿಯು ಸಾವು ಕಡಿಮೆ ವಯಸ್ಸಿನಲ್ಲೇ ಹೃದಯಾಘಾತದಿಂದ ಉಂಟಾಗುತ್ತದೆ.

ಒಂದು ವೇಳೆ ಯಾವುದಾದರೂ ರೇಖೆ ತನ್ನ ಅಂಚನ್ನು ತಲುಪಿ ಅನೇಕ ಭಾಗಗಳಾಗಿ ಹಂಚಲ್ಪಟ್ಟಿದ್ದರೆ ಅಂತಹ ರೇಖೆಯ ಫಲವನ್ನು ವಿರುದ್ಧವಾಗಿ ತಿಳಿದುಕೊಳ್ಳಬೇಕು.

ಒಂದು ವೇಳೆ ಯಾವುದಾದರೂ ರೇಖೆಯಿಂದ ಯಾವುದಾದರೂ

ಹೊಸ ರೇಖೆ ಹೊರಟು ಮೇಲ್ಭಾಗದ ಕಡೆಗೆ ಮುಂದುವರೆದರೆ ಅಂತಹ ರೇಖೆಯ ಫಲದಲ್ಲಿ ವೃದ್ಧಿ ಉಂಟಾಗುತ್ತದೆ.

ಒಂದು ವೇಳೆ ಯಾವುದಾದರೂ ರೇಖೆಯಿಂದ ಯಾವುದಾದರೂ ರೇಖೆ ಹೊರಟು ಕೆಳಗಡೆಗೆ ಬಾಗಿದ್ದರೆ ಅಥವಾ ಕೆಳಭಾಗದ ಕಡೆಗೆ ಗತಿಶೀಲವಾಗಿದ್ದರೆ ಅದರಿಂದ ವಿರುದ್ಧ ಫಲ ದೊರೆಯುತ್ತದೆ.

ಭೋಗರೇಖೆ ಅಥವಾ ಪ್ರಣಯ ರೇಖೆಯಿಂದ ಯಾವುದಾದರೂ ರೇಖೆ ಹೊರಟು ಮೇಲ್ಭಾಗದ ಕಡೆಗೆ ಮುಂದುವರೆದಿದ್ದರೆ ಸುಂದರ ಪತಿ ದೊರೆಯುವ ಯೋಗ ಉಂಟಾಗುತ್ತದೆ. ಆದರೆ ಇದೇ ರೇಖೆ ಕೆಳಭಾಗದ ಕಡೆಗೆ ಮುಂದುವರೆದಿದ್ದರೆ ಆ ವ್ಯಕ್ತಿಯ ಪತ್ನಿಯ ಮೃತ್ಯು ಶೀಘ್ರವೇ ಉಂಟಾಗುತ್ತದೆ.

ಒಂದು ವೇಳೆ ಮಸ್ತಿಷ್ಕ ರೇಖೆಯಿಂದ ಯಾವುದಾದರೂ ರೇಖೆ ಮೇಲ್ಭಾಗದ ಕಡೆಗೆ ಮುಂದುವರೆದಿದ್ದರೆ ಆ ವ್ಯಕ್ತಿ ವಿಶೇಷ ಕೀರ್ತಿಯನ್ನು ಪಡೆದುಕೊಳ್ಳುತ್ತಾನೆ.

ಸರಪಳಿಯಂತಹ ರೇಖೆ ಅಶುಭವಾದುದೆಂದು ನಂಬಲಾಗಿದೆ. ಒಂದು ವೇಳೆ ವಿವಾಹ ರೇಖೆ ಸರಪಳಿಯಂತೆ ಇದ್ದರೆ ಆ ವ್ಯಕ್ತಿಗೆ ಪ್ರೇಮದಲ್ಲಿ ಅಸಫಲತೆ ಉಂಟಾಗುತ್ತದೆ.

ಒಂದು ವೇಳೆ ಮಸ್ತಿಷ್ಕ ರೇಖೆ ಸರಪಳಿಯಂತಿದ್ದರೆ ಆ ವ್ಯಕ್ತಿ ಹುಚ್ಚನಾಗುತ್ತಾನೆ.

ಅಂಗೈನಲ್ಲಿ ಅಲೆಯಂತೆ ಇರುವ ರೇಖೆ ಶುಭಫಲವನ್ನು ನೀಡುವುದಿಲ್ಲ.

ಹರಿದ ಮುರಿದ ರೇಖೆಗಳು ಅಶುಭಫಲವನ್ನೇ ಕೊಡುತ್ತವೆ.

ಒಂದು ವೇಳೆ ಯಾವುದಾದರೂ ರೇಖೆ ಹೆಚ್ಚು ಸೂಕ್ಷ್ಮವಾಗಿ ಮತ್ತು ನಿರ್ಬಲವಾಗಿ ಇದ್ದರೆ ಅದರ ಪ್ರಭಾವ ಶೂನ್ಯವೆಂದು ಭಾವಿಸಬೇಕು.

ಒಂದು ವೇಳೆ ಯಾವುದಾದರೂ ರೇಖೆಯ ಮಾರ್ಗದಲ್ಲಿ ದ್ವೀಪ ಅಥವಾ ಯಾವುದಾದರೂ ಚಿಹ್ನೆ ಇದ್ದರೆ ಅದನ್ನು ಶುಭವೆಂದು ಪರಿಗಣಿಸಲಾಗುವುದಿಲ್ಲ.

ಒಂದು ವೇಳೆ ರೇಖೆಯ ಮಾರ್ಗದಲ್ಲಿ ವರ್ಗವಿದ್ದರೆ ಇದರಿಂದ ಆ ರೇಖೆಗೆ ಬಲ ದೊರೆಯುತ್ತದೆ ಮತ್ತು ಆ ರೇಖೆಗೆ ಶುಭ ಫಲ ಪ್ರಾಪ್ತವಾಗುತ್ತದೆ.

ಒಂದು ವೇಳೆ ರೇಖೆಯ ಮೇಲೆ ಬಿಂದು ಚಿಹ್ನೆ ಇದ್ದರೆ ಇದರಿಂದ

ಆ ರೇಖೆಗೆ ಸಂಬಂಧಿತ ಕಾರ್ಯಕ್ಕೆ ಹಾನಿ ಉಂಟಾಗುತ್ತದೆ.

ಒಂದು ವೇಳೆ ಯಾವುದಾದರೂ ರೇಖೆಯ ಮೇಲೆ ತ್ರಿಕೋನದ ಚಿಹ್ನೆ ಕಾಣಿಸಿದರೆ ಆ ರೇಖೆಗೆ ಸಂಬಂಧಿಸಿದ ಕಾರ್ಯಗಳು ಶೀಘ್ರವಾಗಿ ಆಗುತ್ತದೆಂದು ತಿಳಿಯಬೇಕು.

ರೇಖೆಗಳ ಮೇಲೆ ಸೊಟ್ಟ ಅಥವಾ ಡೊಂಕು ರೇಖೆಗಳಿದ್ದರೆ ಹಾನಿಕಾರಕವಾದುದೆಂದು ಭಾವಿಸಬೇಕು.

ಒಂದು ವೇಳೆ ರೇಖೆಗಳ ಮೇಲೆ ನಕ್ಷತ್ರಗಳಿದ್ದರೆ ಇದರಿಂದ ಕಾರ್ಯ ಶೀಘ್ರ ಸಫಲವಾಗಿ ಆಗುತ್ತದೆ.

ದಪ್ಪ ರೇಖೆಗಳು ವ್ಯಕ್ತಿಯ ದುರ್ಬಲತೆಯನ್ನು ಸ್ಪಷ್ಟಪಡಿಸುತ್ತವೆ.

ತೆಳುವಾದ ರೇಖೆಗಳು ವ್ಯಕ್ತಿಯ ಜೀವನದಲ್ಲಿ ಶ್ರೇಷ್ಠ ಫಲ ನೀಡಲು ಸಮರ್ಥವಾದುವವೆಂದು ನಂಬಲಾಗಿದೆ.

ಇಳಿಜಾರು ರೇಖೆಗಳು ವ್ಯಕ್ತಿಯು ಪರಿಶ್ರಮವನ್ನೇನೋ ಸ್ಪಷ್ಟಪಡಿಸುತ್ತವೆ ಆದರೆ ಅವುಗಳಿಂದ ಶ್ರೇಷ್ಠ ಫಲ ದೊರೆಯುವ ಯೋಗ ಉಂಟಾಗುವುದಿಲ್ಲ.

ಒಂದು ವೇಳೆ ಯಾವುದಾದರೂ ಆಳ ರೇಖೆ ಹಾದೂ ಹೋಗುತ್ತಾ ಮಧ್ಯದಲ್ಲೇ ನಿಂತುಹೋಗಿದ್ದರೆ ಅಥವಾ ಸಣ್ಣಗಾಗಿದ್ದರೆ ಆ ರೇಖೆ ದುರ್ಘಟನೆಯ ಪರಿಚಯ ನೀಡುತ್ತದೆ.

ರೇಖೆಗಳು ಎಲ್ಲಿಯಾದರೂ ತೆಳುವಾಗಿ ಮತ್ತು ಮತ್ತೆಲ್ಲಿಯಾದರೂ ದಪ್ಪವಾಗಿದ್ದರೆ ಅದು ಶುಭವಾದುದಲ್ಲ ಮತ್ತು ಇಂತಹ ವ್ಯಕ್ತಿ ಜೀವನದಲ್ಲಿ ಅನೇಕ ಬಾರಿ ಮೋಸ ಹೋಗುತ್ತಾನೆಂದು ತಿಳಿದುಕೊಳ್ಳಬೇಕು.

ರೇಖೆಗಳ ಬಗ್ಗೆ ಯಾವಾಗಲೂ ಬಹು ಎಚ್ಚರಿಕೆಯಿಂದ ವಿಚಾರ ಮಾಡಬೇಕು. ಒಂದು ವೇಳೆ ಯಾವುದಾದರೂ ಚಿಹ್ನೆ ಎರಡು ಕೈಗಳಲ್ಲೂ ಕಂಡುಬಂದರೆ ಮಾತ್ರ ಅದಕ್ಕೆ ಸಂಬಂಧಪಟ್ಟ ಭವಿಷ್ಯ ಕಥನ ಮಾಡಬೇಕು.

1. ಜೀವನ ರೇಖೆ (Life Line)







ಜೀವನ ರೇಖೆ ಪ್ರಾಯಃ ಎಲ್ಲರ ಕೈಗಳಲ್ಲೂ ಇರುತ್ತದೆ ಮತ್ತು ಇದು ಅತ್ಯಂತ ಮಹತ್ವಪೂರ್ಣ ರೇಖೆಯಾಗಿದೆ. ಇದನ್ನು ಪಿತೃರೇಖೆ ಅಥವಾ ಆಯಸ್ಸು ರೇಖೆ ಎಂದು ಸಹ ಕರೆಯುತ್ತಾರೆ.

ಶುಕ್ರ ಪರ್ವತದ ಆಧಾರದ ಮೇಲೆ ನಿಂತಿರುವ ಈ ರೇಖೆ ಸಂಪೂರ್ಣ ಶುಕ್ರ ಪರ್ವತವನ್ನು ತನ್ನ ಪರಿಧಿಯಲ್ಲಿ ಇಟ್ಟುಕೊಂಡಿದೆ. ಇದು ಯಾವಾಗಲೂ ತೋರು ಬೆರಳು ಮತ್ತು ಹೆಬ್ಬೆರಳಿನ ಮಧ್ಯ ಸ್ಥಾನದಿಂದ ಹೊರಟು ಶುಕ್ರನನ್ನು ಸುತ್ತುವರೆದುಕೊಂಡು ಪ್ರಾಯಃ ಮಣಿಕಟ್ಟಿನವರೆಗೆ ಹೋಗಿ ತಲುಪುತ್ತದೆ. ಪ್ರತಿಯೊಂದು ಕೈನಲ್ಲೂ ಇದರ ಪ್ರಕಾರ, ಉದ್ದ, ಅಗಲ ಸಮಾನವಾಗಿರುವುದಿಲ್ಲ. ಯಾವುದಾದರೂ ಕೈನಲ್ಲಿ ಅರ್ಧ ಗೋಲಾಕಾರವಾಗಿ ಮತ್ತ್ಯಾವುದಾದರೂ ಕೈನಲ್ಲಿ ಬಹಳ ನೇರವಾಗಿ ಸಾಗುತ್ತದೆ. ಇದು ಶುಕ್ರನಿಗೆ ನ್ಯೂನತೆಯನ್ನು ನೀಡಿ ತನ್ನ ಉದ್ದವನ್ನು ಮೊಟಕುಗೊಳಿಸುತ್ತದೆ.

ಆರೋಗ್ಯ, ದೀರ್ಘಾಯು ಜೀವನ ಮತ್ತು ನಿರ್ವಿಘ್ನ ಜೀವನ ಬದುಕಲು ಈ ರೇಖೆ ಸ್ಪಷ್ಟ, ಆಳ ಮತ್ತು ಚೆನ್ನಾಗಿ ವಿಸ್ತಾರಗೊಂಡಿರುವುದು ಅವಶ್ಯಕ. ಗುಲಾಬಿ, ತಿಳಿ ಕೆಂಪು ಬಣ್ಣ ಶುಭತ್ವ ಕೊಡುತ್ತದೆ. ಜೀವನ ರೇಖೆ ಆರೋಗ್ಯ, ಶಕ್ತಿ ಮತ್ತು ಮಾನಸಿಕ ರೂಪದ ಪರಿಚಯ ನೀಡುತ್ತದೆ. ವ್ಯಕ್ತಿಯ ಜೀವನ ಉನ್ನತಿಯ ಕಡೆಗೆ ಹೋಗುತ್ತಿರುವುದೋ ಇಲ್ಲಾ ಅವನತಿಯ ಕಡೆಗೆ ಸಾಗುತ್ತಿರುವುದೋ ಎಂದು ಈ ರೇಖೆ ಸ್ಪಷ್ಟಪಡಿಸುತ್ತದೆ. ಯಾವಾಗ ಉನ್ನತಿಯ ಅತ್ಯಂತ ಎತ್ತರಕ್ಕೆ ತಲುಪುತ್ತದೆ ಅಥವಾ ಅವನತಿಯ ಆಳ ಕಂದರದಲ್ಲಿ ಬೀಳುತ್ತದೆ ಎಂಬುದನ್ನೂ ಸಹ ಈ ರೇಖೆ ತಿಳಿಸುತ್ತದೆ.

ಗುರು ಪರ್ವತದಿಂದ ಎದ್ದಿರುವ ಜೀವನ ರೇಖೆ ವಿಚಿತ್ರ ಮಹತ್ವಾಕಾಂಕ್ಷೆ ನೀಡುತ್ತದೆ. ಅದರಲ್ಲಿ ಸಂಪತ್ತು, ಸಫಲತೆ, ಧನೋಪಾರ್ಜನೆಯ ಅದ್ಭುತ ಸಾಮರ್ಥ್ಯ ಇದೆ. ದೇಶ ಪರಿಸ್ಥಿತಿ ಮತ್ತು ಸಮಯದಿಂದ ಲಾಭ ಪಡೆದುಕೊಳ್ಳುವುದು ಇದಕ್ಕೆ ತಿಳಿದಿದೆ.

ಕಡಿಮೆ ಶುಕ್ರ ಪರ್ವತವನ್ನು ಸುತ್ತಿಕೊಂಡಿದ್ದರೆ ಅದು ಜೀವನದ ಬಗ್ಗೆ ಉದಾಸೀನತೆ, ಅನಾಸಕ್ತ ಭೋಗೇಚ್ಛೆ, ಕಾಮದ ನ್ಯೂನತೆ, ಕಡಿಮೆ ಆಕರ್ಷಣೆ ವಿರುದ್ಧ ಲಿಂಗದ ಪ್ರತಿ ತೋರುತ್ತದೆ.

ಅಗಲವಾದ ಮತ್ತು ಆಳವಿಲ್ಲದ ಜೀವನ ರೇಖೆ ಶಕ್ತಿಯ ಅಭಾವವನ್ನು ಪ್ರಕಟಿಸುತ್ತದೆ. ಇಂತಹ ವ್ಯಕ್ತಿಗಳು ದುರ್ಬಲರು, ನಿಶ್ಶಕ್ತರು,

ಆವೇಶದ ಅಭಾವವುಳ್ಳವರು, ಖಾಯಿಲೆಗಳಿಂದ ನರಳುವವರು, ಪರಾಶ್ರಿತರು, ಮಿತ್ರರ ಮತ್ತು ಸಹ ಯೋಗಿಗಳ ಸಹಾಯತೆಯನ್ನು ಬಯಸುವವರೂ ಆಗಿರುತ್ತಾರೆ.

ಚಿಕ್ಕದಾದ ಜೀವನ ರೇಖೆ ಅಲ್ಪಾಯುವಿನ ಮೇಲೆ, ಮಸ್ತಿಷ್ಕ ರೇಖೆಯ ಪ್ರಬಲತೆ ಮತ್ತು ಹೆಬ್ಬೆರಳಿನ ಪರ್ವದ ಭದ್ರತೆ ಮುಂತಾದ ದೋಷಗಳಿಂದ ವ್ಯಕ್ತಿಯನ್ನು ಮುಕ್ತಗೊಳಿಸುತ್ತದೆ.

ಒಂದು ವೇಳೆ ಜೀವನ ರೇಖೆಯ ಕೊನೆ ಚಿಕ್ಕ ಚಿಕ್ಕ ಸಮಾನಾಂತರ ರೇಖೆಗಳಲ್ಲಿ ಉಂಟಾಗಿದ್ದರೆ ಆಕಸ್ಮಾತ್ ಜೀವನದ ಅಂತ್ಯ ಮತ್ತು ಎರಡೂ ಕೈಗಳಲ್ಲಿ ಒಂದೊಂದು ಸ್ಥಾನದಿಂದ ಕತ್ತರಿಸಿಹೋಗಿರುವ ಜೀವನ ರೇಖೆ ಮೃತ್ಯುವಿನ ಅಪಾಯವನ್ನು ಉತ್ಪನ್ನ ಮಾಡುತ್ತದೆ. ಒಂದು ಸ್ಥಾನದಲ್ಲಿ ಕತ್ತರಿಸಿಹೋಗಿದ್ದರೆ ಭಯಂಕರ ರೋಗವೆಂದು ಮತ್ತು ಅನೇಕ ಸ್ಥಾನದಲ್ಲಿ ಕತ್ತರಿಸಿಹೋಗಿದ್ದರೆ ನಿರಂತರ ರೋಗವೆಂದು ಇದು ತಿಳಿಸುತ್ತದೆ.

ಅಂಗೈನಲ್ಲಿ ಒಂದು ದೊಡ್ಡ ವೃತ್ತವನ್ನು ಮಾಡುತ್ತಾ ಚಂದ್ರ ಪರ್ವತವನ್ನು ಸ್ಪರ್ಶಿಸಿದರೆ ವ್ಯಕ್ತಿ ಶತಾಯುಶಿ ಎಂದು ತಿಳಿಸುತ್ತದೆ. ಗುರು ಪರ್ವತದ ಕೆಳಗೆ ಬಂಧನ ಹೀನತೆಯಾಗಿದ್ದರೆ ಪ್ರಾರಂಭಿಕ ಜೀವನದಲ್ಲಿ ಬಾಲಾರಿಷ್ಟ ಮತ್ತು ರೋಗವಿರುತ್ತದೆಂದು ತಿಳಿಸುತ್ತದೆ. ಸರಪಳಿಯುಕ್ತ ರೇಖೆ ಶರೀರದ ಕೋಮಲತೆಯ ಪರಿಚಯ ನೀಡುತ್ತದೆ. ತೆಳುರೇಖೆಯ ಮೇಲೆ ಕಲೆ ಇದ್ದರೆ ಆಕಸ್ಮಾತ್ ಮೃತ್ಯು ನೀಡುತ್ತದೆ. ಕೆಲವು ಕಡೆ ದಪ್ಪವಾಗಿಯೂ ಮತ್ತೆ ಕೆಲವು ಕಡೆ ತೆಳುವಾಗಿಯೂ ರೇಖೆ ಇದ್ದರೆ ಅದು ಅಸ್ಥಿರತೆ ಮತ್ತು ಚಂಚಲತೆಯನ್ನು ಸ್ಪಷ್ಟಪಡಿಸುತ್ತದೆ. ದಪ್ಪನಾಗಿರುವ ಮತ್ತು ಕೆಂಪಾಗಿರುವ ರೇಖೆ ಹಿಂಸೆ ಮತ್ತು ಮಾನಸಿಕ ಬರ್ಬರತೆಯನ್ನು ಸೂಚಿಸುತ್ತದೆ. ಕೆಲವು ಕಡೆ ದಪ್ಪ, ಕೆಲವು ಕಡೆ ತೆಳು ಮತ್ತು ಕೆಂಪು ಬಣ್ಣದ ರೇಖೆ ರೋಗ ಮತ್ತು ಅಸೂಯೆಯನ್ನು ನೀಡುತ್ತದೆ.

ಜೀವನ ರೇಖೆಯಿಂದ ಹೊರಟಿರುವ ಕೆಲವು ರೇಖೆಗಳು ಶನಿ ಕ್ಷೇತ್ರದ ಕೇಂದ್ರದವರೆಗೆ ಅಡಚಣೆಯಿಲ್ಲದೆ ತಲುಪಿದ್ದರೆ ಇಚ್ಛಾಪೂರ್ತಿ ಯಾಗುವುದೆಂದು ತಿಳಿಸುತ್ತದೆ ಮತ್ತು ಇದರ ಜೊತೆಯಲ್ಲೇ ದೃಢ ಸೂರ್ಯನಿದ್ದರೆ ಈ ಗುಣವನ್ನು ಮತ್ತಷ್ಟು ವೃದ್ಧಿಗೊಳಿಸುತ್ತದೆ.

ಜೀವನ ರೇಖೆಯನ್ನು ಕತ್ತರಿಸುವ ಅಡ್ಡ ರೇಖೆಗಳು ಭಿನ್ನ ಭಿನ್ನ ರೋಗವನ್ನು ನೀಡುತ್ತವೆ. ಮಂಗಳದ ಮೇಲೆ ತಲುಪಿರುವ ಅಡ್ಡರೇಖೆ ರಕ್ತಾಲಪ್ತತೆಯನ್ನು ಕೊಡುತ್ತದೆ. ಸೂರ್ಯನ ಮೇಲೆ ತಲುಪಿರುವ

ಅಡ್ಡರೇಖೆ ಹೃದಯ ರೋಗವನ್ನು ನೀಡುತ್ತದೆ ಮತ್ತು ಚಂದ್ರಕ್ಷೇತ್ರದ ಮೇಲೆ ತಲುಪಿರುವ ಅಡ್ಡರೇಖೆ ಕಫಾ ಪ್ರಧಾನ ರೋಗ ನೀಡುತ್ತದೆ.

ಜೀವನ ರೇಖೆಯನ್ನು ಕತ್ತರಿಸುತ್ತಾ ಯಾವುದಾದರೂ ರೇಖೆ ಚಂದ್ರನ ಮೇಲೆ ತಲುಪಿದರೆ ಮತ್ತು ಚಂದ್ರ ಕ್ಷೇತ್ರ ಅದುಮಲ್ಪಟ್ಟಿದ್ದರೆ ಅದು ದುರ್ಬಲತೆಯನ್ನು ಪ್ರಕಟಗೊಳಿಸುತ್ತದೆ. ಚಂದ್ರ ಕ್ಷೇತ್ರ ನಿಮ್ನ ಮತ್ತು ಸಮತಲವಾಗಿದ್ದರೆ ಅಥವಾ ಚಂದ್ರ ಕ್ಷೇತ್ರ ಯಾವುದಾದರೂ ವಿಶೇಷ ದೋಷದಿಂದ ಕೂಡಿದ್ದರೆ ಯಾವುದಾದರೂ ರೋಗವನ್ನು ಖಂಡಿತವಾಗಿ ನೀಡುತ್ತದೆ. ಈ ರೋಗ ಮಸ್ತಿಷ್ಕಕ್ಕೆ ಸಂಬಂಧಿಸಿದುದು, ಕಫ ಜನಿತವಾದುದು, ಹೊಟ್ಟೆಗೆ ಸಂಬಂಧಿಸಿದ ಖಾಯಿಲೆಯಿಂದ ಕೂಡಿದುದು ಅಥವಾ ಆಂತ್ರಶೋಧ ಸಂಬಂಧಪಟ್ಟುದಾಗಿರುತ್ತದೆ.

ಒಂದು ವೇಳೆ ಜೀವನ ರೇಖೆ ಮತ್ತು ಆರೋಗ್ಯ ರೇಖೆ ಪರಸ್ಪರ ಕತ್ತರಿಸಿಕೊಂಡಿದ್ದರೆ ಗಂಭೀರ ರೋಗದ ಪೂರ್ಣ ಸಂದೇಹವಿರುತ್ತದೆ. ಯಕೃತ್ ವಿಕಾರ ಉಂಟಾಗುತ್ತದೆ. ಪಾಂಡುರೋಗ ಇಂಥವರನ್ನು ಆವರಿಸಿಕೊಳ್ಳುತ್ತದೆ.

ಶುಕ್ರನ ಕಡೆಗೆ ಹೊರಟಿರುವ ರೇಖೆ ನಿರ್ಬಲ ಜೀವನ ರೇಖೆಯನ್ನು ಕತ್ತರಿಸಿದರೆ ಸ್ತ್ರೀ ಸಂಬಂಧದ ಕಷ್ಟ ಉಂಟಾಗುತ್ತದೆ.

ಶೀರ್ಷ ರೇಖೆ ಮತ್ತು ಜೀವನ ರೇಖೆ ಪರಸ್ಪರ ಹೆಚ್ಚು ದೂರದಲ್ಲಿದ್ದರೆ ಮಾನಸಿಕ ನಿರ್ಬಲತೆಯನ್ನು ಪರಿಚಯಿಸುತ್ತದೆ. ಸ್ವತಃ ನಿರ್ಮಿಸಿದ ಯೋಜನೆಯ ಮೇಲೆಯೂ ನಂಬಿಕೆ ಉಂಟಾಗುವುದಿಲ್ಲ. ಅನುಮಾನ ಮತ್ತು ಅಸೂಯೆ ಮನೆ ಮಾಡಿಕೊಳ್ಳುವುದರಿಂದ ಸಫಲತೆ ಪಡೆಯಲಾಗುವುದಿಲ್ಲ. ಆದರೆ ಶೀರ್ಷ ರೇಖೆ ಮತ್ತು ಜೀವನ ರೇಖೆ ಪರಸ್ಪರ ಹತ್ತಿರದಲ್ಲಿದ್ದರೆ ಸಾಹಸ, ಧೈರ್ಯ, ಹಠ, ದೃಢ ನಿಶ್ಚಯ ಮತ್ತು ಕಾರ್ಯದಲ್ಲಿ ಸಫಲತೆ ಇರುತ್ತದೆ.

ಜೀವನ ರೇಖೆ ಮತ್ತು ಶೀರ್ಷ ರೇಖೆಯ ಮಧ್ಯೆ ಅಡ್ಡರೇಖೆಗಳು ಈ ಪ್ರಕಾರವಾಗಿದ್ದರೆ ಅಂದರೆ ಪರಸ್ಪರ ಕತ್ತರಿಸಿದರೆ ಪರಸ್ಪರ ವೈಮನಸ್ಯ ಭಾವ ಹೆಚ್ಚಾಗುತ್ತದೆ. ಪ್ರಾಯಃ ಇಂತಹ ವ್ಯಕ್ತಿ ಯುದ್ಧ ಜಗಳಗಳಲ್ಲಿ ಸಿಕ್ಕಿಕೊಂಡಿರುತ್ತಾನೆ. ಮನೆಯಲ್ಲಿ ಯಾವಾಗಲೂ ಕಲಹದ ವಾತಾವರಣವಿರುತ್ತದೆ.

ಜೀವನ ರೇಖೆ ಮಣಿಕಟ್ಟಿನ ಕಡೆಗೆ ಹೋಗುತ್ತಾ ಅಂಗೈನಿಂದ ಹೊರ ಹೊರಟುಹೋಗಿದ್ದರೆ ಅದು ಧನದ ನಾಶ ಉಂಟು ಮಾಡುತ್ತದೆ. ಇಂತಹ

ವ್ಯಕ್ತಿ ಯಾವ ಆಯಸ್ಸಿನ ಮೇಲೆ ಶಾಖೆಗಳು ಹೊರಬರುತ್ತವೋ ಆ ಆಯುಸ್ಸಿನಲ್ಲಿ ತನ್ನ ಹಳ್ಳಿಯ ಸಂಪತ್ತನ್ನೂ ಸಹ ಕಳೆದುಕೊಳ್ಳುತ್ತಾನೆ.

ಮಸ್ತಿಷ್ಕ ರೇಖೆಯು ಜೊತೆ ಹತ್ತಿರ ಸೇರಿಕೊಂಡಿರುವ ಜೀವನ ರೇಖೆ ವಿವೇಕ ಮತ್ತು ದೂರದರ್ಶಿತನ ತುಂಬಿರುವ ಜೀವನವನ್ನು ಸೂಚಿಸುತ್ತದೆ. ಆದರೆ ಸ್ವತಃ ಪ್ರಭಾವಿತಗೊಳಿಸುವ ಪ್ರತಿಯೊಂದು ಮಾತಿನ ಪ್ರತಿ ಸಂವೇದನೆ ಇರುತ್ತದೆ.

ಜೀವನ, ಹೃದಯ ಮತ್ತು ಮಸ್ತಿಷ್ಕ ರೇಖೆಗಳು ಉದಯ ಸ್ಥಳದ ಮೇಲೆ ಸೇರಿಕೊಂಡಿದ್ದರೆ ಅದು ದುರ್ಭಾಗ್ಯ ಮತ್ತು ಉಗ್ರ ಮೃತ್ಯುವಿನ ಅಶುಭ ಲಕ್ಷಣಗಳಾಗಿರುತ್ತವೆ.

ಹೆಬ್ಬೆಟ್ಟಿನ ಹತ್ತಿರ ವಿಶೇಷವಾಗಿ ಒಂದು ವೇಳೆ ಸ್ವಾಸ್ಥ್ಯ ಮತ್ತು ಮಸ್ತಿಷ್ಕ ರೇಖೆಗಳು ನಕ್ಷತ್ರದ ಮೂಲಕ ಸೇರಿಕೊಂಡಿದ್ದರೆ ಸಂತಾನ ಆಗುವುದಿಲ್ಲ.

ಮಸ್ತಿಷ್ಕ ರೇಖೆಯು ಜೊತೆ ಸೇರಿಕೊಂಡಿರುವ, ಜೀವನ ರೇಖೆಯಿಂದ ಆಗದೆ ವಿಶೇಷವಾಗಿ ಯಾವಾಗ ಮಧ್ಯದ ಸ್ಥಳ ಚಿಕ್ಕ ಚಿಕ್ಕ ರೇಖೆಗಳ ಜಾಲದಿಂದ ತುಂಬಿಕೊಂಡಿದ್ದರೆ ಹಾಗೂ ಜೀವನ ಮತ್ತು ಮಸ್ತಿಷ್ಕ ರೇಖೆಗಳು ಕಂದು ಬಣ್ಣ ಮತ್ತು ಕೆಂಪು ಬಣ್ಣದ್ದಾಗಿದ್ದರೆ ಅದು ಮೂರ್ಖತೆ ಮತ್ತು ಹುಚ್ಚುತನವನ್ನು ತೋರಿಸುತ್ತದೆ.

ಜೀವನ ರೇಖೆ ಅಲೆಯ ರೂಪದಲ್ಲಿದ್ದರೆ ಜೀವನ ಸಂಕಟಗಳಿಂದ ಮತ್ತು ರೋಗಗಳಿಂದ ಸಿಲುಕಿಕೊಂಡಿರುವುದಾಗಿರುತ್ತದೆ ಮತ್ತು ಇಡೀ ಜೀವನ ಅತ್ತಿತ್ತ ಅಲೆದಾಡುವಂತಹದಾಗಿರುತ್ತದೆ. ಜೀವನವಿಡೀ ರೋಗಗಳೊಡನೆ ಸಂಘರ್ಷ ನಡೆಸಬೇಕಾಗುತ್ತದೆ.

ಕಪ್ಪು ಜೀವನ ರೇಖೆಯಿಂದ ಕೂಡಿದ ದಪ್ಪ ಶರೀರದ ವ್ಯಕ್ತಿ ಆರೋಗ್ಯವಂತನಾಗಿರುತ್ತಾನೆ. ಲದರೆ ಮುಖಂಡನಾದರೂ ಸಹ ಬಲಹೀನನಾಗಿರುತ್ತಾನೆ.

ಜೀವನ ರೇಖೆಯು ಹರಿದ ಮುರಿದ ಅಂತ್ಯ ಭಾಗ್ಯರೇಖೆಯೊಂದಿಗೆ ಸೇರಿಕೊಂಡಿದ್ದರೆ ಜೀವನದ ಬಗ್ಗೆ ಇರುವ ದೊಡ್ಡ ಅಪಾಯ ಅದೃಷ್ಟದಿಂದ ತೊಲಗಿ ಹೋಗುತ್ತದೆ.

ಕಡಿಮೆ ಆಳವಾದ ಅಥವಾ ತೆಳು ರೇಖೆಯೂ ಸಹ ಪ್ರಾಣಶಕ್ತಿಯ ನ್ಯೂನತೆಯನ್ನು ಪ್ರದರ್ಶಿಸುತ್ತದೆ. ಇದರ ಕಾರಣದಿಂದ ಮನುಷ್ಯನ ಆರೋಗ್ಯ ನಿರ್ಬಲವಾಗಿರುತ್ತದೆ ಮತ್ತು ಭಿನ್ನ ಭಿನ್ನ ರೋಗಗಳು

ಆವರಿಸಿಕೊಂಡಿರುತ್ತವೆ.

ಜೀವನ ರೇಖೆ ಎಲ್ಲಿ ಕತ್ತರಿಸಲ್ಪಟ್ಟಿರುತ್ತದೋ ಅಲ್ಲಿಯೇ ರೋಗ ಉಂಟಾಗುವ ಸಂಭವವಿರುತ್ತದೆ. ಒಂದು ವೇಳೆ ಈ ದೂರ ಹೆಚ್ಚಾಗಿದ್ದರೆ ರೋಗಾವಧಿ ದೀರ್ಘವಾಗಿರುತ್ತದೆ. ಆದರೆ ಕತ್ತರಿಸಿ ಹೋಗಿರುವ ಸ್ಥಾನದ ಜೊತೆ ಒಂದು ಅಥವಾ ಹೆಚ್ಚು ಚಿಕ್ಕ ರೇಖೆಗಳಿದ್ದರೆ ಅವು ಪ್ರಾಣಶಕ್ತಿಯನ್ನು ಶಕ್ತಿಯುತವಾಗಿ ಮಾಡಲು ಸಹಾಯಕವಾಗುತ್ತವೆ. ಅವುಗಳ ಪ್ರಭಾವದಿಂದ ಆರೋಗ್ಯವಂತರಾಗಿರಬಹುದು.

ಕತ್ತರಿಸಿ ಹೋಗಿರುವ ಅಥವಾ ಸದೋಷ ಜೀವನ ರೇಖೆಯು ಜೊತೆಯಲ್ಲಿ ಬೆರಳುಗಳ ಅಂಚುಗಳು ಅಗಲವಾಗಿದ್ದರೆ ನಿಷ್ಕ್ರಿಯತೆಯನ್ನು ಪ್ರಕಟಿಸುತ್ತದೆ. ಕಾರ್ಯ ಶಕ್ತಿ ಕ್ಷೀಣಿಸುತ್ತದೆ. ಇಂತಹ ವ್ಯಕ್ತಿ ಆರೋಗ್ಯವಂತನಾಗಿದ್ದರೂ ಸಹ ಕೆಲಸದಲ್ಲಿ ಅಧಿಕ ಸುಸ್ತನ್ನು ಅನುಭವಿಸುತ್ತಾನೆ.

ಒಳ್ಳೆಯ ಕೈನ ಉದಯ ಸ್ಥಾನದ ಮೇಲೆ ಬಹಳ ಸಾಧಾರಣ ಮತ್ತು ಸ್ಪಷ್ಟ ಶಾಖೆಯ ಸಮೂಹ ಆತ್ಮಿಕ ನ್ಯಾಯ ಮತ್ತು ನಿಷ್ಠೆಯ ಕಾರಕವಾಗಿರುತ್ತದೆ. ಆದರೆ ನಿಕೃಷ್ಟ ಕೈನ ಉದಯಸ್ಥಾನದ ಮೇಲೆ ಇರುವ ಶಾಖೆಗಳು ದರ್ಪ, ಅನಿಶ್ಚಯತೆ ಮತ್ತು ವಿಲಕ್ಷಣ ಕಲ್ಪನೆಗೆ ಕಾರಣವಾಗುತ್ತವೆ.

ಜೀವನ ರೇಖೆ ಮುಂದುವರಿದಂತೆ ಒಂದು ಸ್ಥಾನದಲ್ಲಿ ನಿಂತು ಹೋದರೆ ಮೃತ್ಯುವೆಂದು ಭಾವಿಸಬೇಕು. ಜೀವನ ರೇಖೆಯ ಮೇಲೆ ಹೊಗೆಬಣ್ಣದ ಮತ್ತು ಬಿಳಿಯ ಬಣ್ಣದ ಕಲೆ ಸ್ನಾಯು ದುರ್ಬಲತೆಗೆ ಕಾರಣವಾಗುತ್ತದೆ.

ಯಾವಾಗ ಜೀವನ ರೇಖೆಯು ಕೊನೆ ಸರ್ಪಚಿಹ್ನೆಯ ಆಕಾರದಲ್ಲಿದ್ದರೆ ಮತ್ತು ಅದರ ಒಂದು ಶಾಖೆ ಭಾಗ್ಯರೇಖೆಯೊಂದಿಗೆ ಸೇರಿದ್ದರೆ ಅಂತಹ ವ್ಯಕ್ತಿ ಸೋಮಾರಿಯೂ, ನಿಸ್ತೇಜನೂ ಮತ್ತು ನಿರುತ್ಸಾಹಿಯೂ ಆಗಿರುತ್ತಾನೆ. ಇಂತಹ ಪರಿಸ್ಥಿತಿಯಲ್ಲಿ ಭಾಗ್ಯರೇಖೆ ಮುಂದಕ್ಕೆ ತಿರುಗಿಕೊಂಡು ಸಾಗಿದರೆ ಭಾಗ್ಯೋದಯವಾಗುತ್ತದೆಂದು ಭಾವಿಸಬೇಕು.

ಜೀವನ ರೇಖೆಯಿಂದ ತೋರು ಬೆರಳಿನ ಕಡೆಗೆ ಹೋಗುವ ರೇಖೆಗಳು ವಿದೇಶಾಟನೆಯ ಸಂಕೇತವಾಗಿದೆ. ಜೀವನರೇಖೆಯೊಂದಿಗೆ ಸಮಾನಾಂತರವಾಗಿ ನಡೆಯುವ ರೇಖೆಗಳು ಪ್ರೀತಿಯ ಹಸಿವಿನ ಸಂಕೇತವಾಗಿದೆ.

ಜೀವನ ರೇಖೆಯ ಉಪಶಾಖೆಗಳು ಒಂದು ವೇಳೆ ಬೆರಳುಗಳ ಕಡೆಗೆ ಹೋಗುತ್ತಿದ್ದರೆ ಅವು ಎಷ್ಟು ಶಾಖೆಗಳಿರುತ್ತವೋ ಅಷ್ಟೇ ಪಿತ್ರಾರ್ಜಿತ ಸಂಪತ್ತಿನ ಭಾಗೀದಾರರಾಗುತ್ತಾರೆ.

ಹೆಬ್ಬೆರಳಿನ ಕಡೆಗೆ ಹೋಗುವ ಜೀವನ ರೇಖೆಯ ಉಪಶಾಖೆಗಳು ಮಿತ್ರತ್ವ ಮತ್ತು ಭ್ರಾತೃಪ್ರೇಮವನ್ನು ಪರಿಚಯಿಸುತ್ತದೆ.

ಜೀವನ ರೇಖೆ ಮತ್ತು ಹೆಬ್ಬೆರಳಿನ ಮಧ್ಯೆ ಯಾವುದಾದರೂ ಚತುಷ್ಕೋನ, ವರ್ಗ ಇದ್ದರೆ ವಿಷ ಕೀಟಗಳ ಭಯ ಇರುವುದನ್ನು ಪ್ರದರ್ಶಿಸುತ್ತದೆ. ಸರ್ಪ ಕಚ್ಚುವ ಸಂಭವವಿರುತ್ತದೆ.

ಕೈನ ಅಂಚಿನಿಂದ ಪ್ರಾರಂಭ, ಉದಯ ಸ್ಥಳದ ಮೇಲೆ ಶಾಖೆಗಳ ಸಮೂಹವಿದ್ದರೆ ಅಸ್ಥಿರತೆಯನ್ನು ಪ್ರಕಟಿಸುತ್ತದೆ.

ಜೀವನ ರೇಖೆಯ ಸರಿಯಾಗಿ ಮಧ್ಯೆ ಇರುವ ಶಾಖೆಗಳ ಸಮೂಹ ಕ್ಷಯರೋಗವನ್ನು ಸೂಚಿಸುತ್ತದೆ. ಮಧ್ಯದಲ್ಲಿ ಶಾಖೆಗಳ ಸಮೂಹ ಒಂದು ಶಾಖೆ ಚಂದ್ರ ಪರ್ವತದ ಆಧಾರದ ಕಡೆಗಿದ್ದರೆ ಅದು ಅಶಾಂತಿ, ಯಾತ್ರೆ ದೃಢಕೈನಲ್ಲಿ ಸೂಚಿಸುತ್ತದೆ. ಸಡಿಲವಾದ ಕೈನಲ್ಲಿ ಇಳಿಯುವ ಮಸ್ತಿಷ್ಕ ರೇಖೆಯ ಜೊತೆಯಲ್ಲಿ ಅಶಾಂತಿಯ ಸಂತುಷ್ಟಿ ವ್ಯಸನಗಳಿಂದ ಉಂಟು ಮಾಡುತ್ತದೆ. ಕೊನೆಯ ಅಂಚಿನಲ್ಲಿ ಶಾಖೆಗಳ ಸಮೂಹವಿದ್ದರೆ ವೃದ್ಧಾವಸ್ಥೆ ಕೆಡುತ್ತದೆ.

ರೇಖೆಯ ಮೇಲೆ ಕಪ್ಪು ಕಲೆ ಇದ್ದರೆ ಯಾವುದೋ ರೋಗದ ಕಾರಣದಿಂದಾಗಿ. ಸ್ನಾಯುವಿಗೆ ನಿರ್ಬಲತೆ ಉಂಟಾಗುತ್ತದೆ. ಕೆಳಬಾಗದ ಕಡೆಗೆ ಹೋಗುವ ರೇಖೆಗಳು ಸ್ವಾಸ್ಥ್ಯ ಮತ್ತು ಧನಹಾನಿ ನೀಡುತ್ತದೆ.

ಜೀವನ ರೇಖೆಯ ಮೇಲೆ ಅಡ್ಡ ವಕ್ರ ರೇಖೆಗಳು ಕಾಣಿಸಿಕೊಂಡರೆ ಆ ವ್ಯಕ್ತಿಯ ಆರೋಗ್ಯ ನಿರ್ಬಲವಾಗುತ್ತದೆ. ಒಂದು ವೇಳೆ ಹೃದಯರೇಖೆ ಮತ್ತು ಜೀವನ ರೇಖೆಯ ಮಧ್ಯ ತ್ರಿಭುಜ ಉಂಟಾದರೆ ಅಂತಹ ವ್ಯಕ್ತಿ ದಮ್ಮು ರೋಗಿಯಾಗುತ್ತಾನೆ.

ಜೀವನ ರೇಖೆಯ ಮೇಲೆ ಕಪ್ಪು ಕಪ್ಪು ಕಲೆ ರೋಗ ಸೂಚಕವಾಗಿದೆ ಮತ್ತು ಆಳವಾದ ದಟ್ಟ ಕಲೆ ಹತ್ಯೆ ಅಥವಾ ಅಕಸ್ಮಾತ್ ಮೃತ್ಯುವಾಗುವುದನ್ನು ಸೂಚಿಸುತ್ತದೆ. ಒಣಗಿರುವ ಚರ್ಮ ಮತ್ತು ಚಪ್ಪಟೆಯಾದ ಮತ್ತು ಕತ್ತರಿಸಿರುವ ಹರಿದಿರುವ ಚಂದ್ರ ಪರ್ವತದ ಜೊತೆ ಸ್ನಾಯು ರೋಗ ಸೂಚಕವಾಗಿದೆ.

ರೇಖೆಯ ಕೊನೆಯಲ್ಲಿ ಕ್ರಾಸ್ ಚಿಹ್ನೆ ಇದ್ದರೆ ವೃದ್ಧಾಪ್ಯ ಕೆಡುತ್ತದೆ.

ಯೋಗ್ಯ, ಚರಿತ್ರವಾನನ ಮೇಲೆ ರೋಗಿಯು ಮೇಲೆ ರೇಖೆಯ ಮೂಲಕ ಕತ್ತರಿಸಲ್ಪಟ್ಟ ಕ್ರಾಸ್ ಮಾನಸಿಕ ದುರ್ಬಲತೆ ನೀಡುತ್ತದೆ ಮತ್ತು ಮೃತ್ಯು ಸಮಾನ ಕಷ್ಟ ಉಂಟಾಗುತ್ತವೆ.

ರೇಖೆಯ ಮೇಲೆ ದ್ವೀಪ ಇದ್ದರೆ, ಆರೋಗ್ಯರೇಖೆ ಅಲೆಅಲೆಯಾಗಿದ್ದರೆ ಪಿತ್ತದೋಷ ಮತ್ತು ಅಜೀರ್ಣ ರೋಗ ಉಂಟಾಗುತ್ತದೆ.

ಜೀವನ ರೇಖೆಯು ಮೇಲೆ ವೃತ್ತ ಮತ್ತು ಕಲೆ ಇದ್ದರೆ ಅದು ಕುರುಡತನವನ್ನು ನೀಡುತ್ತದೆ ಅಥವಾ ಹತ್ಯೆಯನ್ನು ಕೊಡುತ್ತದೆ. ಜೀವನ ರೇಖೆಯಿಂದ ಯಾವುದಾದರೂ ಶಾಖೆ ಬುಧ ಪರ್ವತದವರೆಗೆ ಹೋದರೆ ಅಂತಹ ವ್ಯಕ್ತಿ ಅಂತರರಾಷ್ಟ್ರೀಯ ವ್ಯಾಪಾರ ಮಾಡುತ್ತಾನೆ.

ಶುಕ್ರ ಮತ್ತು ರೇಖೆಯ ಮೇಲೆ ಕ್ರಾಸ್ ಅಥವಾ ನಕ್ಷತ್ರ ದುಃಖಮಯ ಜೀವನವನ್ನು ನೀಡುತ್ತದೆ.

## 2. ಮಸ್ತಿಷ್ಕ ರೇಖೆ (ಶೀರ್ಷ ರೇಖೆ) (Head Line)

ಮಸ್ತಿಷ್ಕ ರೇಖೆಯಿಂದ ವ್ಯಕ್ತಿಯು ಬುದ್ಧಿ ಮತ್ತು ಅವನ ಮಸ್ತಿಷ್ಕ ಹಾಗೂ ಅದರ ರಕ್ತ ಚಲನೆಯ ಸ್ವಸ್ಥತೆಯ ಪತ್ತೆಯಾಗುತ್ತದೆ.



ಮಸ್ತಿಷ್ಕ ರೇಖೆ ಸರಿಯಾಗಿ ಹೃದಯ ರೇಖೆಯ ಕೆಳಭಾಗದಲ್ಲಿ ಇರುತ್ತದೆ. ಸುಮಾರು ಇದರ ಸಮಾನಾಂತರ ಇದ್ದು ಅದರಿಂದ ಒಂದು ಚತುರ್ಭುಜದ ಮೂಲಕ ಬೇರೆಯಾಗುತ್ತದೆ ಮತ್ತು ಸಾಮಾನ್ಯವಾಗಿ ಜೀವನ ರೇಖೆಯ ಮಧ್ಯಸ್ಥಳದ ಮೇಲೆ ಅದರೊಂದಿಗೆ

ಸೇರಿಕೊಂಡಿರುತ್ತದೆ.

ಈ ರೇಖೆಯೂ ಸಹ ಮಹತ್ವಪೂರ್ಣ ರೇಖೆಗಳಲ್ಲಿ ಒಂದಾಗಿದೆ. ಇದನ್ನು ಧನ ಅಥವಾ ವೈಭವ ರೇಖೆ ಎಂದು ಸಹ ಕರೆಯುತ್ತಾರೆ. ಜೀವನವು ಮಸ್ತಿಷ್ಕದಿಂದ ಮತ್ತು ಮಸ್ತಿಷ್ಕವು ಜೀವನದಿಂದ ಸಂಬಂಧವನ್ನು ಹೊಂದಿರುತ್ತದೆ. ಜೀವನದಲ್ಲಿ ಕೀರ್ತಿ, ಗೌರವ, ಪ್ರತಿಷ್ಠೆ ಬುದ್ಧಿಯ ಮೂಲಕವೇ ಪ್ರಾಪ್ತವಾಗುತ್ತದೆ. ಆದ್ದರಿಂದ ಜೀವನ ರೇಖೆಯಂತೆ ಮಸ್ತಿಷ್ಕ ರೇಖೆಯೂ ಸಹ ಅತ್ಯಂತ ಮಹತ್ವವುಳ್ಳದ್ದಾಗಿದೆ.

ಸಾಮುದ್ರಿಕ ಶಾಸ್ತ್ರದಲ್ಲಿ ಇದನ್ನು ಮಾತ್ರರೇಖೆ ಅಥವಾ ಬುದ್ಧಿರೇಖೆ ಎಂದು ಸಹ ಕರೆಯುತ್ತಾರೆ.

ಮಸ್ತಿಷ್ಕ ರೇಖೆಯ ಉಗಮ ತೋರು ಬೆರಳು ಮತ್ತು ಹೆಬ್ಬೆರಳಿನ ಮಧ್ಯದಿಂದ ಆಗುತ್ತದೆಂದು ನಂಬಲಾಗಿದೆ. ಅನೇಕ ಕೈಗಳಲ್ಲಿ ಶೀರ್ಷರೇಖೆ ಮತ್ತು ಜೀವನ ರೇಖೆ ಒಂದೇ ಸ್ಥಾನದಿಂದ ಹೊರಡುತ್ತದೆ ಹಾಗೂ ಇನ್ನೂ ಕೆಲವು ಕೈಗಳಲ್ಲಿ ಇವೆರಡರ ಉಗಮ ಸ್ಥಳ ಬೇರೆ ಬೇರೆಯಾಗಿರುತ್ತವೆ. ಈ ರೇಖೆ ಅಂಗೈಯನ್ನು ಎರಡು ಭಾಗಗಳಲ್ಲಿ ವಿಭಕ್ತಿಸುತ್ತಾ ರಾಹು ಮತ್ತು ಇಂದ್ರ ಕ್ಷೇತ್ರಗಳನ್ನು ಭಾಗ ಮಾಡುತ್ತಾ ಬುಧದ ಕೆಳಗೆ ಹರ್ಷಲ್ ಕ್ಷೇತ್ರದವರೆಗೆ ಹೋಗುತ್ತದೆ.

ಇದನ್ನು ಧನ ಅಥವಾ ವೈಭವ ರೇಖೆ ಎಂದು ನಂಬಲು ಮುಖ್ಯ ಕಾರಣವೇನೆಂದರೆ ಧನೋಪಾರ್ಜನೆ ಮಾಡುವ ಮುಖ್ಯ ಜವಾಬ್ದಾರಿ ತಲೆ ಅರ್ಥಾತ್ ಮಸ್ತಿಷ್ಕ ಮತ್ತು ಸ್ವಭಾವವನ್ನು ಅವಲಂಬಿಸಿರುವುದೇ ಆಗಿದೆ. ಒಳ್ಳೆಯ ಬುದ್ಧಿ, ತಿಳುವಳಿಕೆ ಇಲ್ಲದೆ ಹೋದರೆ ಧನ ಸಂಗ್ರಹ ಮಾಡುವುದು ಸಾಧ್ಯವೇ ಇಲ್ಲ. ಆದ್ದರಿಂದ ಇದರ ಪ್ರಭಾವ ಎಲ್ಲಾ ಕಡೆ ವ್ಯಾಪಿಸಿರುತ್ತದೆ.

ಮಸ್ತಿಷ್ಕ ರೇಕೆ ಗುರುವಿನ ಬೆರಳಾದ ತೋರು ಬೆರಳನ್ನು ಮೂರು ದಿಕ್ಕಿನಲ್ಲಿ ಭ್ರಮಣ ಮಾಡುವ ಪ್ರಾಣಶಕ್ತಿಯ ಎರಡನೇ ಮಾರ್ಗವಾಗಿದೆ ಹಾಗೂ ಮನುಷ್ಯನ ಮಾನಸಿಕ ವಿಕಾಸಕ್ಕೆ ಸಹಾಯಕವಾಗಿದೆ.

ಈ ರೇಖೆಯ ಆಧಾರದ ಮೇಲೆ ಅನ್ಯ ಅನೇಕ ಸಾಧಾರಣ ರೇಖೆಗಳ ಮತ್ತು ಉಪರೇಖೆಗಳ ಜ್ಞಾನವನ್ನು ಪ್ರಾಪ್ತಿ ಮಾಡಿಕೊಳ್ಳಲು ಸಾಧ್ಯ. ಇದರಿಂದಲೇ ಮನುಷ್ಯನ ಸಮೃದ್ಧಿಯ ಪತ್ತೆ ಮಾಡಬಹುದು.

ಒಂದು ವೇಳೆ ಮಸ್ತಿಷ್ಕ ರೇಖೆಯಿಂದ ಯಾವುದಾದರೂ ತೆಳು ರೇಖೆ ಗುರುಪರ್ವತದ ಕಡೆಗೆ ಹೊರಟರೆ ಆ ವ್ಯಕ್ತಿ ಅನುಶಾಸಿತ, ಯೋಜನಾಬದ್ಧ ರೀತಿಯಲ್ಲಿ ಕಾರ್ಯವನ್ನು ಮಾಡಬಲ್ಲ ತೇಜಸ್ವಿ ಮತ್ತು

ಬುದ್ಧಿವಂತನಾಗಿರುತ್ತಾನೆ.

ಒಂದು ವೇಳೆ ಮಸ್ತಿಷ್ಕ ರೇಖೆ ಅಲೆಅಲೆಯಂತೆ ಮುಂದುವರೆದರೆ ಅಂತಹ ವ್ಯಕ್ತಿಯ ಮನಸ್ಸು ಅಸ್ಥಿರವಾಗಿರುತ್ತದೆ ಮತ್ತು ಅವನ ಹೇಳಿಕೆಯಲ್ಲಿ ವ್ಯತ್ಯಾಸವಿರುತ್ತದೆ.

ಒಂದು ವೇಳೆ ಮಸ್ತಿಷ್ಕ ರೇಖೆ ಮುಂದಕ್ಕೆ ಸಾಗಿ ಚಂದ್ರ ಪರ್ವತದ ಕಡೆಗೆ ಹೋಗಿರುವಂತೆ ಕಾಣಿಸಿದರೆ ಆ ವ್ಯಕ್ತಿ ಕಾವ್ಯ ಪ್ರೇಮಿ ಮತ್ತು ಸ್ವತಃ ಕವಿಯಾಗುತ್ತಾನೆ ಹಾಗೂ ತನ್ನ ಜೀವನದಲ್ಲಿ ಅನೇಕ ಬಾರಿ ಜಲಯಾತ್ರೆ ಮಾಡುತ್ತಾನೆ.

ಒಂದು ವೇಳೆ ಯಾವುದಾದರೂ ಸ್ತ್ರೀಯ ಕೈಯಲ್ಲಿ ಮಸ್ತಿಷ್ಕ ರೇಖೆ ಮತ್ತು ಜೀವನ ರೇಖೆಗಳ ಉಗಮಸ್ಥಾನ ಬೇರೆಬೇರೆಯಾಗಿದ್ದರೆ ಆ ಸ್ತ್ರೀ ಕುಲಟೆಯಾಗಿರುತ್ತಾಳೆ.

ಮಸ್ತಿಷ್ಕ ರೇಖೆ ಮುಂದುವರೆದು ಹೃದಯ ರೇಖೆಯನ್ನು ಸ್ಪರ್ಶಿಸಿದರೆ ಅಂತಹ ಪುರುಷ ತನ್ನ ಜೀವನದಲ್ಲಿ ವ್ಯಭಿಚಾರ ಪ್ರಿಯನು ಮತ್ತು ಪರಸ್ತ್ರೀಗಾಮಿಯೂ ಆಗಿರುತ್ತಾನೆ. ಅವನು ತನ್ನ ಜೀವನದಲ್ಲಿ ತನ್ನ ಕಾರ್ಯಗಳಿಂದಲೇ ಕೆಟ್ಟ ಹೆಸರು ಪಡೆದುಕೊಳ್ಳುತ್ತಾನೆ.

ಒಂದು ವೇಳೆ ಮಸ್ತಿಷ್ಕ ರೇಖೆ ಮತ್ತು ಜೀವನ ರೇಖೆಯ ಉಗಮ ಸ್ಥಾನ ಬೇರೆ ಬೇರೆಯಾಗಿದ್ದರೆ ಅಂತಹ ವ್ಯಕ್ತಿ ಸ್ವಚ್ಛಂದ ಪ್ರಕೃತಿಯವನಾಗುತ್ತಾನೆ. ಅವನು ಸ್ವತಃ ತನ್ನ ಮನಸ್ಸಿನ ಮಾಲೀಕನಾಗಿರುತ್ತಾನೆ. ಬೇರೆಯವರ ಮಾತನ್ನು ಅವನು ಒಪ್ಪುವುದಿಲ್ಲ.

ಒಂದು ವೇಳೆ ಮಸ್ತಿಷ್ಕ ರೇಖೆ ಮುಂದುವರೆಯುತ್ತಾ ಹೃದಯ ರೇಖೆಯನ್ನು ಆಲಂಗಿಸಿಕೊಂಡು ಮುಂದುವರೆದರೆ ಅಂತಹ ವ್ಯಕ್ತಿ ಕ್ರೋಧಾತಿರೇಕದಲ್ಲಿ ಪ್ರೇಮಿಯಾಗಿರುತ್ತಾನೆ. ಪ್ರೇಯಸಿ ಅಥವಾ ಪತ್ನಿಯ ಕೊಲೆಯನ್ನು ಮಾಡುತ್ತಾನೆ.

ಒಂದು ವೇಳೆ ಮಸ್ತಿಷ್ಕ ರೇಖೆ ನೇರವಾಗಿ, ಸ್ಪಷ್ಟವಾಗಿ ಮತ್ತು ನಿರ್ದೋಷವಾಗಿದ್ದರೆ ಆ ವ್ಯಕ್ತಿ ಶೀಘ್ರ ಗತಿಯಲ್ಲಿ ನಿರ್ಣಯ ತೆಗೆದುಕೊಳ್ಳುವವನು, ಯೋಜನಾ ಬದ್ಧ ರೀತಿಯಲ್ಲಿ ಕಾರ್ಯ ಮಾಡುವವನು, ಕ್ರಿಯಾಶೀಲನೂ, ಧನವಂತನೂ, ಸ್ವಾಭಿಮಾನಿಯು ಮತ್ತು ಬುದ್ಧಿವಂತನೂ ಆಗಿರುತ್ತಾನೆ.

ಮಸ್ತಿಷ್ಕ ರೇಖೆ ಒಂದು ವೇಳೆ ಶನಿ ಪರ್ವತದ ಕಡೆಗೆ ಹೋಗುತ್ತಿದ್ದರೆ ಅಂತಹ ವ್ಯಕ್ತಿ ದಾರ್ಶನಿಕನು ಮತ್ತು ಚಿಂತನಾಶೀಲನು ಆಗಿರುತ್ತಾನೆ.

ಒಂದು ವೇಳೆ ಮಸ್ತಿಷ್ಕ ರೇಖೆ ಮತ್ತು ಜೀವನ ರೇಖೆಯ ಉಗಮ ಸ್ಥಾನ ಬೇರೆ ಬೇರೆಯಾಗಿದ್ದರೆ ಅಂತಹ ವ್ಯಕ್ತಿ ಸ್ಪಷ್ಟ ಪ್ರಕೃತಿಯವನಾಗಿರುತ್ತಾನೆ.



ಒಂದು ವೇಳೆ ಮಸ್ತಿಷ್ಕ ರೇಖೆಯ ಬಾಗುವಿಕೆ ಬುಧ ಪರ್ವತದ ಕಡೆಗೆ ಆಗಿರುವಂತೆ ಕಂಡರೆ ಅಂತಹ ವ್ಯಕ್ತಿ ಓರ್ವ ಸಫಲ ಉದ್ಯಮಿಯಾಗುತ್ತಾನೆ ಮತ್ತು ವ್ಯಾಪಾರದ ಮಾಧ್ಯಮದಿಂದ ಅಪಾರ ಹಣವನ್ನು ಪಡೆಯುತ್ತಾನೆ.

ಮಸ್ತಿಷ್ಕ ರೇಖೆಯ ಬಾಗುವಿಕೆ ಗುರು ಪರ್ವತದ ಕಡೆಗೆ ಇರುತ್ತದೋ ಅಂತಹ ವ್ಯಕ್ತಿ ಶ್ರೇಷ್ಠ ಸಾಹಿತಿಯಾಗುತ್ತಾನೆ.

ಬಲಗೈನ ಶೀರ್ಷರೇಖೆ ಮನುಷ್ಯನ ಭಾಗ್ಯ ಪರಿವರ್ತನೆ ಮತ್ತು ವಿಕಾಸ ಮುಂತಾದವುಗಳ ಲೆಕ್ಕವನ್ನು ಪ್ರಕಟಿಸುತ್ತದೆ. ಎಡಗೈನ ರೇಖೆ ಮಸ್ತಿಷ್ಕದ ಜನ್ಮ ಕಾಲದಿಂದಲೇ ಉತ್ಪನ್ನವಾದ ವಿಭಿನ್ನ ಪರಿಸ್ಥಿತಿಗಳನ್ನು ಹೇಳುತ್ತದೆ.

ಉದ್ದವಾದ, ಸುಂದರವಾದ, ಸುಸ್ಪಷ್ಟವಾದ ಶೀರ್ಷರೇಖೆಯ ಜೊತೆ ಒಂದು ವೇಳೆ ಶುಕ್ರ ಕ್ಷೇತ್ರ ಹೆಚ್ಚು ಉಚ್ಚವಾಗಿದ್ದರೆ ಸಾಂಸಾರಿಕ ಇಚ್ಛೆಯ

ಭಾವ ಅದರಲ್ಲಿ ಪ್ರಬಲವಾಗಿರುತ್ತದೆ. ಆದರೆ ಶುಕ್ರ ಅತ್ಯಂತ ಪ್ರಬಲವಾಗಿದ್ದರೆ ವ್ಯಭಿಚಾರ ಕೊಡುತ್ತದೆ.

ಸ್ಥಳ ಸ್ಥಳದಲ್ಲಿ ಕತ್ತರಿಸಿ ಹೋಗಿರುವ, ಅಸುಂದರ ಅಥವಾ ವಕ್ರವಕ್ರಾದ ರೇಖೆ ಚಿಂತನೀಯ ಮಾನಸಿಕ ಪರಿಸ್ಥಿತಿಯನ್ನು ಪ್ರಕಾಶಿಸುತ್ತದೆ. ಇದರಿಂದಾಗಿ ಮನುಷ್ಯನ ಬುದ್ಧಿ ಕೆಲಸ ಮಾಡುವುದಿಲ್ಲ. ಅವನು ಎಲ್ಲಾ ಕೆಲಸಗಳಲ್ಲಿ ಬೇರೆಯವರ ಅಭಿಪ್ರಾಯ ತೆಗೆದುಕೊಳ್ಳುತ್ತಾನೆ. ಇಂತಹ ವ್ಯಕ್ತಿ ಸ್ವತಂತ್ರ ನಿರ್ಣಯ ತೆಗೆದುಕೊಳ್ಳಲು ಸಾಧ್ಯವಾಗುವುದಿಲ್ಲ.

ಗುರು ಕ್ಷೇತ್ರದಿಂದ ಪ್ರಾರಂಭವಾಗಿರುವ ಶೀರ್ಷರೇಖೆಯ ಜೊತೆ ಜೀವನ ರೇಖೆಯ ಉಗಮವಾಗಿದ್ದರೆ ಮತ್ತು ಆ ಸ್ಥಾನದ ಮೇಲೆ ಅವರೆಡೂ ಪರಸ್ಪರ ಸ್ಪರ್ಶ ಮಾಡಿದರೆ ಅದು ಶುಭ ಲಕ್ಷಣವಾಗಿದೆ. ಇದರ ಕಾರಣದಿಂದಾಗಿ ಎರಡು ರೇಖೆಗಳೂ ಸಶಕ್ತವಾಗುತ್ತವೆ ಮತ್ತು ಆಯುಸ್ಸು, ಸೌಭಾಗ್ಯ ಮತ್ತು ವೈಭವ ಪ್ರಾಪ್ತವಾಗುತ್ತದೆ.

ಮೇಲೆ ಹೇಳಿರುವುದರಲ್ಲಿ ಶೀರ್ಷರೇಖೆ ಪೂರ್ಣ ಮತ್ತು ಅಧಿಕ ಉದ್ದವಾಗಿದ್ದರೆ ಇನ್ನೂ ಹೆಚ್ಚು ಶಕ್ತಿಯುತವಾಗುತ್ತದೆ. ಇವರಲ್ಲಿ ಮಹತ್ವಾಕಾಂಕ್ಷೆ ಚೆನ್ನಾಗಿ ಇರುತ್ತದೆ.

ಉದ್ದ ಶೀರ್ಷ ರೇಖೆ ಒಂದು ವೇಳೆ ಚಂದ್ರ ಕ್ಷೇತ್ರದ ಕಡೆಗೆ ತಿರುಗಿದರೆ ಮತ್ತು ಅದರ ಜೊತೆಯಲ್ಲಿಯೇ ಗುರುಕ್ಷೇತ್ರ ಅಧಿಕ ಉನ್ನತವಾಗಿ ಹಾಗೂ ವಿಸ್ತಾರವಾಗಿದ್ದರೆ ಅಂತಹ ವ್ಯಕ್ತಿ ಅತ್ಯಂತ ಬುದ್ಧಿವಂತನಾಗಿರುತ್ತಾನೆ. ಇದರ ಜೊತೆಯಲ್ಲಿಯೇ ಗುರು ಕ್ಷೇತ್ರದ ಮೇಲೆ ಜಲದ ಚಿಹ್ನೆ ರಾಜನೀತಿಯಲ್ಲಿ ಸಫಲತೆಯನ್ನು ನೀಡುತ್ತದೆ ಮತ್ತು ವಾಕ್‌ಶಕ್ತಿ ಪ್ರಬಲವಾಗಿರುತ್ತದೆ.

ಉದ್ದವಾದ ಮತ್ತು ನೇರವಾದ ಶೀರ್ಷರೇಖೆಯ ಜೊತೆಯಲ್ಲಿ ಉದ್ದವಾದ ಕೈ ಮತ್ತು ಉದ್ದವಾದ ಬೆರಳುಗಳಿದ್ದರೆ ಆ ವ್ಯಕ್ತಿ ಖಂಡಿತಾ ಅನ್ವೇಷಿಯಾಗಿರುತ್ತಾನೆ. ಪ್ರತ್ಯೇಕ ಕಾರ್ಯವನ್ನು ಪರೀಕ್ಷಾರ್ಹ ದೃಷ್ಟಿಯಿಂದ ತೆಗೆದುಕೊಳ್ಳುತ್ತಾನೆ. ಕಾರ್ಯ ಪೂರ್ಣವಾಗುವವರೆಗೆ ಅವನಿಗೆ ಸಂತೋಷವಾಗುವುದಿಲ್ಲ.

ಸುಂದರವಾದ, ಸ್ಪಷ್ಟವಾದ, ಶುಭಲಕ್ಷಣಯುಕ್ತ ಶೀರ್ಷ ರೇಖೆಯ ಜೊತೆಯಲ್ಲಿ ಸೂರ್ಯ ಮತ್ತು ಗುರುವಿನ ಕ್ಷೇತ್ರ ವಿಸ್ತಾರ ಹಾಗೂ ಉನ್ನತವಾಗಿದ್ದರೆ ಅಂತಹ ವ್ಯಕ್ತಿ ವಿಶೇಷ ಅಧ್ಯಯನ ಶೀಲನಾಗಿರುತ್ತಾನೆ. ಇದರ ಜೊತೆಯಲ್ಲಿ ತೋರು ಬೆರಳಿನ ಅಗ್ರಭಾಗ ಚೂಪಾಗಿದ್ದರೆ ಅದು ಅವನ ಅಧ್ಯಯನ ಪ್ರಿಯತೆಯನ್ನು ಮತ್ತಷ್ಟು ಹೆಚ್ಚಿಸುತ್ತದೆ.

ಸುಂದರವಾದ, ಸ್ಪಷ್ಟವಾದ, ಉದ್ದವಾದ ಶೀರ್ಷರೇಖೆಯು ಜೊತೆಯಲ್ಲಿ ಮಂಗಳ ಅಥವಾ ಬುಧದ ಅಧಿಕ ಉಚ್ಚ ಮತ್ತು ವಿಸ್ತಾರದಿಂದ ಕೂಡಿದ್ದರೆ ಮನದಲ್ಲಿ ಏಕಾಗ್ರತೆ ಇರುತ್ತದೆ.

ಉದ್ದವಾದ ನೇರವಾದ ಶೀರ್ಷ ರೇಖೆಯು ಜೊತೆಯಲ್ಲಿ ಬೆರಳುಗಳು ಗಂಟುಗಳಿಂದ ಕೂಡಿದ್ದರೆ ಮತ್ತು ಉಂಗುರದ ಬೆರಳು ಸಾಮಾನ್ಯಕ್ಕಿಂತ ಚಿಕ್ಕದಾಗಿದ್ದರೆ ವ್ಯಕ್ತಿ ಅವ್ಯವಹಾರಿಕನಾಗುತ್ತಾನೆ.

ಒಂದು ಚೆನ್ನಾಗಿರುವ ಉದ್ದರೇಖೆ ಮತ್ತು ಅಗಲ ಚತುರ್ಭುಜ ಜೊತೆಯಲ್ಲಿ ಉದ್ದವಾದ ಮೊನಚಾದ ಬೆರಳು, ಮೊದಲನೆಯದಾಗಿದ್ದು ಮತ್ತು ಉಳಿದ ಬೆರಳುಗಳು ವರ್ಗಾಕಾರವಾಗಿದ್ದರೆ ವ್ಯಕ್ತಿ ವಿಚಾರಶೀಲನಾಗಿರುತ್ತಾನೆ.

ಉದ್ದವಾದ ಮತ್ತು ನೇರವಾದ ರೇಖೆ ಜೊತೆಯಲ್ಲಿ ಶ್ರೇಷ್ಠ ಹೃದಯರೇಖೆ ಮತ್ತು ಮೊದಲನೆ ಬೆರಳು ಸಾಮಾನ್ಯಕ್ಕಿಂತ ಹೆಚ್ಚು ಉದ್ದವಾಗಿದ್ದರೆ ಅಂತಹ ವ್ಯಕ್ತಿ ಮಿತವ್ಯಯಿಯಾಗಿರುತ್ತಾನೆ ಆದರೆ ಲೋಭಿಯಾಗಿರುವುದಿಲ್ಲ.

ನೇರ ರೇಖೆ ಜೊತೆಯಲ್ಲಿ ಬಹಳ ಚಿಕ್ಕ ಕಿರುಬೆರಳು ಮತ್ತು ವಿಕಸಿತ ಗಂಟುಗಳು ಇದ್ದರೆ ಚತುರತೆಯ ಅಭಾವವಿರುತ್ತದೆ.

ಚಿಕ್ಕ ಚಿಕ್ಕ ದ್ವೀಪಗಳಿಂದ ನಿರ್ಮಿತ ಶೀರ್ಷರೇಖೆ ಜೊತೆಯಲ್ಲಿ ಮೇಲಿನಿಂದ ತಿರುಗಿಕೊಂಡಿರುವ ಉದ್ದವಾದ ಉಗುರು ಕ್ಷಯ ರೋಗವನ್ನು ಪ್ರಕಟಗೊಳಿಸುತ್ತದೆ.

ಶೀರ್ಷರೇಖೆ ಉದ್ದವಾಗಿ ಮತ್ತು ಇಕ್ಕಟ್ಟಾಗಿ ಜೊತೆಯಲ್ಲಿ ಎತ್ತರವಾದ ಮಂಗಳ, ಗುರು ಮತ್ತು ಬುಧ ಪರ್ವತ ಶಕ್ತಿ ಸಾಮರ್ಥ್ಯಗಳ ಪ್ರತೀಕವಾಗಿರುತ್ತವೆ.

ವಕ್ರ ಮಸ್ತಿಷ್ಕ ರೇಖೆಯು ಜೊತೆಯಲ್ಲಿ ಇಕ್ಕಟ್ಟಾದ ಚತುರ್ಭುಜ ಮತ್ತು ಶುಕ್ರದ ಪರ್ವತ ಉಚ್ಚವಾಗಿದ್ದರೆ ವ್ಯಕ್ತಿ ಕ್ಷುದ್ರ ಹೃದಯವುಳ್ಳವನಾಗುತ್ತಾನೆ.

ಪ್ರಾರಂಭದಲ್ಲಿ ಜೀವನ ರೇಖೆಯಿಂದ ಬಹಳ ದೂರ ಜೊತೆಯಲ್ಲಿ ಬಹಳ ಚಿಕ್ಕ ಕೆಲವು ಪರ್ವತ ಮತ್ತು ಅತ್ಯಂತ ವಿಸ್ತಾರವಾದ ವಿಕಸಿತವಾದ ಮಂಗಳ ಪರ್ವತ ಇದ್ದರೆ ಆ ವ್ಯಕ್ತಿ ದುಸ್ಸಾಹಸಿಯು, ಬುದ್ಧಿಹೀನನು ಆಗಿರುತ್ತಾನೆ. ಒಂದು ವೇಳೆ ರೇಖೆ ಚಿಕ್ಕದಾಗಿದ್ದರೆ ಈ ಅವಗುಣ ಮತ್ತಷ್ಟು ವೃದ್ಧಿಯಾಗುತ್ತದೆ.

ಹೃದಯ ರೇಖೆಯು ಕಡೆಗೆ ಏಳುತ್ತಾ ಜೊತೆಯಲ್ಲಿ ಜೀವನ ರೇಖೆಯಿಂದ ಉದಿತವಾಗುವ ಆರೋಗ್ಯರೇಖೆ ವ್ಯಕ್ತಿಗೆ ಮೂರ್ಛೆ ಮತ್ತು ಮತಿವಿಕಲ್ಪತೆಯ ರೋಗವನ್ನು ನೀಡುತ್ತದೆ.

ಅಕಸ್ಮಾತ್ ಚಂದ್ರ ಪರ್ವತದ ಕಡೆಗೆ ಬಾಗುತ್ತಾ ಜೊತೆಯಲ್ಲಿ ಪ್ರಥಮ ಬೆರಳಿನ ಮೇಲೆ ನಕ್ಷತ್ರ ಚಿಹ್ನೆ ವ್ಯಕ್ತಿಯನ್ನು ಹುಚ್ಚನ್ನಾಗಿ ಮಾಡುತ್ತದೆ.

ಬೃಹಸ್ಪತಿ ಕ್ಷೇತ್ರದ ಕೆಳಗೆ ಉದಯ ಮತ್ತು ಕೆಳಗೆ ಚಂದ್ರ ಪರ್ವತದ ಕಡೆಗೆ ಹೋಗುವ, ಜೊತೆಯಲ್ಲಿ ಹೆಬ್ಬೆರಳಿನ ಪ್ರಥಮ ಪರ್ವ ಅಗಲ ಮತ್ತು ಚಿಕ್ಕದಾಗಿದ್ದು ಮತ್ತು ನಿಕೃಷ್ಟ ಹೃದಯ ರೇಖೆ ಇದ್ದರೆ ವ್ಯಕ್ತಿಯನ್ನು ಹಠ ಸ್ವಭಾವದವನನ್ನಾಗಿ ಮಾಡುತ್ತದೆ.

ಕೈನ ಮಧ್ಯದಲ್ಲಿ ಸಮಾಪ್ತಿಯಾಗಿರುವ ಶೀರ್ಷರೇಖೆ ಮತ್ತು ನೀಚ ಮಂಗಳ ಪರ್ವತ ಉತ್ಸಾಹದಲ್ಲಿ ನ್ಯೂನತೆ ನೀಡುತ್ತವೆ.

ವಕ್ರವಾದ ಮತ್ತು ಸೂರ್ಯ ಅಥವಾ ಬುಧ ಪರ್ವತದ ಕೆಳಗೆ ಹೃದಯ ರೇಖೆಯ ಕಡೆಗೆ ತಿರುವು ಮಾಡಿಕೊಂಡು ಹೋಗುತ್ತಿರುವ ಮಸ್ತಿಷ್ಕ ರೇಖೆ ಹುಚ್ಚುತನದ ಲಕ್ಷಣಗಳನ್ನು ಪ್ರಕಟಿಸುತ್ತದೆ.

ಕೈನ ಅಂಚಿನ ಕಡೆಗೆ ಹೋಗುತ್ತಾ ಜೊತೆಯಲ್ಲಿ ಕೆಳಗೆ ಬೃಹಸ್ಪತಿ ಮತ್ತು ಶುಕ್ರಪರ್ವತ, ಹೆಬ್ಬೆರಳು ಒಳಭಾಗಕ್ಕೆ ತಿರುಗಿಕೊಂಡಿರುವ ಮತ್ತು ಬೆರಳುಗಳು ನೇರವಾಗಿರುವುದು ಅಹಂಕಾರವನ್ನು ಸೂಚಿಸುತ್ತದೆ.

ಜೀವನ ರೇಖೆ ಮತ್ತು ಭಾಗ್ಯ ರೇಖೆಯ ಜೊತೆಯಲ್ಲಿ ಸೇರಿಯೂ ಸಹ ಶೀರ್ಷ ರೇಖೆ ಒಂದು ವೇಳೆ ಸುಂದರ ತ್ರಿಕೋನವಾಗುವುದಕ್ಕೆ ಸಹಯೋಗ ನೀಡದೇ ಹೋದರೆ ಮತ್ತು ಜೊತೆಯಲ್ಲಿ ಪೂರ್ತಿ ಅಂಗೈ ಮೇಲೆ ನೇರ ರೇಖೆಗಳು ಆಗಿದ್ದರೆ ಅಂತಹ ವ್ಯಕ್ತಿ ಮಹಾಲೋಭಿಯಾಗುತ್ತಾನೆ. ಜಿಪುಣತನದ ಎದುರು ಬೇರೆಯವರ ಅಹಿತವನ್ನೂ ಸಹ ಲೆಕ್ಕಿಸುವುದಿಲ್ಲ.

ಶೀರ್ಷರೇಖೆಯ ಮಧ್ಯದ ಭಾಗದಲ್ಲಿ ಯಾವುದೋ ಪ್ರಕಾರದ ಗೋಲಾಕಾರ ಅಥವಾ ಬಾಗುವಿಕೆಯ ಅಭಾವ ವ್ಯಕ್ತಿ ಯಾರ ನ್ಯಾಯೋಚಿತ ಮಾತನ್ನೂ ಒಪ್ಪುವುದಿಲ್ಲ ಹಾಗೂ ಸ್ವಾರ್ಥದ ಕಾರಣದಿಂದ ಏನೊಂದೂ ಕಾರ್ಯವನ್ನು ಮಾಡಲಾರ ಎಂಬುದನ್ನು ಸೂಚಿಸುತ್ತದೆ.

ಚಿಕ್ಕ ಶೀರ್ಷ ರೇಖೆಯ ಜೊತೆಯಲ್ಲಿ ದೋಷಪೂರ್ಣ ಹೃದಯ ರೇಖೆ ಇರುವುದ ವ್ಯಕ್ತಿ ಮಿತಭಾಷಿ ಎಂದು ಸೂಚಿಸುತ್ತದೆ, ಜೊತೆಯಲ್ಲೇ ಜೀವನ ರೇಖೆಯ ಅಂತಿಮ ಭಾಗದ ಮೇಲೆ ತ್ರಿಕೋನ ಉಂಟಾದರೆ ವ್ಯಕ್ತಿ

ನಷ್ಟವನ್ನು ಅನುಭವಿಸುತ್ತಾನೆ ಹಾಗೂ ವಾದದಲ್ಲೂ ಸಹ ಅಪಜಯವನ್ನು ಅನುಭವಿಸುತ್ತಾನೆಂಬುದನ್ನು ಸೂಚಿಸುತ್ತದೆ.

ಮಂಗಳದ ಕ್ಷೇತ್ರದವರೆಗೆ ನೇರ ಹೋಗುವ ಶೀರ್ಷ ರೇಖೆ ಅಲ್ಲಿಗೆ ತಲುಪಿ ತಿರುವು ತೆಗೆದುಕೊಂಡರೆ ಅದು ವ್ಯಾವಸಾಯಿಕ ಸಫಲತೆಯನ್ನು ವ್ಯಕ್ತಪಡಿಸುತ್ತದೆ. ಇಂತಹ ವ್ಯಕ್ತಿ ವ್ಯಾಪಾರದ ಉನ್ನತಿಯ ಜೊತೆಯಲ್ಲಿ ಹಣ ಸಂಪಾದನೆಯಲ್ಲೂ ಸಫಲನಾಗುತ್ತಾನೆ.

ಶೀರ್ಷ ರೇಖೆಯ ಬಾಗುವಿಕೆ ಹೆಚ್ಚಾಗಿದ್ದರೆ ಮತ್ತು ಅದು ಚಂದ್ರ ಕ್ಷೇತ್ರದ ಮೇಲೆ ತಲುಪಿ ಎರಡು ಉಪಶಾಖೆಗಳ ರೂಪದಲ್ಲಿ ವಿಭಾಜಿತಗೊಂಡರೆ ಅಂತಹ ವ್ಯಕ್ತಿ ಸಾಹಿತ್ಯಿಕ ಉಪಲಬ್ಧಿಯನ್ನು ಪ್ರಾಪ್ತಿ ಮಾಡಿಕೊಳ್ಳುತ್ತಾನೆ. ಕಲಾಕಾರ ಮತ್ತು ಸಾಹಿತ್ಯ ಪ್ರೇಮಿಯೂ ಸಹ ಆಗುತ್ತಾನೆ.

ತನ್ನ ಮಾರ್ಗವನ್ನು ಸಾರಿ ಸಾರಿಗೂ ಬದಲಿಸುತ್ತಾ ಇರುವ ಅಲೆಗಳ ರೀತಿಯ ಶೀರ್ಷರೇಖೆ ಮನಸ್ಸಿನ ಚಂಚಲತೆಯನ್ನು ಹಾಗೂ ಅಸ್ಥಿರತೆಯನ್ನು ಪ್ರಕಟಿಸುತ್ತದೆ. ಇಂತಹ ವ್ಯಕ್ತಿ ತನ್ನ ಮನಸ್ಸು ಸ್ಥಿರವಾಗಿಟ್ಟುಕೊಳ್ಳಲು ಸಾಧ್ಯವಾಗದೇ ಇರುವುದರಿಂದ ಅವನು ಯಾವ ಕಾರ್ಯದಲ್ಲೂ ಗೌರವವನ್ನು ಪಡೆದುಕೊಳ್ಳಲಾರ.

ರೇಖೆಯ ಮೇಲ್ಭಾಗದಲ್ಲಿ ಕಳಶ ಅಥವಾ ಡಮರುಗದ ಚಿಹ್ನೆ ಇದ್ದರೆ ಅದು ವ್ಯಕ್ತಿಯ ಸೇವಾವೃತ್ತಿಯ ಲಕ್ಷಣವನ್ನು ತಿಳಿಸುತ್ತದೆ. ಇಂತಹ ವ್ಯಕ್ತಿ ಬೇರೆಯವರ ಬಳಿ ಕೆಲಸ ಮಾಡುವಂಥವನಾಗಿರುತ್ತಾನೆ.

ಶೀರ್ಷರೇಖೆ ಯಾವ ಸ್ಥಳದಲ್ಲಿ ಕತ್ತರಿಸಿ ಹೋಗುವುದೋ ಆ ವಯಸ್ಸಿನಲ್ಲಿ ವ್ಯಕ್ತಿಯ ತಾಯಿಗೆ ಕಷ್ಟ ಉಂಟಾಗುತ್ತದೆ ಅಥವಾ ಮಾನಸಿಕ ಅಶಾಂತಿ ಉತ್ಪನ್ನವಾಗುತ್ತದೆ.

ಬಿಳಿಯ ಬಣ್ಣದ ಶೀರ್ಷರೇಖೆ ಅಶಕ್ತತೆಯನ್ನು ಪ್ರಕಟಿಸುತ್ತದೆ. ಅದರ ಜೊತೆಯಲ್ಲಿ ಆರೋಗ್ಯ ರೇಖೆ ದುರ್ಬಲವಾಗಿದ್ದರೆ ಅಥವಾ ದೋಷ ಪೂರ್ಣವಾಗಿದ್ದರೆ ರೋಗವನ್ನು ನೀಡುತ್ತದೆ.

ಶೀರ್ಷರೇಖೆಯ ಮೇಲೆ ಕಪ್ಪು ಮಚ್ಚೆ ಮತ್ತು ಅದರ ಜೊತೆಯಲ್ಲಿ ಚಂದ್ರಕ್ಷೇತ್ರದ ಮೇಲೆ ನಕ್ಷತ್ರದ ಚಿಹ್ನೆ ಇದ್ದರೆ ಅದು ಮೂರ್ಛೆ ಮತ್ತು ಸನ್ನಿಪಾತ ರೋಗವನ್ನು ನೀಡುತ್ತದೆ.

### 3. ಹೃದಯರೇಖೆ (Heart Line)

ಜನ ಸಾಮಾನ್ಯರು ಇದನ್ನು ವಿಚಾರರೇಖೆ ಅಥವಾ ಹೃದಯ ರೇಖೆ

ಎಂದು ಕರೆಯುತ್ತಾರೆ. ಹೃದಯ ಮತ್ತು ಮನಸ್ಸಿನ ಪಕ್ಷದೊಂದಿಗೆ ಇದರ ಜೀವನದ ನೇರ ಸಂಬಂಧವಿದೆ.



ಈ ರೇಖೆ ಬುಧ ಪರ್ವತದ ಕೆಳಗಿನಿಂದ ಬುಧ ಮತ್ತು ಪ್ರಜಾಪತಿ ಗ್ರಹಗಳ ಕ್ಷೇತ್ರಗಳನ್ನು ಬೇರೆ ಬೇರೆ ಮಾಡುತ್ತಾ ಕ್ರಮವಾಗಿ ಸೂರ್ಯ, ಶನಿ ಕ್ಷೇತ್ರಗಳಿಂದ ಹಾದು ತೋರು ಬೆರಳಿನ ಗುರುಕ್ಷೇತ್ರದವರೆಗೆ ಹೋಗಿ ತಲುಪುತ್ತದೆ. ಕೆಲವರ ಕೈಯಲ್ಲಿ ಇದು ಗುರುವಿನ ಪ್ರಥಮ ಭಾಗದವರೆಗೂ ತಲುಪಿರುವುದು ಕಂಡುಬರುತ್ತದೆ. ಮತ್ತೆ ಕೆಲವರ ಕೈಯಲ್ಲಿ ಶನಿ ಅಥವಾ ಸೂರ್ಯನವರೆಗೆ ಮಾತ್ರ ತಲುಪಿ ನಿಂತುಹೋಗುತ್ತದೆ. ಎಲ್ಲಿಯಾದರೂ ಹೃದಯ ಮತ್ತು ಮಸ್ತಿಷ್ಕ ರೇಖೆಗಳು ಒಂದೇ ಆಗಿ ಅಂಗೈನ ಒಂದು ಅಂಚಿನಿಂದ ಹಿಡಿದು ಮತ್ತೊಂದು ಅಂಚಿನವರೆಗೂ ಸಹ ತಲುಪುತ್ತವೆ.

ಒಂದು ವೇಳೆ ಯಾರ ಕೈಲಾದರೂ ಈ ರೇಖೆ ಇಲ್ಲದೇ ಹೋದರೆ ಅಂತಹ ವ್ಯಕ್ತಿ ಹೃದಯಹೀನನೂ, ಕಪಟಿಯೂ, ನೀಚನೂ ಮತ್ತು ಸ್ವಾರ್ಥಿಯೂ ಆಗಿರುತ್ತಾನೆಂದು ಇದು ಅರ್ಥ ನೀಡುತ್ತದೆ. ಒಂದು ವೇಳೆ ಬುಧ ಗ್ರಹದ ಪ್ರಮುಖದ ಇದ್ದರೆ ಮೇಲೆ ತಿಳಿಸಿದ ದುರ್ಗುಣ ಮತ್ತಷ್ಟು ಹೆಚ್ಚಾಗುತ್ತದೆ ಮತ್ತು ವ್ಯಕ್ತಿ ಹಿಂಸೆ ಮಾಡುವವನಾಗುತ್ತಾನೆ.

ಒಂದು ವೇಳೆ ಈ ರೇಖೆ ಗುರುವಿನಿಂದ ಹುಟ್ಟಿದರೆ ಅದು ಉಚ್ಚತಮ ಪ್ರಕಾರದ ಪ್ರೇಮವನ್ನು ಸೂಚಿಸುತ್ತದೆ. ಅದು ಮನಸ್ಸಿನ ದೇವತೆಯ ಪೂಜೆಯನ್ನು ಪ್ರಕಟಗೊಳಿಸುತ್ತದೆ. ಆ ವ್ಯಕ್ತಿ ದೃಢನೂ, ಚತುರನೂ, ಒಳ್ಳೆಯವನು ಆಗಿರುತ್ತಾನೆ.

ಒಂದು ವೇಳೆ ಈ ರೇಖೆ ಗುರು ಪರ್ವತದ ಮೇಲಿನಿಂದ ಹುಟ್ಟಿದರೆ ಅದು ಪ್ರೇಮಾತಿರೇಕವನ್ನು ಪ್ರಕಟಿಸುತ್ತದೆ.

ಈ ರೇಖೆ ಶನಿ ಪರ್ವತದಿಂದ ಮೇಲೆದ್ದರೆ ಅದು ಪ್ರೇಮಾತಿರೇಕವನ್ನು ಮತ್ತು ಆವೇಶಮಯ ಪ್ರೇಮವನ್ನು ಪ್ರಕಟಿಸುತ್ತದೆ.

ಈ ರೇಖೆ ಗುರು ಮತ್ತು ಶನಿಯ ಮಧ್ಯದಿಂದ ಹುಟ್ಟಿದರೆ ವ್ಯಕ್ತಿಗೆ ಆದರ್ಶಪ್ರಿಯತೆ ಮತ್ತು ಆವೇಶ ಎರಡೂ ಇರುತ್ತದೆ.

ಶನಿಯಿಂದ ಏಳುವ ಹೃದಯ ರೇಖೆ ಸರಪಳಿ ಮಾಡಿಕೊಂಡರೆ ಮತ್ತು ಅಗಲರೇಖೆಯಾಗಿದ್ದರೆ ಅಂತಹ ವ್ಯಕ್ತಿ ವಿರುದ್ಧ ಲಿಂಗದಿಂದ ತಿರಸ್ಕಾರಪಟ್ಟುಕೊಳ್ಳುತ್ತಾನೆ.

ಹೃದಯ ರೇಖೆ ಚೆನ್ನಾಗಿ ಎತ್ತರವಾಗಿ ಬೆರಳಿನ ಆಧಾರದ ಹತ್ತಿರ ಇದ್ದರೆ ಉತ್ಸಾಹ, ಆವೇಶ, ಅಸೂಯೆ ಪ್ರಕೃತಿ ಇರುತ್ತದೆ.

ರೇಖೆ ಸಾಮಾನ್ಯಕ್ಕಿಂತ ಕೆಳಗಿದ್ದರೆ ಅಂಥವರು ಭಾವನಾರಹಿತರು ಮತ್ತು ಸ್ವಾರ್ಥಿಗಳೂ ಆಗಿರುತ್ತಾರೆ. ಒಳ್ಳೆಯ ಕೈನಲ್ಲಿ ಶಾರೀರಿಕ ಆಕರ್ಷಣೆ ಇಲ್ಲದ ಸ್ಥಿರ ಪ್ರೇಮದ ಪ್ರವಾಹವಿರುತ್ತದೆ.

ಕೆಂಪು ತುಂಬಿದ ಸ್ಪಷ್ಟ, ಶುದ್ಧ, ದೋಷರಹಿತ ರೇಖೆ ಇದ್ದರೆ ಸಫಲತೆ ಮತ್ತು ಆನಂದ ನೀಡುತ್ತದೆ. ಇಂಥವರಲ್ಲಿ ಮಾನವೋಚಿತ ಗುಣ ತುಂಬಿಕೊಂಡಿರುತ್ತದೆ.

ಒಂದು ವೇಳೆ ಈ ರೇಖೆ ದುರ್ಬಲವಾಗಿ, ಕತ್ತರಿಸಿಹೋಗಿದ್ದರೆ ಮಾನವೀಯ ಗುಣಗಳಿಲ್ಲದೇ ಇರುವುದನ್ನು ಸೂಚಿಸುತ್ತದೆ. ಇಂತಹ ವ್ಯಕ್ತಿ ಸ್ವಾರ್ಥಿಯೂ, ಪಾಪಿಯೂ, ಅತ್ಯಾಚಾರಿಯು ಮತ್ತು ನೀಚನೂ ಆಗಿರುತ್ತಾನೆ.

ಪೂರ್ಣ ಹೃದಯ ರೇಖೆ 120ವರ್ಷಗಳವರೆಗೆ ಆಯುಸ್ಸು ನೀಡುತ್ತದೆ. ಪೂರ್ಣ ಅಂಗೈ ಮೇಲೆ ಗೋಲಾಕಾರದ ಈ ರೇಖೆಯ ಜೊತೆಯಲ್ಲಿ ಒಂದು ವೇಳೆ ಚಂದ್ರ ಕ್ಷೇತ್ರವೂ ಸಹ ಉಚ್ಚವಾಗಿದ್ದರೆ ಇದು ಕಲ್ಪನೆಯ ಅಧಿಕತೆಯನ್ನು ತಿಳಿಸುತ್ತದೆ. ಮನುಷ್ಯ ಕಲ್ಪನಾ ಲೋಕದಲ್ಲಿ ವಿಹರಿಸುತ್ತಾ ಉತ್ಕರ್ಷ ಸ್ವಪ್ನವನ್ನು ನೋಡುತ್ತಾನೆ.

ಹೃದಯ ರೇಖೆಯ ಮೇಲೆ ದ್ವೀಪ ಚಿಹ್ನೆ ಇದ್ದರೆ ಅದು ವ್ಯಕ್ತಿಗೆ ಗೌರವ ದೊರೆಯಲು ಅಡಚಣೆ ಉಂಟು ಮಾಡುತ್ತದೆ. ಸಾಮಾಜಿಕ ಜೀವನ ಖಂಡಿಸಲ್ಪಡುತ್ತದೆ.

ಎರಡು ಪದರದ ಹೃದಯ ರೇಖೆ ಆಳ ಪ್ರೇಮವನ್ನು

ಕೊಡುವುದರಿಂದ ವ್ಯಕ್ತಿಗೆ ಬಹಳಷ್ಟು ದುಃಖ ಪ್ರಾಪ್ತಿಯಾಗುತ್ತದೆ.

ತೋರು ಬೆರಳಿನ ಮೂರನೇ ಪರ್ವದಿಂದ ಹೃದಯ ರೇಖೆ ಉದಯವಾದರೆ ಆ ವ್ಯಕ್ತಿ ಜೀವನದ ಯಾವುದೇ ಕ್ಷೇತ್ರದಲ್ಲೂ ಸಫಲತೆಯನ್ನು ಪ್ರಾಪ್ತಿಮಾಡಿಕೊಳ್ಳಲಾಗುವುದಿಲ್ಲ.

ಬುಧ ಪರ್ವತವನ್ನು ಪೂರ್ಣವಾಗಿ ಸುತ್ತುಕೊಂಡಿರುವ ಹೃದಯರೇಖೆ ತಂತ್ರವಿದ್ಯೆಯ ಬಗ್ಗೆ ವಿಶೇಷ ಆಸಕ್ತಿಯನ್ನು ನೀಡುತ್ತದೆ.

ಒಂದು ವೇಳೆ ಹೃದಯರೇಖೆ ಶನಿ ಪರ್ವತದ ಕೆಳಗಿನಿಂದ ಉದಿತವಾಗಿದ್ದರೆ ಮತ್ತು ಮಸ್ತಿಷ್ಕ ರೇಖೆಯ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ಅಂತಹ ವ್ಯಕ್ತಿಗೆ ಅಲ್ಪಾಯುವಿನಲ್ಲೇ ಮೃತ್ಯು ಪ್ರಾಪ್ತವಾಗುತ್ತದೆ.

ಬಹಳ ಉದ್ದವಾದ ಮತ್ತು ಸ್ಪಷ್ಟವಾದ ಈ ರೇಖೆ ಹಾಗೂ ರೇಖೆಯುಳ್ಳ ಚಂದ್ರ ಪರ್ವತ ಮತ್ತು ಸ್ಪಷ್ಟ ಶುಕ್ರವಲಯವಿದ್ದರೆ ಅಸೂಯೆಯ ಭಾವನೆ ಹೆಚ್ಚಾಗುತ್ತದೆ.

ಹೃದಯ ರೇಖೆ ಎಲ್ಲಿಯಾದರೂ ಕತ್ತರಿಸಿಹೋಗಿದ್ದರೆ ಮತ್ತು ಪುನಃ ಆರಂಭವಾಗಿದ್ದರೆ ಆ ವಯಸ್ಸಿನಲ್ಲಿ ಮೃತ್ಯು ಸಮಾನ ಕಷ್ಟ ಬರುತ್ತದೆ.

ಶನಿ ಪರ್ವತದ ಕೆಳಗೆ ಹೃದಯ ರೇಖೆ ಮತ್ತು ಮಸ್ತಿಷ್ಕ ರೇಖೆಯ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ವ್ಯಕ್ತಿ ಅಲ್ಪಾಯುವಿನಲ್ಲೇ ಮೃತ್ಯುವನ್ನು ಪಡೆಯುತ್ತಾನೆ.

ಒಂದು ವೇಳೆ ಹೃದಯ ರೇಖೆಯಿಂದ ಯಾವುದಾದರೂ ಶಾಖೆ ಹೊರಟು ಮಂಗಳ ಪರ್ವತದ ಕಡೆಗೆ ಹೋದರೆ ಆ ವ್ಯಕ್ತಿ ಕಠೋರ ಹೃದಯದವನು, ನಿರ್ದಯಿಯೂ ಮತ್ತು ದುಷ್ಟನೂ ಆಗಿರುತ್ತಾನೆ.

ಆವಶ್ಯಕತೆಗಿಂತ ಹೆಚ್ಚು ಅಗಲವಾದ ಹೃದಯ ರೇಖೆ ಆವಶ್ಯಕತೆಗಿಂತ ಹೆಚ್ಚು ರೋಗವನ್ನು ನೀಡುತ್ತದೆ.

ಈ ರೇಖೆ ಕೈನ ಅಂಚಿನವರೆಗೂ ಹರಡಿಕೊಂಡಿದ್ದು ಜೊತೆಗೆ ಉದ್ದವಾದ, ಸ್ಪಷ್ಟವಾದ ಮಸ್ತಿಷ್ಕರೇಖೆ ಮತ್ತು ಮಂಗಳದ ಎರಡೂ ಪರ್ವತ ಸ್ಪಷ್ಟವಾಗಿದ್ದರೆ ಅಂತಹ ವ್ಯಕ್ತಿ ಧೈರ್ಯಶಾಲಿಯೂ ಸಾಹಸಿಯೂ ಆಗಿರುತ್ತಾನೆ.

ದೋಷಪೂರ್ಣ ಅಂಗೈನಲ್ಲಿ ತನ್ನ ಸ್ಥಾನದಿಂದ ಕೆಳಕ್ಕೆ ಜಾರಿರುವ ಹೃದಯ ರೇಖೆ ಕಠೋರ ಪ್ರಕೃತಿಯನ್ನು ವ್ಯಕ್ತಗೊಳಿಸುತ್ತದೆ. ಇವರಲ್ಲಿ ನಂಬಿಕೆದ್ರೋಹ, ಲೋಭ, ಅಸಂಯಮ, ಅಸೂಯೆಯ ಭಾವನೆ ವೃದ್ಧಿಯಾಗುತ್ತದೆ.

ಶೀರ್ಷ ರೇಖೆಯು ಕಡೆಗೆ ಇದ್ದಕ್ಕಿದ್ದಂತೆ ಒಂದೇ ಬಾರಿಗೆ ಬಾಗುವ ಹೃದಯ ರೇಖೆಯು ಬಾಗುವಿಕೆ ಶನಿ ಕ್ಷೇತ್ರದ ಕೆಳಭಾಗದ ಕಡೆಗಿದ್ದರೆ ವ್ಯಕ್ತಿ ಕ್ಷುದ್ರ ಸ್ವಭಾವದವನಾಗುತ್ತಾನೆ. ಸೂರ್ಯಕ್ಷೇತ್ರದ ಕೆಳಗಿನ ಕಡೆಗೆ ಬಾಗುವಿಕೆ ಪ್ರಬಲವಾಗಿದ್ದರೆ ವ್ಯಕ್ತಿ ನಿಕೃಷ್ಟ ವಿಚಾರದವನಾಗಿರುತ್ತಾನೆ.

ಮಸ್ತಿಷ್ಕ ರೇಖೆಯು ಕಡೆಗೆ ಬಾಗುತ್ತಾ ಉದ್ದಗಲವನ್ನು ಇಕ್ಕಟ್ಟು ಮಾಡಿದರೆ ವ್ಯಕ್ತಿ ಕ್ಷುದ್ರ ಸ್ವಭಾವದವನಾಗುತ್ತಾನೆ. ಜೊತೆಯಲ್ಲಿ ವರ್ಗಾಕಾರದ ಅಗ್ರಭಾಗವುಳ್ಳ ಕೋಮಲ ಬೆರಳಿದ್ದರೂ ಸಹ ವ್ಯಕ್ತಿ ಕ್ಷುದ್ರ ಸ್ವಭಾವದವನಾಗುತ್ತಾನೆ.

ಹೃದಯ ರೇಖೆ ನೇರವಾಗಿ, ಕೈನಲ್ಲಿ ಕಠೋರತೆಯ ಮಾಂಸದ ಅಭಾವವಿದ್ದು ಮತ್ತು ಗಂಟು ಸರಿಯಾಗಿಲ್ಲದೆ ಹೋದರೆ ವ್ಯಕ್ತಿ ಮತ್ತಷ್ಟು ಕಠೋರ ಸ್ವಭಾವದವನಾಗುತ್ತಾನೆ. ಇಂತವರ ಹೃದಯದಲ್ಲಿ ಸ್ನೇಹ ಅಥವಾ ಪ್ರೀತಿ ಇರುವುದಿಲ್ಲ. ಅಂಥವನು ಏಕಾಂತ ವಾಸ ಮಾಡುವ ವ್ಯಕ್ತಿಯಾಗುತ್ತಾನೆ.

ಸರಪಳಿಯುಕ್ತ ಹೃದಯರೇಖೆ ದುರ್ಬಲ ಹೃದಯದ ಪರಿಚಯ ನೀಡುತ್ತದೆ. ಪ್ರೀತಿ ಪ್ರಣಯದ ವ್ಯವಹಾರದಲ್ಲಿ ಇಂತಹ ವ್ಯಕ್ತಿ ಅಸಫಲನಾಗಿರುತ್ತಾನೆ. ಪ್ರೇಮದಲ್ಲಿ ನಷ್ಟವನ್ನು ಮತ್ತು ದುಃಖವನ್ನು ಪಡೆಯುತ್ತಾನೆ.

ಹೃದಯರೇಖೆ ಮಸ್ತಿಷ್ಕ ರೇಖೆಯ ಕಡೆಗೆ ಬಾಗಿದ್ದರೆ ಮತ್ತು ಮಸ್ತಿಷ್ಕರೇಖೆ ಜೀವನ ರೇಖೆಯ ಜೊತೆ ಸಾಮಾನ್ಯಕ್ಕಿಂತ ಹೆಚ್ಚು ದೂರದಲ್ಲಿದ್ದರೆ ಅಂತಹ ವ್ಯಕ್ತಿಯ ಮನೋವೃತ್ತಿ ವ್ಯವಹಾರ ದೃಢವಾಗಿಯೂ ಮತ್ತು ಔಪಚಾರಿಕತೆಯಿಂದ ತುಂಬಿಕೊಂಡಿಯೂ ಇರುತ್ತದೆ.

ಹಳದಿ ಬಣ್ಣದಿಂದಿರುವ ಹೃದಯ ರೇಖೆ ಎದೆ ರೋಗವನ್ನು ನೀಡುತ್ತದೆ. ಬಹಳ ಸಪ್ಪಗಿರುವುದರ ಜೊತೆಗೆ ಬಹಳ ಅಗಲವಾಗಿರುವ ರೇಖೆ ಹೃದಯ ರೋಗ, ದೋಷ ಪೂರ್ಣ ರಕ್ತ ಪ್ರವಾಹ ಶಕ್ತಿಯನು ಉಂಟು ಮಾಡುತ್ತದೆ. ಇದರಿಂದ ಬಾಹು ಬಲ ಮತ್ತು ಧೈರ್ಯದ ನಾಶವಾಗಿ ಶರೀರ ದುರ್ಬಲವಾಗುತ್ತದೆ.

ಗುರು ಪರ್ವತದ ಕೆಳಭಾಗದಿಂದ ಆರಂಭವಾಗುವ ಮತ್ತು ಮಂಗಳ ಪರ್ವತದ ಕೆಳಗೆ ಅಂತ್ಯವಾಗುವ ಮಸ್ತಿಷ್ಕ ರೇಖೆಯ ಜೊತೆಯಲ್ಲಿ ನಿಮ್ನ, ನಿಕೃಷ್ಟ ಹೃದಯರೇಖೆ ಇದ್ದರೆ ವ್ಯಕ್ತಿ ಮೂರ್ಖನೂ, ಭಾಗ್ಯಹೀನನೂ,

ದುಷ್ಟನೂ, ಯುದ್ಧ ಪ್ರಿಯನೂ ಆಗುತ್ತಾನೆ.

ನಿಕೃಷ್ಟ ಮಸ್ತಿಷ್ಕ ರೇಖೆ ಮತ್ತು ಜೀವನ ರೇಖೆಯ ಅಂತರದ ಮೇಲ ಕ್ರಾಸ್ ಚಿಹ್ನೆ ಮತ್ತು ನಿಮ್ನ ಜೀವನ ರೇಖೆ ಇದ್ದರೆ ವ್ಯಕ್ತಿ ಸುಳ್ಳು ಹೇಳುವವನಾಗುತ್ತಾನೆ. ತೆಳುವಾದ ಮತ್ತು ಉದ್ದವಾದ ಹೃದಯರೇಖೆ ವ್ಯಕ್ತಿಯಲ್ಲಿ ಕೊಲೆಗಾರನ ಸ್ವಭಾವವನ್ನು ಉತ್ಪನ್ನ ಮಾಡುತ್ತದೆ.

ಶೀರ್ಷ ರೇಖೆಯ ಕಡೆಗೆ ಕ್ರಮವಾಗಿ ಬಾಗುತ್ತಾ ಹೋಗುವ ಹೃದಯ ರೇಖೆ ಮಧ್ಯಸ್ಥಾನವನ್ನು ಸಂಕುಚಿತಗೊಳಿಸುತ್ತಾ ಹೋದರೆ ಮತ್ತು ಚಂದ್ರಕ್ಷೇತ್ರ ಉಚ್ಚವಾಗಿ ಮತ್ತು ಅಗಲವಾಗಿದ್ದರೆ ಅಂತಹ ವ್ಯಕ್ತಿ ಕಪಟ ಮಾತಾಡುತ್ತಾನೆ. ಇಂತಹ ವ್ಯಕ್ತಿ ಹೃದಯದಿಂದ ನೀಚನಾಗಿರುತ್ತಾನೆ. ಇಂತಹ ವ್ಯಕ್ತಿ ಹೇಳುವುದಕ್ಕೂ ಮಾಡುವುದಕ್ಕೂ ಅಜಗಜಾಂತರ ವ್ಯತ್ಯಾಸವಿರುತ್ತದೆ.

ಶೀರ್ಷ ರೇಖೆ ಜೀವನದ ಆರಂಭದಿಂದ ಉದ್ಭವವಾಗದೆ ಗುರುಕ್ಷೇತ್ರದಿಂದ ಆರಂಭವಾಗಿದ್ದರೆ ಮತ್ತು ಅದರ ಜೊತೆಯಲ್ಲಿ ಹೃದಯರೇಖೆ ದೋಷ ಉಳ್ಳದ್ದಾಗಿ ಅಲೆಅಲೆಯಂತೆ ಅಥವಾ ಸರಪಳಿಯಂತೆ ಇದ್ದರೆ ವಿವಾಹ ಮತ್ತು ಪ್ರೇಮದ ವಿಷಯದಲ್ಲಿ ನಿರಾಶೆ ದೊರೆಯುತ್ತದೆ. ಇಂತಹ ವ್ಯಕ್ತಿ ನಿಂದೆ ಮತ್ತು ಅಪಮಾನಕ್ಕೆ ಗುರಿಯಾಗಬೇಕಾಗುತ್ತದೆ.

ನಿರ್ದೋಷ ಹೃದಯರೇಖೆಯ ಜೊತೆಯಲ್ಲಿ ಶೀರ್ಷ ರೇಖೆ ಶುಭ್ರವಾಗಿದ್ದರೆ ಮತ್ತು ಜೀವನ ರೇಖೆಯ ಮುಕ್ತಾಯದ ಸ್ಥಾನ್ನದ ಮೇಲೆ ತ್ರಿಕೋನ ಉಂಟಾಗಿದ್ದರೆ ವ್ಯಕ್ತಿ ವ್ಯವಹಾರ ಕುಶಲನಾಗಿರುತ್ತಾನೆ. ಉದಾರತೆಯ ಕಾರಣದಿಂದಾಗಿ ಜನ ನಾಯಕನಾಗಿರುತ್ತಾನೆ.

ಹೃದಯರೇಖೆಯ ಯಾವುದಾದರೂ ಶಾಖೆ ಚಂದ್ರ ರೇಖೆಯ ಮೇಲೆ ತಲುಪಿ ನಕ್ಷತ್ರದ ಆಕಾರ ಗ್ರಹಣ ಮಾಡಿಕೊಂಡಿದ್ದರೆ ಅಥವಾ ಯಾವುದಾದರೂ ನಕ್ಷತ್ರ ಚಿಹ್ನೆಯನ್ನು ಸ್ಪರ್ಶ ಮಾಡಿದರೆ ಅಂತಹ ವ್ಯಕ್ತಿ ಅಧಿಕ ಕಾಮುಕನಾಗಿರುತ್ತಾನೆ.

ಕೆಲವು ಶಾಖೆಗಳು ಒಂದು ವೇಳೆ ಶೀರ್ಷ ರೇಖೆಯ ಕಡೆಗೆ ಕೆಳಭಾಗದಲ್ಲಿ ಹೋಗುತ್ತಿದ್ದರೆ ಯಾವುದಾದರೂ ಸ್ತ್ರೀಯ ಪ್ರೇಮ ಸಂಬಂಧದಲ್ಲಿ ತೊಂದರೆಯೇ ಉತ್ಪನ್ನವಾಗುತ್ತದೆ. ನಂಬಿಕೆಗೆ ಪೆಟ್ಟು ಬೀಳುತ್ತದೆ ಮತ್ತು ಒಂದು ವೇಳೆ ಯಾವುದಾದರೂ ಸ್ತ್ರೀಯ ಕೈಯಲ್ಲಿ ಇಂತಹ ಚಿಹ್ನೆ ಇದ್ದರೆ ಪ್ರೇಮಿ ಅವಳನ್ನು ಗೌರವಿಸುವುದಿಲ್ಲ.

ಹೃದಯ ರೇಖೆಯ ಮಧ್ಯದಲ್ಲಿ ಎರಡು ನಿಂತಿರುವ ರೇಖೆಗಳು ಕತ್ತರಿಸಿದರೆ ಅಶುಭ ಫಲ ದೊರೆಯುವುದೆಂದು ತಿಳಿದುಕೊಳ್ಳಬೇಕು. ಅವುಗಳಲ್ಲೂ ಒಂದು ದೊಡ್ಡ ರೇಖೆ ಮತ್ತು ಒಂದು ಚಿಕ್ಕ ರೇಖೆ ಇದ್ದರೆ ಬಿದ್ದು ಪೆಟ್ಟು ಉಂಟಾಗುತ್ತದೆ ಮತ್ತು ಎರಡು ರೇಖೆಗಳು ಸಮಾನವಾಗಿದ್ದರೆ ಗಂಭೀರ ದುರ್ಘಟನೆ ವ್ಯಕ್ತವಾಗುತ್ತದೆ.

ಹೃದಯ ರೇಖೆಯ ಪ್ರಾರಂಭಿಕ ಸ್ಥಾನದ ಮೇಲೆ ಯಾವುದಾದರೂ ವಕ್ರ ಶಾಖೆ ಅಂಕುಶದ ಆಕಾರ ಉಂಟು ಮಾಡಿದರೆ ಯಾತ್ರೆಯಲ್ಲಿ ಖಂಡಿತ ದುರ್ಘಟನೆ ಉಂಟಾಗುತ್ತದೆ. ಈ ಅಂಕುಶವನ್ನು ಕೆಲವು ಸೂಕ್ಷ್ಮರೇಖೆಗಳು ಕತ್ತರಿಸಿದರೆ ಅದರ ಪ್ರಭಾವ ಗಂಭೀರವಾಗುವುದಿಲ್ಲ ಸಂಕಟ ಹಾಗೆಯೇ ತೊಲಗಿ ಹೋಗುತ್ತದೆ.

ಚಂದ್ರನಿಂದ ಹೊರಟಿರುವ ಎರಡು ನೇರ ಸಮಾನಾಂತರ ರೇಖೆಗಳು ಹೃದಯ ರೇಖೆಯನ್ನು ಸ್ಪರ್ಶ ಮಾಡಿದರೆ ಇದು ಮೃತ್ಯುವಿನವರೆಗಿನ ಸಂಕೇತ ನೀಡುತ್ತದೆ. ಇಂತಹ ವ್ಯಕ್ತಿ ರಕ್ತ ಸಂಚಾರದಿಂದ ಉತ್ಪನ್ನವಾದ ರೋಗಿಯಾಗಿದ್ದರೆ ಕೊನೆಗೆ ಮೃತ್ಯುವನ್ನು ಪಡೆದುಕೊಳ್ಳುತ್ತಾನೆ.

ಚಂದ್ರ ಕ್ಷೇತ್ರದಿಂದ ನಡೆದು ಯಾವುದಾದರೂ ಅಲೆಯಂತಿರುವ ರೇಖೆ ಹೃದಯ ರೇಖೆಯನ್ನು ಸ್ಪರ್ಶಿಸಿದರೆ ಮನುಷ್ಯನಲ್ಲಿ ಹಿಂಸೆಯ ಭಾವನೆ ಪ್ರಧಾನವಾಗಿರುತ್ತದೆಂದು ತಿಳಿದುಕೊಳ್ಳಬೇಕು. ಇಂತಹ ವ್ಯಕ್ತಿ ಕ್ರೂರನೂ, ದುಷ್ಟನೂ, ವ್ಯಭಿಚಾರಿಯೂ ಆಗುತ್ತಾನೆ.

ಹೃದಯರೇಖೆ ಒಂದು ವೇಳೆ ಶನಿ ಪರ್ವತದ ಕೆಳಗೆ ಛಿದ್ರ ಛಿದ್ರವಾಗಿದ್ದರೆ ಮತ್ತು ಅವು ಒಂದರ ಮೇಲೆ ಮತ್ತೊಂದು ಹತ್ತಿದ್ದರೆ ಗಂಭೀರ ರೋಗ ಉಂಟಾಗುತ್ತದೆ ಹಾಗೂ ಶನಿಯ ಕೆಳಗೆ ಛಿದ್ರ ಛಿದ್ರವಾಗಿದ್ದರೆ ಮದುವೆ ನಿಶ್ಚಿತಾರ್ಥ ಮುರಿದುಹೋಗುತ್ತದೆ. ಸೂರ್ಯ ಪರ್ವತದ ಕೆಳಗೆ ಛಿದ್ರ ಛಿದ್ರವಾಗಿದ್ದರೆ ಅಸ್ಥಿರ ಮನಸ್ಸಿನಿಂದ ಮದುವೆ ಸಂಬಂಧ ಮುರಿದುಹೋಗುತ್ತದೆ ಮತ್ತು ಬುಧನ ಕೆಳಗೆ ಛಿದ್ರ ಛಿದ್ರವಾಗಿದ್ದರೆ ವ್ಯಕ್ತಿ ತನ್ನ ಲೋಲುಪತೆಯ ಕಾರಣದಿಂದ ಮದುವೆ ಸಂಬಂಧವನ್ನು ಮುರಿಯುತ್ತಾನೆ.

ಉದ್ದವಾದ ಮಸ್ತಿಷ್ಕ ರೇಖೆ ಮತ್ತು ಇಕ್ಕಟ್ಟಾದ ಚತುರ್ಭುಜದ ಜೊತೆಯಲ್ಲಿ ನಿಕೃಷ್ಟ ರೇಖೆ ಜೊತೆಯಲ್ಲಿ ಚಪ್ಪಟೆಯಾದ ಬೆರಳುಗಳು ಹಾಗೂ ಹೆಬ್ಬೆರಳಿನ ಪರ್ವ ಚಿಕ್ಕದಾಗಿದ್ದರೆ ವ್ಯಕ್ತಿ ಅಸ್ಥಿರ ವೃತ್ತಿಯವನಾಗುತ್ತಾನೆ.

ಚೆನ್ನಾಗಿ ಸ್ಪಷ್ಟವಾಗಿರುವ ಉದ್ದವಾದ ಹೃದಯ ರೇಖೆಯು ಉಗಮಸ್ಥಾನದ ಮೇಲೆ ಜೀವನ ಮತ್ತು ಮಸ್ತಿಷ್ಕ ರೇಖೆಯೊಂದಿಗೆ ಸೇರಿಕೊಂಡಿದ್ದರೆ, ಮಸ್ತಿಷ್ಕ ರೇಖೆ ಶಾಖಾ ಸಮೂಹದಲ್ಲಿ ಸಮಾಪ್ತಿಗೊಂಡಿದ್ದರೆ ಮತ್ತು ಅದರ ಒಂದು ಶಾಖೆ ಚಂದ್ರಪರ್ವತದ ಕಡೆಗೆ ಬಾಗಿದ್ದರೆ ಮತ್ತು ಮತ್ತೊಂದು ಶಾಖೆ ತನ್ನ ದಾರಿಯಲ್ಲಿ ಮುಂದುವರೆದಿದ್ದರೆ ಅಥವಾ ಹೃದಯ ರೇಖೆಯೊಂದಿಗೆ ಸೇರಿಕೊಂಡಿದ್ದರೆ ವ್ಯಕ್ತಿ ಆವೇಶದಲ್ಲಿ ಆತ್ಮಹತ್ಯೆಯನ್ನೂ ಸಹ ಮಾಡಿಕೊಳ್ಳುತ್ತಾನೆ.

ಹೃದಯ ರೇಖೆಯಿಂದ ಒಂದು ರೇಖೆ ಭಾಗ್ಯರೇಖೆಯು ಕಡೆಗೆ ಹೋಗಿದ್ದರೆ ಮತ್ತು ಭಾಗ್ಯರೇಖೆ ಮಧ್ಯದಲ್ಲಿ ಕತ್ತರಿಸಿಹೋಗಿದ್ದರೆ ವೈಧವ್ಯಯೋಗ ಪ್ರಬಲವಾಗಿರುತ್ತದೆಂದು ತಿಳಿದುಕೊಳ್ಳಬೇಕು.

ಎರಡೂ ಕೈಗಳಲ್ಲಿ ಭಾಗ್ಯರೇಖೆಯು ಜೊತೆ ಜೊತೆಯಲ್ಲಿ ಹೃದಯದ ಮೇಲೆ ದ್ವೀಪದ ಚಿಹ್ನೆ ಇದ್ದರೆ ವ್ಯಕ್ತಿ ಪೂರ್ಣ ವ್ಯಭಿಚಾರಿಯಾಗುತ್ತಾನೆ.

ಹೃದಯ ರೇಖೆಯು ಅಂತಿಮ ಕೊನೆ ಎರಡು ಭಾಗಗಳಾಗಿ ಹಂಚಲ್ಪಟ್ಟಿದ್ದರೆ ಅಂತಹ ವ್ಯಕ್ತಿ ಸಫಲ ನ್ಯಾಯಾಧೀಶ ಅಥವಾ ಸಾಮಾಜಿಕ ಮುಖಂಡನಾಗುತ್ತಾನೆ.

ಬುಧ ಪರ್ವತದ ಕೆಳಗೆ ಬುಧ ಚಿಹ್ನೆ ಇದ್ದರೆ ವ್ಯಕ್ತಿ ಚಿಕಿತ್ಸಾ ಕ್ಷೇತ್ರದಲ್ಲಿ ಉನ್ನತಿ ಪಡೆಯುತ್ತಾನೆ.

ಒಂದು ವೇಳೆ ಹೃದಯ ರೇಖೆ ಮತ್ತು ಭಾಗ್ಯ ರೇಖೆ ಎರಡರ ಮೇಲೂ ದ್ವೀಪದ ಚಿಹ್ನೆ ಕಾಣಸಿಕೊಂಡರೆ ವ್ಯಕ್ತಿ ವ್ಯಭಿಚಾರಿಯಾಗುತ್ತಾನೆ.

ಒಂದು ವೇಳೆ ಹೃದಯ ರೇಖೆಯು ಮೇಲೆ ತ್ರಿಕೋನದ ಚಿಹ್ನೆ ಇರದೆ ಹೋದರೆ ವ್ಯಕ್ತಿ ವಿಶ್ವವ್ಯಾಪಿ ಖ್ಯಾತಿಯನ್ನು ಪಡೆದುಕೊಳ್ಳುತ್ತಾನೆ.

ಒಂದು ವೇಳೆ ಕೆಲವು ಡೊಂಕು ರೇಖೆಗಳು ಹೃದಯ ರೇಖೆಯನ್ನು ಅನೇಕ ಸ್ಥಳಗಳಲ್ಲಿ ಕತ್ತರಿಸಿದರೆ ಅಂತವನಿಗೆ ಜೀವನದಲ್ಲಿ ಅನೇಕ ರೀತಿಯ ರೋಗಗಳು ಉಂಟಾಗುತ್ತವೆ.

ತೋರು ಬೆರಳು ಮತ್ತು ಮಧ್ಯದ ಬೆರಳಿನಿಂದ ಆರಂಭವಾದ ಹೃದಯ ರೇಖೆ ಪರಿಶ್ರಮಿ ವ್ಯಕ್ತಿತ್ವದ ಪರಿಚಯ ನೀಡುತ್ತದೆ.

ಸುಂದರವಾದ ಸ್ಪಷ್ಟವಾದ ನಿರ್ದೋಷವಾದ ಹೃದಯ ರೇಖೆ ಮತ್ತು ಸುಂದರ, ಸ್ಪಷ್ಟ, ನಿರ್ದೋಷ ಶನಿ ಕ್ಷೇತ್ರ ಇದ್ದರೆ ವ್ಯಕ್ತಿ ಶತಾಯುಷಿಯಾಗುತ್ತಾನೆ.

## 4. ಸೂರ್ಯ ರೇಖೆ (Sun – Line)

ಚಮತ್ಕಾರಿಕ ರೇಖೆಗಳಲ್ಲಿ ಸೂರ್ಯ ರೇಖೆಯೂ ಒಂದಾಗಿದೆ. ಇದೊಂದು ವೇಳೆ ಉದ್ದವಾಗಿದ್ದರೆ ಚಂದ್ರ ಪರ್ವತದ ಮೇಲು ಭಾಗದಿಂದ ಆರಂಭವಾಗುತ್ತದೆ ಮತ್ತು ಒಂದು ವೇಳೆ ಚಿಕ್ಕದಾಗಿದ್ದರೆ ಕೈನಲ್ಲಿ ಎತ್ತರವಾಗಿರುತ್ತದೆ ಮತ್ತು ಸೂರ್ಯ ಪರ್ವತದ ಕಡೆಗೆ ಹೋಗುತ್ತಿದ್ದರೆ ಸೂರ್ಯನ ಕೇಂದ್ರೀಯ ಗುಣ ಮತ್ತು ಯೋಗ್ಯತೆಗಳನ್ನು ಪ್ರಕಟಗೊಳಿಸುತ್ತದೆ.

ಈ ರೇಖೆಯ ಉಗಮ ಅನೇಕ ಕೈಗಳಲ್ಲಿ ಅನೇಕ ಸ್ಥಾನಗಳಲ್ಲಿ ಆಗುತ್ತದೆಂದು ನಂಬಲಾಗಿದೆ. ಈ ರೇಖೆ ಎಲ್ಲೇ ಆರಂಭವಾದದ್ದೂ ಸಹ ಅಂತ್ಯ ಸೂರ್ಯ ಪರ್ವತದ ಮೇಲೆಯೇ ಆಗುತ್ತದೆ.

ಸೂರ್ಯ ರೇಖೆ ಜೀವನದ ಸಫಲತೆ ಅಸಫಲತೆ, ಕೀರ್ತಿ–ಅಪಕೀರ್ತಿ, ಗುಣ – ಅವಗುಣಗಳ ಪರಿಚಯ ನೀಡುತ್ತದೆ.



ಅನೇಕ ಕೈಗಳಲ್ಲಿ ಈ ರೇಖೆಯ ಆರಂಭ ಶುಕ್ರನಿಂದ ಮತ್ತು ಕೆಲವು ಕೈಗಳಲ್ಲಿ ಜೀವನ ರೇಖೆಯ ಮುಕ್ತಾಯ ಸ್ಥಾನದಲ್ಲಿ ಕಂಡುಬರುತ್ತವೆ. ಇದರ ಆರಂಭ ಮಂಗಳ ಪರ್ವತದಿಂದಲೂ ಆಗುತ್ತದೆಂದು ನಂಬಲಾಗಿದೆ. ಮಂಗಳದಿಂದ ಆರಂಭವಾಗಿ ಈ ರೇಖೆ ಹೃದಯ ರೇಖೆಯನ್ನು ಕತ್ತರಿಸುತ್ತಾ ಸೂರ್ಯ ಪರ್ವತದವರೆಗೆ ತಲುಪುತ್ತದೆ. ಹಲವು ಕೈಗಳಲ್ಲಿ ಈ ರೇಖೆ ಮಸ್ತಿಷ್ಕ ರೇಖೆಯಿಂದ ಆರಂಭವಾಗಿ ಸೂರ್ಯ ಪರ್ವತವನ್ನು ಸ್ಪರ್ಶಿಸುತ್ತದೆ. ಇದರ ಉಗಮಸ್ಥಾನ ಹೃದಯ ರೇಖೆಯೂ ಸಹ ಆಗಿದೆ

ಮತ್ತು ಅಲ್ಲಿಂದ ಸೂರ್ಯ ಪರ್ವತದವರೆಗೆ ಹೋಗುತ್ತದೆ.

ಅನೇಕ ಬಾರಿ ಹರ್ಷಲ್ ಕ್ಷೇತ್ರದಿಂದ ಆರಂಭವಾಗಿ ಮಣಿಕಟ್ಟಿನಿಂದ ಮತ್ತು ಕೇತುವಿನಿಂದಲೂ ಸಹ ಆರಂಭವಾಗಿ ಸೂರ್ಯ ಪರ್ವತದವರೆಗೆ ತಲುಪುತ್ತದೆ. ಇದರ ಆರಂಭ ರಾಹುವೂ ಸಹ ಆಗಿದೆ.

ಮಣಿಕಟ್ಟಿನಿಂದ ಆರಂಭವಾಗಿ ಸೂರ್ಯನವರೆಗೆ ಯಾವ ಅಡಚಣೆಯೂ ಇಲ್ಲದೆ ತಲುಪುವ ರೇಖೆ ಜನ, ಧನ, ಐಶ್ವರ್ಯ, ಪ್ರಭುತ್ವ ನೀಡುವುದರಲ್ಲಿ ಗೌರವ ಮತ್ತು ಅಧಿಕಾರ ನೀಡುವುದರಲ್ಲಿ ಪೂರ್ಣ ಸಹಾಯಕವಾಗಿದೆ.

ಎರಡು ಕೈಗಳಲ್ಲಿ ಸುಸ್ಪಷ್ಟ ಸೂರ್ಯರೇಖೆ ಜೀವನದಲ್ಲಿ ಪೂರ್ಣ ಸಫಲತೆಯನ್ನು ದೊರಕಿಸಿ ಕೊಡುತ್ತದೆ. ಅಲ್ಲಿಯೇ ಉದ್ದವಾದ ಮತ್ತು ಕತ್ತರಿಸಲ್ಪಡದ ರೇಖೆ ಧನ, ಸಂಪತ್ತು ಮತ್ತು ಐಶ್ವರ್ಯವನ್ನು ನೀಡುತ್ತದೆ. ಆಳವಾದ ಅಂಗೈ ಮತ್ತು ತಿರುಗಿಕೊಂಡಿರುವ ಬೆರಳುಗಳ ಜೊತೆಯಲ್ಲಿ ನಿರ್ದೋಷ ಸೂರ್ಯರೇಖೆ ಪ್ರತಿಭೆಯನ್ನು ಮತ್ತು ಯೋಗ್ಯತೆಯನ್ನು ದುರುಪಯೋಗ ಮಾಡಿಸುತ್ತದೆ. ಸಪ್ಪಗಿರುವ ತೆಳು ಬಣ್ಣದ ಸೂರ್ಯರೇಖೆ ಕಲಾತ್ಮಕ ಪ್ರತಿಭೆ ನೀಡುತ್ತದೆ, ಆದರೆ ಶಕ್ತಿಯ ಅಭಾವದಲ್ಲಿ ವ್ಯಕ್ತಿ ಅದರ ಸದುಪಯೋಗ ಪಡೆಯಲು ಸಾಧ್ಯವಿಲ್ಲ. ಎರಡೂ ಕೈಗಳಲ್ಲಿ ಉಚ್ಚ ಬೃಹಸ್ಪತಿ ಮತ್ತು ಸೂರ್ಯ ರೇಖೆಗಳು ಸಮಾಜದ ಉಚ್ಚಮಟ್ಟದ ಜನಗಳಿಂದ, ಶ್ರೀಮಂತರಿಂದ ಸಂಪರ್ಕ ಬೆಳೆಸುವಂತೆ ಮಾಡುತ್ತದೆ.

ಸೂರ್ಯ ರೇಖೆ ಭಾಗದ ಪ್ರಬಲ ಮತ್ತು ಉಂಗುರದ ಬೆರಳು ತೋರು ಬೆರಳಿಗಿಂತ ದೊಡ್ಡದು ಮತ್ತು ಮಧ್ಯದ ಬೆರಳಿಗೆ ಸಮಾನವಾಗಿದ್ದರೆ ಅಂತಹ ವ್ಯಕ್ತಿ ಜೂಜುಕೋರ ಮತ್ತು ಸಟ್ಟಾ ಆಡುವವನಾಗುತ್ತಾನೆ. ಇಷ್ಟಾದರೂ ಸಹ ಇವನು ಶ್ರೀಮಂತನು, ಸದ್ಗುಣಿಯೂ ಮತ್ತು ವಿಪತ್ತನ್ನು ಎದುರಿಸುವುದರಲ್ಲಿ ದೃಢನಾಗಿರುತ್ತಾನೆ. ಭಾಗ್ಯರೇಖೆ ಒಂದು ವೇಳೆ ತಿರುಗಿಕೊಂಡಿದ್ದರೆ ಮೇಲೆ ತಿಳಿಸಿರುವ ಗುಣಗಳಲ್ಲಿ ವೃದ್ಧಿಯಾಗುತ್ತದೆ.

ಉದ್ದವಾದ ಸೂರ್ಯರೇಖೆ ಉಳ್ಳವನು ಶ್ರೀಮಂತನಾಗಿರುತ್ತಾನೆ. ಯಾವುದಾದರೂ ಬೇರೆ ರೇಖೆಯಿಂದ ಸೂರ್ಯ ರೇಖೆ ಕತ್ತರಿಸಲ್ಪಟ್ಟಿದ್ದರೆ ಅಥವಾ ಹರಕು ಮುರುಕಾಗಿದ್ದರೆ ಅಂತಹ ವ್ಯಕ್ತಿ ನಿರ್ಧನ ಮತ್ತು ದುಂದು ವೆಚ್ಚ ಮಾಡುವವನು ಆಗಿರುತ್ತಾನೆ.

ಸೂರ್ಯ ರೇಖೆ ಮಧ್ಯಭಾಗದಲ್ಲಿ ಎರಡರಷ್ಟಿರುವಂತೆ ಕಾಣಿಸಿದರೆ

ಆ ರೇಖೆ ಯಾವ ವ್ಯಯಸ್ಸಿನ ಸ್ಥಾನದಲ್ಲಿ ಎರಡರಷ್ಟಿರುವುದೋ ಅದೇ ಸಮಯದಲ್ಲಿ ಅವನಿಗೆ ಲಾಟರಿ, ಸಟ್ಟಾ ಮುಂತದಾವುಗಳಿಂದ ಅಕಸ್ಮಾತ್ ಧನಲಾಭ ಉಂಟಾಗುತ್ತದೆ.

ಮಂಗಳ ಸ್ಥಾನದ ಅಕ್ಕ–ಪಕ್ಕ ಪ್ರಾರಂಭವಾಗಿ ಒಂದು ವೇಳೆ ರೇಖೆ ಸ್ವಲ್ಪ ಮುಂದೆ ಹೋಗಿ ಮಧ್ಯಮವಾಗಿದ್ದರೆ ವ್ಯಕ್ತಿ ಜೀವನದಲ್ಲಿ ಬಹಳಷ್ಟು ದುಃಖ, ವಿಪತ್ತು ಮತ್ತು ಕಷ್ಟವನ್ನು ಪಡೆಯುತ್ತಾನೆ. ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಗಂಡಾಂತರವನ್ನು ಎದುರಿಸುತ್ತಾನೆ. ಯಾವುದೇ ಸ್ಥಳದಿಂದ ಸೂರ್ಯರೇಖೆ ಕತ್ತರಿಸಿಹೋಗುವುದು ವಿಪತ್ತಿನ ಕಾರಕವಾಗಿರುತ್ತದೆ.

ಯಾವ ವ್ಯಕ್ತಿಯ ಸೂರ್ಯರೇಖೆ, ಭಾಗ್ಯರೇಖೆ, ಮಸ್ತಿಷ್ಕ ರೇಖೆ ಈ ಮೂರೂ ನಿರ್ದೋಷವಾಗಿ, ಶಕ್ತಿಯುತವಾಗಿರುವುದೋ ಆ ವ್ಯಕ್ತಿ ಮಹಾ ಅದೃಷ್ಟಶಾಲಿಯೂ, ಶ್ರೀಮಂತನೂ, ಪ್ರಭಾವಶಾಲಿಯೂ ಆಗುತ್ತಾನೆ.

ಹೃದಯ ರೇಖೆಯಿಂದ ಆರಂಭವಾಗುವ ಸೂರ್ಯರೇಖೆಯ ಪ್ರಭಾವದಿಂದ 56 ನೇ ವರ್ಷದ ಆಯುಸ್ಸಿನಲ್ಲಿ ಭಾಗ್ಯೋದಯವಾಗುತ್ತದೆ ಮತ್ತು ಉನ್ನತಿಯ ಕಡೆಗೆ ಅಗ್ರಸರನಾಗುತ್ತಾನೆ. ಇದಕ್ಕೆ ಹೃದಯ ರೇಖೆಯ ಮೇಲಿರುವ ಸೂರ್ಯ ರೇಖೆ ಸ್ಪಷ್ಟವಾಗಿರಬೇಕು ಮತ್ತು ಬೇರೆ ರೇಖೆಗಳು ಇರಬಾರದು. ಸೂರ್ಯರೇಖೆ ನಿರ್ಬಲವಾಗಿ ಅಥವಾ ದೋಷ ಪೂರ್ಣವಾಗಿದ್ದರೆ ವ್ಯಕ್ತಿ ಜೀವನದ ಅಂತಿಮ ಅವಸ್ಥೆಯಲ್ಲಿ ಕಷ್ಟದಲ್ಲಿ ಕಳೆಯಬೇಕಾಗುತ್ತದೆ.

ಮಣಿಕಟ್ಟಿನ ಸಮೀಪದಲ್ಲಿ ನಡೆಯುವ ಸೂರ್ಯರೇಖೆ ಅದೃಷ್ಟವನ್ನು ಅನೇಕ ಪಟ್ಟು ಹೊಳೆಯುವಂತೆ ಮಾಡುತ್ತದೆ. ಈ ರೇಖೆ ಸರ್ವಾಧಿಕ ಆರಂಭವಾಗುತ್ತದೆ.

ಒಂದು ವೇಳೆ ಶುಕ್ರ ಮತ್ತು ಮಂಗಳದ ಪರ್ವತದಿಂದ ಹೊರಟಿರುವ ರೇಖೆಗಳಿಂದ ಸೂರ್ಯ ರೇಖೆ ಛೇದನಗೊಂಡರೆ ದುಷ್ಟ ಸ್ವಭಾವದ ಸಂಬಂಧಿಯಿಂದ ಇಂತಹ ವ್ಯಕ್ತಿಯ ಸಂಪತ್ತು ಹಣ ನಾಶವಾಗುತ್ತದೆ.

ಸೂರ್ಯರೇಖೆ ಚಂದ್ರನ ಸ್ಥಾನದಿಂದ ನಡೆದರೆ ಅಂತಹ ಮನುಷ್ಯನ ಉನ್ನತಿ ಖಂಡಿತಾ ಆಗುತ್ತದೆ. ಆದರೆ ಉನ್ನತಿಯಲ್ಲಿ ಅನ್ಯಾಯ ಮಾಡುವ ಜನರು ಸಹಾಯಕರಾಗುತ್ತಾರೆ.

ಸೂರ್ಯ ರೇಖೆಯೊಂದಿಗೆ ಒಂದು ವೇಳೆ ಯಾವುದಾದರೂ ಬೇರೆ ರೇಖೆ ಬಂದು ಸೇರಿಕೊಂಡರೆ ಅನ್ಯ ಮಾರ್ಗದಿಂದ ಧನ ದೊರೆಯುತ್ತದೆ.

ಒಂದು ವೇಳೆ ಸೂರ್ಯರೇಖೆಯು ಯಾವುದಾದರೂ ಶಾಖೆ

ಶನಿಯನ್ನು ದಾಟಿ ಗುರು ಪರ್ವತದವರೆಗೆ ತಲುಪಿದರೆ ವ್ಯಕ್ತಿ ಉಚ್ಚಮಟ್ಟವನ್ನು ತಲುಪುತ್ತಾನೆ.

ಸೂರ್ಯ ಮತ್ತು ಹೃದಯರೇಖೆಗಳು ಇವುಗಳ ಸಂಗಮ ಸ್ಥಾನದಲ್ಲಿ ಕಪ್ಪು ಕಲೆ ಇದ್ದರೆ ವ್ಯಕ್ತಿ ಕುರುಡನಾಗುತ್ತಾನೆ.

ಸೂರ್ಯನ ಮೇಲೆ ಕ್ರಾಸ್‌ನ ಚಿಹ್ನೆ ಶುದ್ಧವಾಗಿ ಮತ್ತು ಪೂರ್ಣವಾಗಿ ಆಗಿದ್ದರೆ ವ್ಯಕ್ತಿ ಆಕಸ್ಮಾತ್ ಹಣವನ್ನು ಪ್ರಾಪ್ತಿ ಮಾಡಿಕೊಳ್ಳುತ್ತಾನೆ.

ಉಂಗುರದ ಬೆರಳಿನ ಆರಂಭದಲ್ಲಿ ಈ ರೇಖೆ ಒಂದು ವೇಳೆ ವಜ್ರದ ಆಕಾರದಲ್ಲಿದ್ದರೆ ಇದು ವ್ಯಕ್ತಿಯ ಪ್ರತಿಷ್ಠೆಯನ್ನು ವೃದ್ಧಿ ಮಾಡುತ್ತದೆ. ಒಂದು ವೇಳೆ ಕತ್ತರಿಸಿ ಹೋಗಿ ಅಥವಾ ಹರಕು ಮುರುಕಾಗಿದರೆ ಧನ ಹಾನಿ ಅವಶ್ಯ ಸಂಭವಿಸುತ್ತದೆ.

ಒಂದು ವೇಳೆ ಸೂರ್ಯರೇಖೆ ಹೃದಯ ರೇಖೆಯ ಹತ್ತಿರದಿಂದ ಆರಂಭವಾಗಿದ್ದರೆ ಮನುಷ್ಯನನ್ನು ಸರ್ವಪ್ರಿಯ ಸರಳ ಸ್ವಭಾವದವನನ್ನಾಗಿಯೂ ಮತ್ತು ಉದಾರಿಯನ್ನಾಗಿಯೂ ಆಗುವಂತೆ ಮಾಡಿ ಉನ್ನತಿಯ ಶಿಖರಕ್ಕೆ ತಲುಪಿಸಿರುತ್ತದೆ.

ಉಂಗುರದ ಬೆರಳು ಕಿರುಬೆರಳಿಗಿಂತ ಹೆಚ್ಚು ಉದ್ದ ಮತ್ತು ಮಧ್ಯದ ಬೆರಳಿನ ಸಮಕ್ಕೆ ಇದ್ದರೆ ವ್ಯಕ್ತಿ ಜೂಜಾಡಿ ಧನನಾಶ ಮಾಡುತ್ತಾನೆ.

ಎರಡೂ ಕೈಗಳಲ್ಲಿ ಇಕ್ಕಟ್ಟಾಗಿ, ಆಳವಾಗಿ ಮತ್ತು ನೇರವಾಗಿ ಮುರಿಯದ ಸೂರ್ಯ ಪರ್ವತದ ಮೇಲೆ ಹತ್ತುವ ಸೂರ್ಯ ರೇಖೆ ಧನ ಸಂಪತ್ತು ನೀಡುತ್ತದೆ.

ಸೂರ್ಯ ರೇಖೆ ಎರಡೂ ಕೈಗಳಲ್ಲಿ ಇದ್ದು, ಉದ್ದವಾದ, ಇಕ್ಕಟ್ಟಾದ, ವಕ್ರ ಮಾನಸಿಕ ರೇಖೆ ಮತ್ತು ಎರಡನೇ ಮೂರನೇ ರೇಖೆಗಳು ಸುಮಾರು ಒಂದೇ ಉದ್ದಕ್ಕೆ ಇದ್ದರೆ ಅಂತಹ ವ್ಯಕ್ತಿಯೂ ಸಹ ಜೂಜಾಡುತ್ತಾನೆ.

ವಿವಾಹ ರೇಖೆಯಿಂದ ಕತ್ತರಿಸಲ್ಪಟ್ಟ ಸೂರ್ಯ ರೇಖೆ ಅನುಪಯುಕ್ತ ವಿವಾಹದ ಕಾರಣದಿಂದಾಗಿ ಸಾಮಾಜಿಕ ಸ್ಥಾನವನ್ನು ಬೀಳಿಸುತ್ತದೆ.

ಚತುರ್ಭುಜದ ಒಳಗೆ ಅಡ್ಡ ಮತ್ತು ಮುರಿದಿದ್ದರೆ ಕಲೆಯ ಕ್ಷೇತ್ರದಲ್ಲಿ ಗೌರವ ದೊರೆಯುತ್ತದೆ. ಆದರೆ ಬಹಳ ಸಂಘರ್ಷ ಮತ್ತು ಅನೇಕ ಬಾರಿಯ ಅಸಫಲತೆಯ ನಂತರ ಕೊನೆಗೆ ಸಫಲತೆ ದೊರೆಯುತ್ತದೆ.

ಹೃದಯ ರೇಖೆಯ ಪ್ರಾರಂಭದಲ್ಲಿ ತ್ರಿಶೂಲದಂತಹ ಶಾಖಾ ಸಮೂಹವಿದ್ದರೆ ವ್ಯಕ್ತಿ ಕೀರ್ತಿ, ಧನ, ಐಶ್ವರ್ಯಗಳನ್ನು ಬಹಳ ಪ್ರಯಾಸದ ನಂತರ ಪಡೆದುಕೊಳ್ಳುತ್ತಾನೆ.

ಚೆನ್ನಾಗಿರುವ ಸೂರ್ಯ ರೇಖೆಯ ಜೊತೆಯಲ್ಲಿ ಎರಡು ಅಲೆಗಳ ರೀತಿಯ ಅನಿಯಮಿತ ರೇಖೆಗಳು ಸೂರ್ಯ ಪರ್ವತದ ಮೇಲೆ ಇದ್ದರೆ ವ್ಯಕ್ತಿಯನ್ನು ಪಥಭ್ರಷ್ಟಗೊಳಿಸಿ ಅವಮಾನವಾಗುವಂತೆ ಮಾಡುತ್ತದೆ.

ಒಂದು ಉದ್ದದ ಮೂರು ಶಾಖೆಗಳಲ್ಲಿ ಒಂದು ಕೊನೆ ಬುಧ ಪರ್ವತದ ಕಡೆಗೆ ಮತ್ತೊಂದು ಕೊನೆ ಶನಿ ಪರ್ವತದ ಕಡೆಗೆ ಇದ್ದರೆ ವ್ಯಕ್ತಿ ಕೀರ್ತಿ, ಹಣ, ಪ್ರಶಂಸೆ ಪ್ರಾಪ್ತಿ ಮಾಡಿಕೊಳ್ಳುತ್ತಾನೆ.

ಸೂರ್ಯ ರೇಖೆಯ ಕೊನೆಯಲ್ಲಿ ನಕ್ಷತ್ರದ ಚಿಹ್ನೆ ಇದ್ದರೆ ವ್ಯಕ್ತಿಗೆ ಅಂತರರಾಷ್ಟ್ರೀಯ ಕೀರ್ತಿ, ಗೌರವ ದೊರೆಯುತ್ತದೆ.

ಸೂರ್ಯ ರೇಖೆಯ ಆರಂಭ ಮತ್ತು ಅಂತ್ಯದಲ್ಲಿ ನಕ್ಷತ್ರ ಚಿಹ್ನೆ ಇದ್ದರೆ ಅತುಲ ಐಶ್ವರ್ಯ ನೀಡುತ್ತದೆ.

ಸೂರ್ಯರೇಖೆ ಇಲ್ಲದ ಕೈಗೆ ಜೀವನದಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿಯೂ ಅಸಫಲತೆಯನ್ನು ನೀಡುತ್ತದೆ. ಒಂದು ವೇಳೆ ಹೃದಯ ರೇಖೆಯಿಂದ ಹೊರಟಿರುವ ಯಾವುದಾದರೂ ಶಾಖೆ ತ್ರಿಶೂಲದಂತೆ ಮಾರ್ಪಟ್ಟು ಸೂರ್ಯ ರೇಖೆಯನ್ನು ಸ್ಪರ್ಶಿಸಿದರೆ ಅಂತಹ ವ್ಯಕ್ತಿ ತನ್ನ ಜೀವನದಲ್ಲಿ ಸ್ವಪ್ರಯತ್ನಗಳಿಂದಲೇ ಸಫಲತೆಯನ್ನು ಪಡೆದುಕೊಳ್ಳುತ್ತಾನೆ.

ಸರಪಳಿಯುಕ್ತ ಸೂರ್ಯರೇಖೆ ಜೀವನದಲ್ಲಿ ಬಾರಿ–ಬಾರಿಗೂ ಅಸಫಲತೆಯನ್ನು ಕೊಡುತ್ತದೆ. ಒಂದು ವೇಳೆ ಉಂಗುರದ ಬೆರಳು ವಕ್ರವಕ್ರವಾಗಿದ್ದರೆ ಆದರೆ ಸೂರ್ಯ ರೇಖೆ ಸ್ಪಷ್ಟವಾಗಿದ್ದರೆ ಅಂತಹ ವ್ಯಕ್ತಿಗೆ ಅಪರಾಧ ಪೂರ್ಣ ಕಾರ್ಯಗಳಿಂದ ಕೀರ್ತಿ ದೊರೆಯುತ್ತದೆ.

ಒಂದು ವೇಳೆ ಸೂರ್ಯ ರೇಖೆಯನ್ನು ಮೂರ್ನಾಕು ರೇಖೆಗಳು ಕತ್ತರಿಸಿದರೆ ಅಂತಹ ವ್ಯಕ್ತಿ ಜೀವನದಲ್ಲಿ ಎಂದೂ ಸಫಲತೆಯನ್ನು ಪಡೆದುಕೊಳ್ಳಲಾಗುವುದಿಲ್ಲ.

ಒಂದು ವೇಳೆ ಸೂರ್ಯರೇಖೆ ಇಲ್ಲವೆ ಇದಕ್ಕೆ ಬದಲಾಗಿ ಸೂರ್ಯಕ್ಷೇತ್ರದ ಮೇಲೆ ಚಿಕ್ಕ ಚಿಕ್ಕ ಗೀರುಗಳು ಅಥವಾ ಸೂಕ್ಷ್ಮ ರೇಖೆಗಳಿದ್ದರೆ ಅಂತಹ ವ್ಯಕ್ತಿ ತನ್ನ ವೃದ್ಧಾವಸ್ಥೆಗಾಗಿ ವಿಶೇಷ ಚಿಂತೆ ಮಾಡುತ್ತಾನೆ ಮತ್ತು ಒಂದು ವೇಳೆ ಕೈನ ಬೇರೆ ಸಂಕೇತ ಶುಭವಿಲ್ಲದೇ ಹೋದರೆ ಅಂತವನಿಗೆ ಆ ವಯಸ್ಸಿನಲ್ಲಿ ದುಃಖ, ಕಷ್ಟ ಮತ್ತು ಚಿಂತೆಯ ಜೊತೆಯಲ್ಲಿ ಜೀವನ ಕಳೆಯಬೇಕಾಗುತ್ತದೆ.

ಉದ್ದವಾದ ಸೂರ್ಯ ರೇಖೆಯ ಮೇಲೆ ಕ್ರಾಸ್‌ನ ಚಿಹ್ನೆ ಇಲ್ಲದೆ ಹೋದರೆ ಮತ್ತು ಅಂಗೈ ಬೂದು ಬಣ್ಣವಾಗಿದ್ದರೆ ಮತ್ತು ಬೆರಳುಗಳು

ತಿರುಗಿಕೊಂಡಿದ್ದರೆ ಮನುಷ್ಯ ಐಶ್ವರ್ಯವಂತನಾಗುತ್ತಾನೆ. ಆದರೆ ಚೆನ್ನಾಗಿರುವ ಸೂರ್ಯರೇಖೆಯು ಜೊತೆಯಲ್ಲಿ ಅನ್ಯ ಲಕ್ಷಣಗಳಿದ್ದರೆ ಮನುಷ್ಯನ ದಾರ್ಶನಿಕತೆಯನ್ನು ಪ್ರಕಟಿಸುತ್ತದೆ.

ಸೂರ್ಯ ರೇಖೆಯ ಮೇಲೆ ನಿಂತಿರುವ ತೊಂದರೆಯ ರೇಖೆಯಿಂದ ಶೀರ್ಷ ರೇಖೆಯ ಯಾವುದಾದರೆ ಶಾಖೆ ಸ್ಪರ್ಶ ಮಾಡಿದರೆ ಆ ವಯಸ್ಸಿನಲ್ಲಿ ಮನುಷ್ಯ ತನ್ನ ಉದ್ಯಮದಲ್ಲಿ ಸರಿಯಾದ ನಿರ್ಧಾರವನ್ನು ತೆಗೆದುಕೊಳ್ಳಲಾಗುವುದಿಲ್ಲ ಮತ್ತು ಭಾರಿ ನಷ್ಟವನ್ನು ಹೊಂದುತ್ತಾನೆ.

ಅಂಗೈನ ಮಧ್ಯದಲ್ಲಿ ಒಂದು ವೇಳೆ ರೇಖೆಗಳ ಸಂಯೋಗದಿಂದ ತ್ರಿಕೋನ ಉಂಟಾಗಿದ್ದರೆ ಮತ್ತು ಅದರ ಮಧ್ಯದಲ್ಲಿ ಕಿಡಿಯ ಚಿಹ್ನೆ ಇದ್ದರೆ ಮನುಷ್ಯ ತೊಂದರೆಯಲ್ಲಿಯೇ ಜೀವನ ಸವೆಸುತ್ತಾನೆ ಮತ್ತು ಸದಾ ಚಿಂತೆಯಿಂದ ಕೂಡಿದವನಾಗಿರುತ್ತಾನೆ.

ಸೂರ್ಯ ರೇಖೆ ತನ್ನ ಪ್ರಮಾಣಕ್ಕಿಂತ ಹೆಚ್ಚು ಅಗಲವಾಗಿದ್ದರೆ ಅಂತಹ ವ್ಯಕ್ತಿಗೆ ಮಹತ್ವದ ಕಾರ್ಯಗಳಲ್ಲಿ ಅಪಖ್ಯಾತಿ ಉಂಟಾಗುತ್ತದೆ. ಇಂತಹ ರೇಖೆಯುಳ್ಳ ವ್ಯಕ್ತಿ ಸದಾ ದರಿದ್ರನು, ಚಿಂತಿತನೂ ಮತ್ತು ಮೂರ್ಖನೂ ಆಗಿರುತ್ತಾನೆ.

ಸೂರ್ಯರೇಖೆಯ ಅಕ್ಕ ಪಕ್ಕ ಕತ್ತರಿಸುವ ರೇಖೆಗಳು ಧನಪ್ರಾಪ್ತಿಯಲ್ಲಿ ಮತ್ತು ಸಫಲತೆಯಲ್ಲಿ ವಿಘ್ನವನ್ನು ಉಂಟು ಮಾಡುತ್ತವೆಂದು ಭಾವಿಸಬೇಕು.

ಸೂರ್ಯ ರೇಖೆ ಸ್ವತಃ ಒಂದು ವೇಳೆ ಸೂರ್ಯನ ಕಡೆಗೆ ಹೋದರೆ ಉದ್ಯಮದಲ್ಲಿ ಚೆನ್ನಾಗಿ ಲಾಭ ಉಂಟಾಗಿರುತ್ತದೆ.

ಸೂರ್ಯನ ಸ್ಥಾನದಲ್ಲಿ ಹರಡಿಕೊಂಡಿರುವ ರೇಖೆಗಳು ಹರಡಿಕೊಂಡಿರುವ ವಿಚಾರಗಳ ಪರಿಚಯ ನೀಡುತ್ತವೆ.

ಒಂದು ವೇಳೆ ಮಸ್ತಿಷ್ಕ ಮತ್ತು ಸೂರ್ಯರೇಖೆ ಎರಡೂ ಉತ್ತಮ ರೀತಿಯಲ್ಲಿ ಮೇಲೆದ್ದಿರುವಂತೆ ಕಾಣಿಸಿದರೆ ಮನುಷ್ಯ ದೀರ್ಘ ದೃಷ್ಟಿಯ ವಿಚಾರ ಮಾಡುವವನಾಗಿರುತ್ತಾನೆ. ರೇಖೆಗಳು ಸ್ಪಷ್ಟವಾಗಿಲ್ಲದಿದ್ದರೆ ವ್ಯಕ್ತಿ ನಿರ್ಧನನಾಗುತ್ತಾನೆ.

ಒಂದು ವೇಳೆ ಸೂರ್ಯ ರೇಖೆ ಜೀವನ ರೇಖೆಯ ಕೆಳಗೆ ಶುಕ್ರಸ್ಥಾನದಲ್ಲಿ ಆರಂಭವಾಗಿದ್ದರೆ ಮನುಷ್ಯ ಯಾವುದಾದರೂ ಪ್ರೇಮಿ ಅಥವಾ ಪ್ರೇಯಸಿಯ ಸಹಾಯದಿಂದ ಉನ್ನತಿ ಹೊಂದುತ್ತಾನೆ. ವರದಕ್ಷಿಣೆಯಲ್ಲಿ ಚೆನ್ನಾಗಿ ಧನ ಸಿಗುತ್ತದೆ.

ಒಂದು ವೇಳೆ ಎಡಗೈನ ಸೂರ್ಯ ರೇಖೆ ಕತ್ತರಿಸಿ ಹೋಗಿದ್ದರೆ ಕುಟುಂಬ ಮತ್ತು ಧನಹಾನಿ ಉಂಟಾಗುತ್ತದೆ. ಬಲಗೈನ ಸೂರ್ಯ ರೇಖೆ ಕತ್ತರಿಸಿ ಹೋಗಿದ್ದರೆ ತನ್ನದೇ ಹಾನಿಯಾಗುತ್ತದೆ.

## 5. ಭಾಗ್ಯರೇಖೆ (Line of Fate)

ಶ್ರಮ ಶಕ್ತಿ ಮತ್ತು ಪರಿಶ್ರಮದ ಬಲದಿಂದ ಮನುಷ್ಯ ಸ್ವತಃ ತನ್ನ ಭಾಗ್ಯವನ್ನು ನಿರ್ಮಿಸಿಕೊಳ್ಳುತ್ತಾನೆ. ಭಾರತೀಯ ದರ್ಶನದ ಅನುಸಾರ



ಭಾಗ್ಯದ ಶುಭಾಶುಭ ಫಲ ಅವನ ಪೂರ್ವ ಜನ್ಮದ ಕರ್ಮಗಳ ಮೇಲೆ ಆಧಾರಿತವಾಗಿದೆ. ಆದ್ದರಿಂದ ಅದನ್ನು ಪ್ರಾರಬ್ಧ ಎಂದು ಹೇಳಲಾಗುತ್ತದೆ. ಆದರೆ ಸಾಮಾನ್ಯವಾಗಿ ಭವಿಷ್ಯದಲ್ಲಿ ಉಂಟಾಗುವ ಸುಖದುಃಖವನ್ನೇ ಭಾಗ್ಯವೆಂದು ತಿಳಿದುಕೊಳ್ಳಬೇಕು.

ಭಾಗ್ಯರೇಖೆ ಕೈನ ಮುಖ್ಯ ರೇಖೆಗಳಲ್ಲಿ ಒಂದಾಗಿದೆ. ಈ ರೇಖೆ ಅಂಗೈನ ಮಧ್ಯಭಾಗದಿಂದ ಅಥವಾ ಮಣಿಕಟ್ಟಿನ ಮೇಲ್ಭಾಗದಿಂದ ಅಥವಾ ಬೇರೆ ಕಡೆಯಿಂದ ಆರಂಭವಾಗಿ ಶನಿ ಕ್ಷೇತ್ರದ ಕಡೆಗೆ ಹೋಗುತ್ತದೆ. ಇದನ್ನು ಊರ್ಧ್ವರೇಖೆ ಎಂದು ಸಹ ಕರೆಯುತ್ತಾರೆ.

ಅನೇಕ ಬಾರಿ ಭಾಗ್ಯರೇಖೆ ಅಥವಾ ಅದರ ಯಾವುದಾದರೂ ಶಾಖೆ ಗುರು ಪರ್ವತದವರೆಗೂ ಸಹ ಹೋಗುತ್ತದೆ. ಆದರೆ ಅದೇನೇ ಇರಲಿ

ಅದನ್ನು ಭಾಗ್ಯರೇಖೆ ಎಂದು ಕರೆಯಲು ಸಾಧ್ಯವಿಲ್ಲ. ಅದನ್ನು ಸಹಾಯಕ ರೇಖೆ ಎಂದು ಹೇಳಬಹುದು.

ಕೈನಲ್ಲಿ ಅನೇಕ ಬಾರಿ ಒಂದಕ್ಕಿಂತ ಹೆಚ್ಚು ಭಾಗ್ಯರೇಖೆಗಳು ಸಹ ಕಾಣಿಸುತ್ತವೆ. ಅಂತಹ ರೇಖೆಗಳು ಯಾವುದಾದರೂ ವಿಶಿಷ್ಟ ದಿಕ್ಕಿನಲ್ಲಿ ವ್ಯಕ್ತಿ ಮೂಲಕ ಮಾಡಲ್ಪಡುವ ಪ್ರಯತ್ನಗಳ ಮತ್ತು ಅವುಗಳಲ್ಲಿನ ಸಫಲತೆ ಮತ್ತು ಅಸಫಲತೆಗಳ ಪರಿಚಯ ನೀಡುತ್ತದೆ. ಇವುಗಳಲ್ಲೂ ಸಹ ಹೆಚ್ಚು ಉದ್ದ, ಸ್ಪಷ್ಟ, ಸುಭದ್ರ ರೇಖೆ ಇರುತ್ತದೆ, ಅದು ಮುಖ್ಯ ಭಾಗ್ಯ ರೇಖೆಯಾಗಿರುತ್ತದೆ ಮತ್ತು ಉಳಿದವುಗಳ ಸಹಾಯಕ ರೇಖೆಗಳಾಗಿರುತ್ತವೆ.

ಇದರ ಅಂತ್ಯ ಶನಿ ಕ್ಷೇತ್ರದ ಮೇಲೆ ಆಗುವುದರಿಂದ ಇದನ್ನು ಶನಿರೇಖೆ ಎಂದೂ ಸಹ ಕರೆಯಬಹುದು.

ಯಾವ ಕೈಗಳಲ್ಲಿ ಈ ರೇಖೆ ನಿರ್ಬಲವಾಗಿರುತ್ತದೋ ಅಥವಾ ಇರುವುದೇ ಇಲ್ಲವೋ ಅಂತಹ ವ್ಯಕ್ತಿಗಳ ಉನ್ನತಿಯೇನೋ ಆಗುತ್ತದೆ ಆದರೆ ಉನ್ನತಿಯಲ್ಲಿ ಸಹೋದರರು, ಬಂಧುಗಳು, ಕುಟುಂಬದವರಲ್ಲಿ ಯಾರೂ ಸಹಾಯ ಮಾಡುವವರಲ್ಲ. ಆತನು ತನ್ನ ಸ್ವಪ್ರಯತ್ನಗಳಿಂದ ಪಡೆದುಕೊಳ್ಳುತ್ತಾನೆ.

ಈ ರೇಖೆ ಕೆಳಭಾಗದಿಂದ ಮೇಲ್ಭಾಗದ ಕಡೆಗೆ ಹೋಗುತ್ತವೆ. ಇದರ ಉಗಮ ಭಿನ್ನ ಭಿನ್ನ ಸ್ಥಾನಗಳಿಂದ ಆಗುತ್ತದೆ, ಆದರೆ ಸಮಾಪ್ತಿ ಶನಿಪರ್ವತವನ್ನು ತಲುಪಿಯೇ ಆಗುತ್ತದೆ. ಈ ರೇಖೆಯ ಮಾಧ್ಯಮದಿಂದ ಮಾನವನ ಇಚ್ಛೆಗಳು, ಭಾವನೆಗಳು, ಅವನ ಬೌದ್ಧಿಕ ಮತ್ತು ಮಾನಸಿಕ ಸ್ಥಳ ಮತ್ತು ಸಾಮರ್ಥ್ಯದ ಅನುಭವ ಆಗುತ್ತದೆ.

ಮಧ್ಯದ ಬೆರಳಿನ ಮೂಲದಲ್ಲಿ ಶನಿ ಪರ್ವತವಿದೆ. ಅಂಗೈನ ಯಾವುದಾದರೂ ಸ್ಥಾನದಿಂದ. ಯಾವುದೇ ರೇಖೆ ಆರಂಭವಾಗಿ ಶನಿ ಪರ್ವತವನ್ನು ಸ್ಪರ್ಶಿಸಿದರೆ ಅದು ಭಾಗ್ಯರೇಖೆಯಾಗಿದೆ.

ಬೇರೆ ಯಾವುದೇ ರೇಖೆಯ ಆಸರ ತೆಗೆದುಕೊಳ್ಳದೆ ಒಂದು ವೇಳೆ ಈ ರೇಖೆ ಶನಿ ಪರ್ವತದವರೆಗೆ ತಲುಪಿದರೆ ನಿಸ್ಸಂದೇಹವಾಗಿ ಇಂತಹ ಪ್ರಬಲ ಭಾಗ್ಯರೇಖೆ, ಭಾಗ್ಯವರ್ಧಕ ಮತ್ತು ಶ್ರೇಷ್ಠ ಎಂದು ನಂಬಲಾಗುತ್ತದೆ. ಆದರೆ ಭಾಗ್ಯರೇಖೆ ಶನಿಯನ್ನು ಪಡೆದುಕೊಂಡು ಮಧ್ಯದ ಬೆರಳಿನ ಭಾಗಕ್ಕೆ ತಲುಪುವ ಪ್ರಯತ್ನ ಮಾಡಿದರೆ ಅದು ದೋಷಪೂರ್ಣವಾಗುತ್ತದೆ.

ಚಂದ್ರನ ಸ್ಥಾನದಿಂದ ನಡೆಯುವ ರೇಖೆ ಮನುಷ್ಯ ಪರಿವರ್ತನಶೀಲ

ಸ್ವಭಾವದವನೆಂದು ಸೂಚಿಸುತ್ತದೆ. ಈ ರೀತಿಯ ರೇಖೆಯುಳ್ಳ ವ್ಯಕ್ತಿ ಯಾವುದೇ ಕೆಲಸವನ್ನು ಸ್ಥಿರವಾಗಿ ಮಾಡಲಾರ. ಸ್ತ್ರೀಯರ ಕಡೆಗೆ ವಿಶೇಷ ಆಕರ್ಷಿತರಾಗಿರುತ್ತಾರೆ. ಈ ರೇಖೆ ಗುರು ಪರ್ವತದ ಸ್ಥಾನದ ಮೇಲೆ ತಲುಪಿದರೆ ಒಳ್ಳೆಯ ವಿವಾಹ ಸಂಬಂಧದ ಪರಿಚಯ ನೀಡುತ್ತದೆ. ಈ ರೇಖೆಯನ್ನು ಒಂದು ವೇಳೆ ಯಾವುದಾದರೂ ಅಪರಾಧ ರೇಖೆ ಕತ್ತರಿಸಿದರೆ ಅವನ ಸ್ತ್ರೀ ಮೃತ್ಯುವನ್ನಪ್ಪುವಳೆಂದು ಇದು ಸೂಚಿಸುತ್ತದೆ. ಚಂದ್ರನ ಕಡೆಯಿಂದ ಬರುವ ಪ್ರಭಾವಶಾಲಿ ರೇಖೆಗಳು ವ್ಯಕ್ತಿಯ ಜೀವನದ ಮೇಲೆ ಪ್ರಭಾವ ಬೀರುವವರ ಬಗ್ಗೆ ಸೂಚನೆ ನೀಡುತ್ತದೆ.

ಒಂದು ವೇಳೆ ಭಾಗ್ಯರೇಖೆ ಸ್ವತಃ ಅಥವಾ ಅದರ ಯಾವುದಾದರೂ ಶಾಖೆ ಮೂರನೇ ಬೆರಳಿನ ಕಡೆಗೆ ಹೋಗುತ್ತಿದ್ದರೆ ಅದು 'ಕೀರ್ತಿಯನ್ನು ಹೆಚ್ಚು ಮಾಡುವಂತಹದಾಗಿರುತ್ತದೆ. ಇಂತಹ ವ್ಯಕ್ತಿಗಳು ಪ್ರಾಯಃ ಬೇರೆಯವರ ಹಿತವನ್ನು ಬಯಸುವವರು ಮತ್ತು ಸಮಾಜದಿಂದ ವಕ್ರವಾಗಿರುವವರು ಆಗಿರುತ್ತಾರೆ. ಕವಿ ಅಥವಾ ವ್ಯಾಖ್ಯಾನಕಾರರಾಗಿರುತ್ತಾರೆ. ರಾಜನ ಆಸ್ಥಾನದಲ್ಲಿ ಗೌರವ ಪಡೆಯುತ್ತಾರೆ. ಆದರೆ ಭಾಗ್ಯರೇಖೆ ಅಥವಾ ಇದರ ಯಾವುದಾದರೂ ಶಾಖೆ ಮೊದಲನೆಯ ಬೆರಳಿನ ಕಡೆಗೆ ಹೋಗುತ್ತಿದ್ದರೆ ಇಂತಹ ವ್ಯಕ್ತಿ ಸ್ತ್ರೀ ಅಥವಾ ಪುರುಷ ಯಾರೇ ಆಗಿರಲಿ, ಅವರು ಉಚ್ಚಪದವಿಯನ್ನು ಪ್ರಾಪ್ತಿ ಮಾಡಿಕೊಂಡು ಬೇರೆಯವರ ಮೇಲೆ ಶಾಸನ ಮಾಡುತ್ತಾರೆ. ಇಂತಹ ವ್ಯಕ್ತಿ ಉಚ್ಚ ಕೆಲಸಗಾರ ಅಥವಾ ಯಾವುದಾದರೂ ದೊಡ್ಡ ವ್ಯಾಪಾರಿ ಆಗುತ್ತಾನೆ.

ಒಂದು ವೇಳೆ ಭಾಗ್ಯರೇಖೆಯ ಮೇಲೆ ದ್ವೀಪದ ಚಿಹ್ನೆ ಇದ್ದರೆ ಅಧಿಕಾರ ಹೊರಟು ಹೋಗುವ ಅಥವಾ ಕೆಲಸ ಕಳೆದುಕೊಳ್ಳುವ ಅಥವಾ ಅಪರಾಧ ಉಂಟಾಗುವ ಸಂಭವವಿರುತ್ತದೆ.

ಒಂದು ವೇಳೆ ಭಾಗ್ಯರೇಖೆ ಜೀವನ ರೇಖೆಯನ್ನು ಸ್ಪರ್ಶ ಮಾಡಿಕೊಂಡು ಮುಂದಕ್ಕೆ ಸಾಗಿದರೆ ಮನುಷ್ಯನ ಪ್ರಾರಂಭಿಕ ಜೀವನ ತನ್ನ ವಂಶ ಅಥವಾ ಬೇರೆಯವರ ಹಿತ ಮಾಡುವುದರಲ್ಲೇ ಕಳೆಯುತ್ತದೆ ಅಥವಾ ಅವನು ಬಾಲ್ಯದಲ್ಲೇ ಗೃಹಸ್ಥ ಬಂಧನದಲ್ಲಿ ಬಿದ್ದು ಜೀವನದ ಬಗ್ಗೆ ಚಿಂತೆ ಮಾಡಬೇಕಾಗುತ್ತದೆ.

ಒಂದು ವೇಳೆ ಭಾಗ್ಯರೇಖೆ ಶುಕ್ರಸ್ಥಾನದ ಯಾವುದಾದರೂ ಭಾಗದಿಂದ ಆರಂಭವಾದರೆ ಮನುಷ್ಯನ ಮೇಲೆ ಪ್ರೇಮದ ಪ್ರಭಾವ ಅಧಿಕವಾಗಿರುತ್ತದೆ. ಒಂದು ವೇಳೆ ಜೊತೆಯಲ್ಲೇ ಮಸ್ತಿಷ್ಕ ರೇಖೆ

ದುರ್ಬಲವಾಗಿದ್ದರೆ ಮನುಷ್ಯ ಅತಿಕಾಮಿಯಾಗುತ್ತಾನೆ ಮತ್ತು ಈ ಲಕ್ಷಣದಿಂದ ಅವನ ಉನ್ನತಿಗೆ ಅಡಚಣೆ ಉಂಟಾಗುತ್ತದೆ. ಇಷ್ಟಿದ್ದರೂ ಸಹ ಒಂದು ವೇಳೆ ಶುಕ್ರಸ್ಥಾನ ಉಚ್ಚವಾಗಿದ್ದರೆ ಅವನು ಕಾಮಾಂಧನಾಗಿ ಬಿಡುತ್ತಾನೆ.

ಒಂದು ವೇಳೆ ಭಾಗ್ಯರೇಖೆ ಎಲ್ಲಾದರೂ ಕತ್ತರಿಸಿ ಹೋಗಿದ್ದರೆ ಅದೇ ಸಮಯದಲ್ಲಿ ಬೇರೆ ರೇಖೆಗಳ ಸಹಯೋಗಾನುಸಾರ ಯಾವುದಾದರೂ ಆಕಸ್ಮಿಕ ವಿಪತ್ತು ಉಂಟಾಗುತ್ತದೆ.

ಒಂದು ವೇಳೆ ಭಾಗ್ಯರೇಖೆ ಅಂಗೈನ ಮಧ್ಯದಲ್ಲಿ ಕತ್ತರಿಸಿದ್ದರೆ 36 ನೇ. ವರ್ಷದ ವಯಸ್ಸಿನಲ್ಲಿ ಮನುಷ್ಯನಗೆ ಯಾವುದೋ ದೊಡ್ಡ ಆಪತ್ತು ಬರುವುದೆಂಬುದನ್ನು ಸೂಚಿಸುತ್ತದೆ.

ಒಂದು ವೇಳೆ ಭಾಗ್ಯರೇಖೆ, ಜೀವನ ರೇಖೆಯನ್ನು ಸ್ಪರ್ಶ ಮಾಡುತ್ತಾ ಮುಂದುವರೆದರೆ ವ್ಯಕ್ತಿಯು ಪ್ರಾರಂಭಿಕ ಜೀವನ ಬಾಲ್ಯದಲ್ಲೇ ಸಂಸಾರ ತಾಪತ್ರಯಗಳಿಂದ ಕಳೆಯುತ್ತದೆ.

ಭಾಗ್ಯರೇಖೆ ಸ್ವತಃ ಅಥವಾ ಅದರ ಯಾವುದಾದರೂ ಶಾಖೆ ಉಂಗುರದ ಬೆರಳಿನ ಕಡೆಗೆ ಹೋಗುತ್ತಿದ್ದರೆ ಮನುಷ್ಯ ಜನಸೇವಕ, ಯಶಸ್ವಿ ಮತ್ತು ಪ್ರಶಂಸೆಗೆ ಪಾತ್ರನಾಗುತ್ತಾನೆ.

ಒಂದು ವೇಳೆ ಭಾಗ್ಯರೇಖೆ ಅಥವಾ ಅದರ ಯಾವುದಾದರೂ ಶಾಖೆ ಗುರುವಿನ ಕಡೆಗೆ ಹೋಗುತ್ತಿದ್ದರೆ ಮನುಷ್ಯ ಯಾವುದಾದರೂ ಉಚ್ಚ ಅಧಿಕಾರವನ್ನು ಪಡೆದುಕೊಳ್ಳುತ್ತಾನೆ. ಇಂತಹ ವ್ಯಕ್ತಿ ಮಂತ್ರಿ ಅಥವಾ ಆಡಳಿತಾಧಿಕಾರಿಯಾಗುತ್ತಾನೆ.

ಒಂದು ವೇಳೆ ಭಾಗ್ಯರೇಖೆ ಮಣಿಕಟ್ಟಿನಿಂದ ಹೊರಟು ಹೆಬ್ಬೆರಳಿನ ಜಡದ ಕಡೆಗೆ ಹೋಗಿ ಸಮಾಪ್ತಿಗೊಂಡರೆ ಅದು ಸುಖಮಯ ಜೀವನವನ್ನು ಸೂಚಿಸುತ್ತದೆ. ಇಂತಹ ವ್ಯಕ್ತಿ ರಾಜ್ಯ ಸುಖ ಅನುಭವಿಸುವವನು, ಸೇನಾಪತಿ, ಶ್ರೀಮಂತ, ಹಣವಂತ ಮತ್ತು ಮಧ್ಯಮ ಆಯುಷ್ಯನವನಾಗುತ್ತಾನೆ.

ಒಂದು ವೇಳೆ ಭಾಗ್ಯರೇಖೆ ತೋರುಬೆರಳಿನ ಮೂಲದ ಕಡೆಗೆ ಹೋದರೆ ರಾಜ್ಯಸುಖ ಪ್ರಾಪ್ತಿಯಾಗುತ್ತದೆ. ವ್ಯಕ್ತಿ ರಾಜದೂತನಾಗುತ್ತಾನೆ.

ಭಾಗ್ಯರೇಖೆ ಉಂಗುರದ ಬೆರಳಿನ ಮೂಲದ ಕಡೆಗೆ ಎತ್ತರಕ್ಕೆ ಹೋದರೆ ಇಂತಹ ವ್ಯಕ್ತಿ ಧನಧಾನ್ಯ ಸಂಪನ್ನನಾಗುತ್ತಾನೆ. ಅವನಿಗೆ ತನ್ನದೇ ವಾಹನ, ವಸ್ತ್ರಾಭೂಷಣ ಮತ್ತು ಆಳುಕಾಳುಗಳಿರುತ್ತಾರೆ.

ಭಾಗ್ಯರೇಖೆ ಒಂದು ವೇಳೆ ಕಿರುಬೆರಳಿನ ಮೂಲದ ಕಡೆಗೆ ಹೋಗುತ್ತಿದ್ದರೆ ವ್ಯಕ್ತಿ ವಿದ್ವಾಂಸನು, ವಿದೇಶಾಟನೆ ಮಾಡುವವನು, ಶತಾಯುವು ಮತ್ತು ಶ್ರೇಷ್ಠ ಪುರುಷನೂ ಆಗುತ್ತಾನೆ.

ಭಾಗ್ಯರೇಖೆ ಎರಡನೇ ಬೆರಳಿನ ಬಹು ಹತ್ತಿರಕ್ಕೆ ಹೋದರೆ ಅಥವಾ ಶನಿಯ ಸ್ಥಾನದ ಮೇಲೆ ಹೋಗಿ ಸರ್ಪ ಚಿಹ್ನೆಯನ್ನು ತಾಳಿದರೆ ಅದು ಅತ್ಯಂತ ಅಶುಭವಾದುದಾಗಿರುತ್ತದೆ. ಇದರಿಂದಾಗಿ ವ್ಯರ್ಥ ಚಿಂತೆಗಳು ಕಾಡುತ್ತವೆ. ಒಂದು ವೇಳೆ ಈ ರೀತಿಯ ರೇಖೆ ನಿಶ್ಶಕ್ತ ಕೈನಲ್ಲಿದ್ದರೆ ಕೆಟ್ಟ ಹೆಸರು ಬರುತ್ತದೆ. ಶಿಕ್ಷೆ ಅನುಭವಿಸಬೇಕಾಗುತ್ತದೆ. ಇದೇ ರೀತಿ ಒಂದು ವೇಳೆ ಭಾಗ್ಯರೇಖೆ ಕೆಳಭಾಗದ ಕಡೆಗೆ ಮಣಿಕಟ್ಟಿನ ರೇಖೆಯನ್ನು ಕತ್ತರಿಸಿದರೆ ಇದರ ಪ್ರಭಾವವೂ ಸಹ ಕೆಟ್ಟದ್ದಾಗಿರುತ್ತದೆ.

ಜೀವನ ರೇಖೆಯಿಂದ ಆರಂಭವಾಗುವ ಭಾಗ್ಯರೇಖೆ ಶುಭದ ಗುರುತಾಗಿದೆ. ಇಂತಹ ವ್ಯಕ್ತಿ ಸಫಲ ಜೀವನವನ್ನು ಕಳೆಯುತ್ತಾನೆ. ಭಾಗ್ಯರೇಖೆ ಮಧ್ಯದಲ್ಲಿ ಕತ್ತರಿಸಲ್ಪಡದಿದ್ದರೆ ಯಾವುದೇ ರೀತಿಯ ತೊಂದರೆ ಇರುವುದಿಲ್ಲ. ಒಂದು ವೇಳೆ ಈ ರೇಖೆ ಬೇರೆ ಸ್ಥಾನದಿಂದ ಪ್ರಾರಂಭವಾಗಿ ಜೀವನ ರೇಖೆಯನ್ನು ಸ್ಪರ್ಶಿಸಿದರೆ, ಮುಂದಕ್ಕೆ ಸಾಗಿದರೆ ಅಂತಹ ವ್ಯಕ್ತಿಯು ಜೀವನ ಮನೆಯವರ ಮತ್ತು ಮಿತ್ರರ ಜಗಳದಿಂದಲೇ ಕಳೆಯುತ್ತದೆ.

ಶುಕ್ರನ ಸ್ಥಾನದಿಂದ ನಡೆಯುವ ಭಾಗ್ಯರೇಖೆಯುಳ್ಳ ಮನುಷ್ಯ ಪ್ರೇಮದ ಗುಲಾಮ ಅಥವಾ ಕಾಮಾಸಕ್ತನಾಗುತ್ತಾನೆ. ಇಂತಹ ವ್ಯಕ್ತಿಯ ಮಸ್ತಿಷ್ಕ ರೇಖೆ ಒಂದು ವೇಳೆ ದುರ್ಬಲವಾಗಿದ್ದರೆ ಅದು ಪ್ರೇಮದ ಜಂಜಾಟದಲ್ಲಿ ಅವನ ಸಮಸ್ತ ಉನ್ನತಿಯನ್ನು ತಡೆದುಬಿಡುತ್ತದೆ ಮತ್ತು ಶುಕ್ರನ ಸ್ಥಾನದ ಉಚ್ಚಿನ ಪ್ರಭಾವವೂ ಸಹ ಇವನ ಮೇಲೆ ಬೀಳುತ್ತದೆ.

ಒಂದು ವೇಳೆ ಮಸ್ತಿಷ್ಕ ರೇಖೆ ಭಾಗ್ಯರೇಖೆಯ ಮೂಲಕ ನಿಂತುಹೋಗಿದ್ದರೆ, ಮುಂದಕ್ಕೆ ಸಾಗದೇ ಹೋದರೆ ಅಂತಹ ಮನುಷ್ಯ ತನ್ನ ಮೂರ್ಖತೆಯ ಕಾರಣದಿಂದಾಗಿ ಏಳ್ಗೆ ಹೊಂದಲು ಸಾಧ್ಯವಾಗುವುದಿಲ್ಲ.

ನೇರವಾದ ಭಾಗ್ಯರೇಖೆಯಿಂದ ಒಂದು ವೇಳೆ ಶಾಖೆಗಳು ಹೊರಟು ಶನಿಯ ಸ್ಥಾನದ ಕಡೆಗೆ ಹೋದರೆ ಅಥವಾ ಭಾಗ್ಯರೇಖೆ ಮೇಲ ಹೋಗಿ ಅಧಿಕ ಸ್ಪಷ್ಟವಾದರೆ ಅದು ಭಾಗ್ಯೋದಯದ ಚಿಹ್ನೆಯಾಗಿದೆ.

ಒಂದು ವೇಳೆ ಭಾಗ್ಯರೇಖೆ ಚಿಕ್ಕದಾಗಿದ್ದರೆ ಮತ್ತು ಜೀವನ ರೇಖೆ ಬಹಳ ದೊಡ್ಡದಾಗಿದ್ದರೆ ಮತ್ತು ಎರಡರ ಅಂತರ ಅಥವಾ ಮಧ್ಯದ ಭಾಗ ಸ್ಫುಟವಾಗಿ ಕಾಣಿಸಿದರೆ ಇಂತಹ ರೇಖೆಯುಳ್ಳ ವ್ಯಕ್ತಿ ಮಹಾಮೂರ್ಖನು

ಮತ್ತು ಅಪವ್ಯಯಿಯೂ ಆಗುತ್ತಾನೆ.

ಭಾಗ್ಯರೇಖೆ ಒಂದು ವೇಳೆ ಜೀವನ ರೇಖೆಯಿಂದ ದೂರ ಚಂದ್ರನ ಸ್ಥಾನದಿಂದ ಆರಂಭವಾದರೆ ಆ ವ್ಯಕ್ತಿ ಜೀವನದ ಆರಂಭದಿಂದಲೇ ಯಾರ ಚಿಂತೆಯನ್ನೂ ಮಾಡದೇ ಸ್ವತಂತ್ರ ವಿಚಾರದಿಂದ ಕಾರ್ಯ ಮಾಡುವವನಾಗುತ್ತಾನೆ.

ಕೆಳಭಾಗದ ಕಡೆಗೆ ಒಂದು ವೇಳೆ ಭಾಗ್ಯರೇಖೆ ಸರ್ಪ ಚಿಹ್ನಾಕಾರವನ್ನು ತಾಳಿದರೆ ಮನುಷ್ಯ ಅನಿಶ್ಚಿತ ಬುದ್ಧಿಯವನಾದರೂ ಸಹ ಶಕ್ತಿವಂತನಾಗುತ್ತಾನೆ.

ಭಾಗ್ಯರೇಖೆಯ ಮೇಲೆ ಮತ್ಸ್ಯ ಅಥವಾ ಶಂಖದ ಚಿಹ್ನೆ ಇದ್ದರೆ ಐಶ್ವರ್ಯ, ವೈಭವ, ಸಂಪತ್ತು, ವಸ್ತ್ರಾಭರಣ, ರಾಜ್ಯವೂ ಸಹ ದೊರೆಯುತ್ತದೆ. ಜನ ಸಾಮಾನ್ಯರು ಇಂತವನ ಕಡೆಗೆ ಸ್ವತಃ ಆಕರ್ಷಿತರಾಗುತ್ತಾರೆ. ಇಂತಹ ವ್ಯಕ್ತಿ ಇವರ ಮೇಲೆ ಆಡಳಿತ ನಡೆಸುತ್ತಾನೆ.

ಭಾಗ್ಯ ರೇಖೆ ವಿವರ್ಣವಾಗುವುದು ಅಶುಭ ಲಕ್ಷಣ. ಅಸ್ಪಷ್ಟ ಅಥವಾ ಕತ್ತರಿಸಿ ಹೋಗಿರುವ, ಸರಪಳಿಯುಕ್ತ ಅಥವಾ ಅಲೆಯಂತಿರುವ ರೇಖೆಗಳ ಪ್ರಭಾವ ಶುಭವಾಗಿರುವುದಿಲ್ಲ.

ಭಾಗ್ಯರೇಖೆಯ ಮೇಲೆ ಚಕ್ರದ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಸಾಹಸಿ, ಶಕ್ತಿವಂತ, ಕಠೋರ ಹೃದಯಿ ಅಷ್ಟೇ ಮೃದುವೂ ಸಹ ಆಗಿರುತ್ತಾನೆ.

ಶುಕ್ರನಿಂದ ಬುಧದವರೆಗೆ ಎಳೆಯಲ್ಪಟ್ಟಿರುವ ನೇರ ರೇಖೆ ಎಲ್ಲಿ ಭಾಗ್ಯರೇಖೆಯನ್ನು ಕತ್ತರಿಸುವುದೋ ಅಲ್ಲಿ 30 ರಿಂದ 35 ವರ್ಷದ ಆಯುಸ್ಸಿನಲ್ಲಿ ಗಂಡಾಂತರ ಒದಗುತ್ತದೆ.

ಒಂದು ವೇಳೆ ಭಾಗ್ಯರೇಖೆ ಇದ್ದು ಜೊತೆಯಲ್ಲಿ ಊರ್ಧ್ವಗಾಮಿ ಕೆಲವು ರೇಖೆಗಳು ಅದನ್ನು ಸ್ಪರ್ಶಿಸಿದರೆ ವ್ಯಕ್ತಿಯ ಜೀವನ ಪ್ರಗತಿಶೀಲವಾಗುತ್ತದೆ.

ಭಾಗ್ಯರೇಖೆಯ ಮೇಲೆ ಗುಣಾಕಾರದ ಚಿಹ್ನೆ ಆಕಸ್ಮಿಕ ವಿಪತ್ತನ್ನು ಸಹ ಸೂಚಿಸುತ್ತದೆ. ಮಣಿಕಟ್ಟಿನ ಕಡೆಗೆ ಬರುತ್ತಿರುವ ಭಾಗ್ಯರೇಖೆ ಅಂಗೈನ ಮಧ್ಯದಲ್ಲಿ ಒಂದು ಗುಣಾಕಾರದ ಚಿಹ್ನೆಯಲ್ಲಿ ಸಮಾಪ್ತಿಗೊಂಡರೆ ಇದು ದುರ್ಘಟನೆಯನ್ನು ಸೂಚಿಸುತ್ತದೆ. ದುರ್ಘಟನೆಯಲ್ಲಿ ಸಾವು ಸಹ ಸಂಭವವಿದೆ.

ಭಾಗ್ಯರೇಖೆಯ ಮೇಲೆ ಕಪ್ಪು ಎಳ್ಳಿನ ಚಿಹ್ನೆ ಅತ್ಯಂತ ಅಶುಭವಾದುದಾಗಿದೆ. ಧನಹಾನಿ ಮತ್ತು ಮೃತ್ಯುವನ್ನು ಸಹ

ಸೂಚಿಸುತ್ತದೆ.

ನೀಲಿ ಕಾಂತಿಯುಕ್ತ ಎಳ್ಳಿನ ಬಣ್ಣದ ರಕ್ತದ ರೇಖೆ ದೋಷವನ್ನು ಪರಿಚಯಿಸುತ್ತದೆ. ಕೆಂಪುಬಣ್ಣ ರಕ್ತ ಅಧಿಕತೆಯನ್ನು ಸೂಚಿಸುತ್ತದೆ. ಹಸಿರು ಎಳ್ಳು ದೃಷ್ಟಿದೋಷವನ್ನು ಸೂಚಿಸುತ್ತದೆ. ಹಳದಿ ಎಳ್ಳು ರಕ್ತದ ಅಲ್ಪತೆಯನ್ನು ಪರಿಚಯಿಸುತ್ತದೆ. ಬಿಳಿ ಎಳ್ಳು ಎದೆಯಲ್ಲಿ ರೋಗವನ್ನು ಉತ್ಪನ್ನ ಮಾಡುತ್ತದೆ.

ಭಾಗ್ಯರೇಖೆಯ ಮೇಲೆ ತ್ರಿಶೂಲದ ಚಿಹ್ನೆ ವೀರತೆಯನ್ನು ಸೂಚಿಸುತ್ತದೆ. ದುಂದುವೆಚ್ಚ ಮಾಡುವುವನೆಂದು ಸೂಚಿಸುತ್ತದೆ.

ಇಮ್ಮಡಿ ಭಾಗ್ಯರೇಖೆ ಶುಭ ಸೂಚಕವಾಗಿದೆ. ಆರಂಭದಲ್ಲಿ ಸರ್ಪಾಕಾರ, ಮಧ್ಯದಲ್ಲಿ ಸ್ವಾಭಾವಿಕವಾಗಿರುವ ಭಾಗ್ಯರೇಖೆ ಪ್ರಾರಂಭಿಕ ವರ್ಷಗಳಲ್ಲಿ ಕಷ್ಟದ ಸಂಕೇತವನ್ನು ನೀಡುತ್ತದೆ.

ಮಣಿಕಟ್ಟಿನಿಂದ ಆರಂಭವಾಗುವ ಮತ್ತು ಕಿರುಬೆರಳಿನ ಮೂರನೇ ಪರ್ವತಕ್ಕೆ ತಲುಪುವ ರೇಖೆ ವ್ಯಕ್ತಿಯ ಭಾಗ್ಯೋದಯ ಮಂದಗತಿಯಲ್ಲಿ ಆಗುವುದೆಂದು ಸ್ಪಷ್ಟಪಡಿಸುತ್ತದೆ. ಈ ರೇಖೆ ಹೃದಯ ರೇಖೆಯನ್ನು ದಾಟುವ ಸ್ಥಾನದಲ್ಲಿ ಸರಪಳಿಯಂತೆ ಇದ್ದರೆ ಪ್ರಣಯ–ಪ್ರೀತಿಯ ವಿಷಯದಲ್ಲಿ ಬಹಳ ಕಷ್ಟ ಉಂಟಾಗುತ್ತದೆಂದು ತಿಳಿಸುತ್ತದೆ.

ಧೂಮಯುಕ್ತ ಭಾಗ್ಯರೇಖೆ ಒಂದು ರೇಖೆ ಶೀರ್ಷರೇಖೆಯ ಮೇಲೆ ಸಮಾಪ್ತಿಗೊಂಡರೂ ಸಹ ಅದು ಅಂತಹ ಒಳ್ಳೆಯದಲ್ಲ. ಆದರ ಜೊತೆಯಲ್ಲೇ ಒಂದು ವೇಳೆ ಶನಿಕ್ಷೇತ್ರ ಸಮ ಉನ್ನತವಾಗಿ ಮತ್ತು ಬಲಿಷ್ಠವಾಗಿದ್ದರೆ ಅಸಫಲ ಜೀವನವೆಂದು ತಿಳಿಯಬೇಕು.

ಎಲ್ಲಾ ಕಡೆ ಛಿದ್ರ ಛಿದ್ರವಾಗಿರುವ ಭಾಗ್ಯರೇಖೆ ದುರ್ಭಾಗ್ಯ ವ್ಯಕ್ತಪಡಿಸುತ್ತದೆ. ಭಾಗ್ಯರೇಖೆ ಎಷ್ಟು ಬಾರಿ ಕತ್ತರಿಸಿರುವುದೋ ಅಷ್ಟೇ ಬಾರಿ ಜೀವನದಲ್ಲಿ ತಿರುವು ಉಂಟಾಗುತ್ತವೆಂದು ತಿಳಿಯಬೇಕು.

ಭಾಗ್ಯರೇಖೆಯ ಉಗಮ ಸ್ಥಾನದಿಂದ ಯಾವುದಾದರೂ ರೇಖೆ ಶುಕ್ರನ ಕಡೆಗೆ ಹೋದರೆ ವ್ಯಕ್ತಿಯ ಭಾಗ್ಯೋದಯ ಸ್ತ್ರೀಯಿಂದ ಉಂಟಾಗುತ್ತದೆ ವ್ಯಕ್ತಪಡಿಸುತ್ತದೆ.

## 6. ಆರೋಗ್ಯ ರೇಖೆ (Health Line)

ಆರೋಗ್ಯ ಭೌತಿಕ ಜೀವನದ ಮೊದಲನೆಯ ಮತ್ತು ಮೂಲಭೂತ ಆವಶ್ಯಕತೆಯಾಗಿದೆ. ಮನುಷ್ಯನ ಬಳಿ ವಾಹನ, ಭೂಮಿ, ಭವನ,

ಆಳು-ಕಾಳು, ಉದ್ಯಮ, ಷ್ಠಾನ, ಪ್ರತಿಷ್ಠೆ ಎಲ್ಲಾ ಇದ್ದರೂ ಸಹ ಒಂದು ವೇಳೆ ಆರೋಗ್ಯ ಇಲ್ಲದೇ ಹೋದರೆ ಎಲ್ಲಾ ಭೌತಿಕ ಸುಖಗಳು ವ್ಯರ್ಥವೆಂದು ಅನಿಸುತ್ತವೆ. ಆದ್ದರಿಂದ ಆರೋಗ್ಯ ರೇಖೆಗೆ ಸರ್ವೋಚ್ಚಸ್ಥಾನ



ನೀಡಲಾಗಿದೆ. ಸ್ವಸ್ಥ ಶರೀರದಲ್ಲೇ ಸ್ವಸ್ಥ ಮಸ್ತಿಷ್ಕ ಇರುತ್ತದೆ. ಕಾರ್ಯ ಯಾವುದೇ ಆದರೂ ಸಹ ಅದರಲ್ಲಿ ಮಾನಸಿಕ ಮತ್ತು ಶಾರೀರಿಕ ಸ್ವಸ್ಥತೆಯ ಅವಶ್ಯಕತೆ ಇರುತ್ತದೆ.

ಈ ರೇಖೆ ಸಾಮಾನ್ಯವಾಗಿ ಮಣಿಕಟ್ಟನಿಂದ ಹೊರಟು ಬುಧಕ್ಷೇತ್ರದ ಕಡೆಗೆ ಹೋಗುತ್ತದೆ. ಆದ್ದರಿಂದ ಬಹಳ ಜನ ವಿದ್ವಾಂಸರು ಇದನ್ನು ಬುಧರೇಖೆ ಎಂದು ಸಹ ಕರೆಯುತ್ತಾರೆ.

ಆದರೆ ಬುಧನ ಸಂಬಂಧ ಉದ್ಯಮದೊಂದಿಗೆ ವಿಶೇಷವಾಗಿರುವುದರಿಂದ ಕೆಲವು ವಿದ್ವಾಂಸರು ಈ ರೇಖೆಯನ್ನು ವ್ಯಾಪಾರದ ಅಧಿಪತಿಯೆಂದು ನಂಬುತ್ತಾರೆ. ಆದರೆ ಅನುಭವದ ಆಧಾರದ ಮೇಲೆ ಅನೇಕರು ಈ ರೇಖೆ ಆರೋಗ್ಯ ಸಂಬಂಧದ ಬಗ್ಗೆ ತಿಳಿದುಕೊಳ್ಳಲು ಹೆಚ್ಚು ಉಪಯೋಗವಾದುದೆಂದು ತಿಳಿಸಿದ್ದಾರೆ.

ಆರೋಗ್ಯ ರೇಖೆಯ ಉಗಮ ಅಂಗೈನ ಯಾವುದೇ ಸ್ಥಾನದಲ್ಲಿ ಆದರೂ ಸಹ ಇದರ ಅಂತ್ಯ ಅವಶ್ಯವಾಗಿ ಬುಧ ಪರ್ವತದ ಮೇಲೇ ಆಗುತ್ತದೆ. ಒಂದು ವೇಳೆ ಯಾವುದಾದರೂ ರೇಖೆ ಎಲ್ಲಿಂದಲಾದರೂ ಪ್ರಾರಂಭವಾಗಿ ಬುಧನ ಕಡೆಗೆ ಹೋಗುವ ಪ್ರಯತ್ನ ಮಾಡಿ ಅಲ್ಲಿಯವರೆಗೆ ತಲುಪದೇ ಹೋದರೆ ಅದು ಆರೋಗ್ಯ ರೇಖೆ ಎಂದು ಕರೆಯಲ್ಪಡುವುದಿಲ್ಲ.

ಪ್ರಾಯಃ ಬುಧ ರೇಖೆಯು ಪ್ರಾರಂಭ

**1. ಶುಕ್ರ ಪರ್ವತದಿಂದ, 2. ಮಂಗಳ ಪರ್ವತದಿಂದ, 3. ಚಂದ್ರ ಪರ್ವತದಿಂದ, 4. ಜೀವನ ರೇಖೆಯ ಹತ್ತಿರದಿಂದ, 5. ಹೃದಯ ರೇಖೆಯಿಂದ, 6. ಮಣಿಕಟ್ಟನಿಂದ, 7. ಭಾಗ್ಯರೇಖೆಯಿಂದ ಆಗುತ್ತದೆ.**

ಆರೋಗ್ಯ ರೇಖೆ ಹೆಚ್ಚು ಸ್ಪಷ್ಟವಾಗಿ, ದೋಷ ರಹಿತವಾಗಿ ಮತ್ತು ದಟ್ಟವಾಗಿದ್ದರೆ ಅಂತಹ ವ್ಯಕ್ತಿಯು ಆರೋಗ್ಯ ಅಷ್ಟೇ ಉತ್ತಮವಾಗಿ, ಶ್ರೇಷ್ಠವಾಗಿ ಮತ್ತು ಶುಭವಾಗಿರುತ್ತದೆ. ಆಕರ್ಷಕ ವ್ಯಕ್ತಿತ್ವ, ಕಾಂತಿಯುತ ಮುಖ, ಬಲಿಷ್ಠ ಶರೀರ, ಇಂತಹ ವ್ಯಕ್ತಿಗಿರುತ್ತದೆ. ಒಂದು ವೇಳೆ ಕತ್ತರಿಸಿ ಹೋಗಿರುವ, ದೋಷಪೂರ್ಣವಾಗಿರುವ ಅಥವಾ ಅಲೆಯಂತಿರುವ ಅಥವಾ ಸರಪಳಿಯಂತಿರುವ ರೇಖೆ ಇದ್ದರೆ ಅಂತಹ ವ್ಯಕ್ತಿ ನಿರ್ಬಲನೂ, ರೋಗಿಯೂ, ಅನಾಕರ್ಷಕನೂ ಆಗಿರುತ್ತಾನೆ.

ಒಂದು ವೇಳೆ ಕೈನಲ್ಲಿ ಆರೋಗ್ಯರೇಖೆ ಇಲ್ಲದೆ ಹೋದರೆ ವಿಚಾರ ಮಾಡುವ, ಚಿಂತೆ ಮಾಡುವ ಅಥವಾ ಬೇಸರಪಟ್ಟುಕೊಳ್ಳುವ ಅವಶ್ಯಕತೆ ಇಲ್ಲಾ ಏಕೆಂದರೆ ಇದು ಶುಭಲಕ್ಷಣವಾಗಿದೆ. ಇಂತಹ ವ್ಯಕ್ತಿಗಳು ಸುಂದರವಾಗಿಯೂ, ಆಕರ್ಷಕವಾಗಿಯೂ, ಶಕ್ತಿಶಾಲಿಗಳಾಗಿಯೂ ಮತ್ತು ಆರೋಗ್ಯವಂತರಾಗಿಯೂ ಇರುತ್ತಾರೆ.

ಅಗಲವಾದ ಆರೋಗ್ಯರೇಖೆ ಸ್ವಾಸ್ಥ್ಯದಲ್ಲಿ ನ್ಯೂನತೆಯನ್ನು ಕೊಡುತ್ತದೆ. ಸರಪಳಿಯುಕ್ತ ಆರೋಗ್ಯ ರೇಖೆ ಉದರ ರೋಗವನ್ನು ನೀಡುತ್ತವೆ. ಅಲೆಯಂತಿರುವ ರೇಖೆ ಎದೆ ರೋಗವನ್ನು ಕೊಡುತ್ತದೆ. ಹಳದಿ ವರ್ಣದ ಆರೋಗ್ಯ ರೇಖೆ ಕಾಮಾಲೆ ರೋಗ ಅಥವಾ ರಕ್ತ ದೋಷದ ರೋಗ ನೀಡುತ್ತವೆ. ಅನೇಕ ಸ್ಥಳದಲ್ಲಿ ಕತ್ತರಿಸಲ್ಪಟ್ಟಿರುವ ಆರೋಗ್ಯ ರೇಖೆ ಜೀವನ ಪರ್ಯಂತ ರೋಗಗ್ರಸ್ತನನ್ನಾಗಿ ಇರುವಂತೆ ಮಾಡುತ್ತದೆ.

ಉತ್ತಮ ಆರೋಗ್ಯ ರೇಖೆಯ ಜೊತೆಯಲ್ಲಿ ಧನರೇಖೆ ಅಥವಾ ಸೂರ್ಯರೇಖೆ ಸುಂದರವಾಗಿ ಎದ್ದಿದ್ದರೆ ವ್ಯಕ್ತಿ ಜೀವನ ಪರ್ಯಂತ ಸುಖಿಯಾಗಿ, ಸ್ವಸ್ಥನಾಗಿ, ಸಂಪನ್ನನಾಗಿರುತ್ತಾನೆ. ಎಲ್ಲಾ ಕಾರ್ಯಗಳಲ್ಲಿ ಸಫಲತೆಯನ್ನು ಪಡೆಯುತ್ತಾನೆ.

ಆರೋಗ್ಯ ರೇಖೆಯ ಮೇಲೆ ಗುಣಾಕಾರದ ಚಿಹ್ನೆ ವ್ಯಕ್ತಿ ಹುಟ್ಟುರೋಗಿ ಎಂದು ಸಂಕೇತ ನೀಡುತ್ತದೆ.

ಆಯಸ್ಸು ರೇಖೆಗಿಂತ ಆರೋಗ್ಯರೇಖೆ ಹೆಚ್ಚು ಸ್ಪಷ್ಟವಾಗಿದ್ದರೆ

ಮನುಷ್ಯ ಪ್ರತಿ ಸಮಯದಲ್ಲೂ ಮೃತ್ಯು ಭಯದಿಂದ ಚಿಂತಿತನಾಗಿರುತ್ತಾನೆ.

ಅನೇಕ ಬಾರಿ ಅಂಗೈನ ಮಧ್ಯಕ್ಕೆ ಹೋಗಿ ಯಾವುದಾದರೂ ಆರೋಗ್ಯ ರೇಖೆಯ ಶಾಖೆ ಸೂರ್ಯಪರ್ವತದ ಕಡೆಗೆ ಸಾಗಿದ್ದರೆ ಮತ್ತು ಮುಖ್ಯ ಆರೋಗ್ಯ ರೇಖೆ ನೇರವಾಗಿ ಅಂಗೈನ ಮೇಲು ಭಾಗದವರೆಗೆ ಹೋದರೆ ಇಂತಹ ರೇಖೆ ಹೇಗೆ ಹೇಗೆ ಮೇಲೆ ಹತ್ತುತ್ತದೋ ಹಾಗೇ ಹೆಚ್ಚು ದಟ್ಟವಾಗಿ ಮತ್ತು ಕೆಂಪಾಗಿ ಆಗುತ್ತದೆ. ಈ ರೀತಿಯ ರೇಖೆಗಳನ್ನು ಅರ್ಥ ಮಾಡಿಕೊಳ್ಳಲು ಅನ್ಯ ಚಿಹ್ನೆಗಳ ಮೇಲೆ ಗಮನ ಕೊಡಬೇಕು. ಇಂತಹ ಜನಗಳ ಆರೋಗ್ಯ ಸುಧಾರಣೆಯಾಗುವುದರ ಜೊತೆಗೆ ಕೆಟ್ಟೂ ಹೋಗುತ್ತದೆ. ಅವರೊಳಗೆ ಸರ್ವ ಪ್ರಿಯರಾಗುವ ಮತ್ತು ಇತರರಿಂದ ಗೌರವ ಪಡೆದುಕೊಳ್ಳುವ ಇಚ್ಛೆ ನಿರಂತರ ಹೆಚ್ಚಾಗುತ್ತಾ ಹೋಗುತ್ತದೆ. ಹೆಸರು ಮತ್ತು ಕೀರ್ತಿ ಪಡೆಯಬೇಕೆಂಬ ಪ್ರಬಲ ಹಂಬಲವಿರುತ್ತದೆ. ಇಂತವರು ಆರೋಗ್ಯದಿಂದ ನಿರ್ಬಲರಾಗಿದ್ದೂ ಸಹ ಪ್ರಸಿದ್ಧಿ ಪಡೆಯಲು ಪ್ರತಿಯೊಂದು ರೀತಿಯ ಪ್ರಯತ್ನ ಮಾಡುತ್ತಾರೆ.

ಒಂದು ವೇಳೆ ಆರೋಗ್ಯ ರೇಖೆ ಕೂದಲಿನಂತೆ ತೆಳುವಾಗಿ ಮತ್ತು ನೇರವಾಗಿದ್ದರೆ ವ್ಯಕ್ತಿ ಬಹಳ ನಿರ್ದಯಿಯಾಗುತ್ತಾನೆ.

ಅಗಲವಾದ ಮತ್ತು ಬಿಳಿಯ ಬಣ್ಣದ ಆರೋಗ್ಯ ರೇಖೆ ಅಜೀರ್ಣ, ವಾಯುಪ್ರಕೋಪಕ್ಕೆ ಸಂಬಂಧಿಸಿದ ಖಾಯಿಲೆಗಳನ್ನು ನೀಡುತ್ತದೆ.

ಗರಗಸದ ಹಲ್ಲುಗಳಂತೆ ಇರುವ ಆರೋಗ್ಯರೇಖೆ ಉಳ್ಳ ವ್ಯಕ್ತಿ ವಿಶ್ವಾಸಘಾತನಾಗುತ್ತಾನೆ. ಅವನಿಗೆ ಶ್ವಾಸಕೋಶದ ರೋಗ, ಪಿತ್ತದೋಷ ಮುಂತಾದ ರೋಗಗಳು ನಿರಂತರ ಪೀಡಿಸುತ್ತವೆ.

ಆರೋಗ್ಯರೇಖೆ ಮತ್ತು ಭಾಗ್ಯರೇಖೆ ಸೇರಿಕೊಂಡಿದ್ದು ಮತ್ತು ಮಸ್ತಿಷ್ಕ ರೇಖೆಯ ಕೆಳಗೆ ತ್ರಿಕೋನ ಉಂಟಾಗಿದ್ದರೆ ಮನುಷ್ಯ ಯಶಸ್ವಿಯೂ, ದೀರ್ಘದರ್ಶಿಯೂ, ಶಾಸ್ತ್ರಜ್ಞನೂ ಆಗುತ್ತಾನೆ. ಇವನು ಮೀಮಾಂಸಕನೂ ಸಹ ಆಗುತ್ತಾನೆ.

ಅಂಗೈನ ಮಧ್ಯದಿಂದ ಉತ್ಪನ್ನವಾದ ಆರೋಗ್ಯರೇಖೆ ಉಳ್ಳ ವ್ಯಕ್ತಿ ಬುದ್ಧಿವಂತನೂ, ವಾಕ್‌ಪಟುವು, ಸ್ವಕಾರ್ಯದಕ್ಷನು, ಮೇಧಾವಿಯೂ, ಸ್ವಸ್ಥನೂ, ಚಂಚಲನೂ, ಪ್ರಕೃತಿಪ್ರೇಮಿಯೂ ಆಗುತ್ತಾನೆ.

ಸ್ವಾಸ್ಥರೇಖೆಯಿಂದ ಅಂಟಿಕೊಂಡಿರುವ ತ್ರಿಕೋನ ಮತ್ತು ತ್ರಿಕೋನದ ಮಧ್ಯೆ ತ್ರಿಶೂಲ ಇದ್ದರೆ ಇದು ಅತ್ಯಂತ ಶ್ರೇಷ್ಠ ಲಕ್ಷಣವಾಗಿದೆ. ಇಂತಹ

ವ್ಯಕ್ತಿ ವೀರನೂ, ಸೌಭಾಗ್ಯ ಶಾಲಿಯೂ, ಧರ್ಮಜ್ಞನೂ ಆಗುತ್ತಾನೆ.

ತ್ರಿಶೂಲವನ್ನು ಐಶ್ವರ್ಯದ ಪ್ರತೀಕವೆಂದು ನಂಬಲಾಗಿದೆ. ಖಂಡಿತ ತ್ರಿಶೂಲ ಮೋಸ ಮಾಡುವ ಅಥವಾ ಮೋಸ ಹೋಗುವ ಸೂಚನೆ ನೀಡುತ್ತದೆ. ಇವರ ಕಾರ್ಯ ಸಫಲವಾಗುತ್ತಾ ಆಗುತ್ತಾ ಕೆಟ್ಟುಹೋಗುತ್ತದೆ ಮತ್ತು ಗೆಲುವು ಸೋಲಿಗೆ ಬದಲಾಗಿಬಿಡುತ್ತದೆ.

ಆರೋಗ್ಯ ರೇಖೆ ಎಲ್ಲಿ ಕತ್ತರಿಸಿಹೋಗಿರುವುದೋ ಅಲ್ಲಿ ಒಂದು ವೇಳೆ ವರ್ಗ ಉಂಟಾದರೆ ಈ ಲಕ್ಷಣ ಕತ್ತರಿಸುವಿಕೆಯ ದೋಷವನ್ನು ಸಮಾಪ್ತಿಗೊಳಿಸುವುದರಲ್ಲಿ ಸಹಾಯಕವಾಗಿರುತ್ತದೆ. ಆದರೆ ಒಂದು ವೇಳೆ ಈ ಮಾರ್ಗವೂ ಸಹ ಮುರಿದುಹೋಗಿದ್ದರೆ ರೋಗದ ಅಪಾಯ ಮತ್ತಷ್ಟು ಹೆಚ್ಚಾಗುತ್ತದೆ.

ಖಂಡಿಸಲ್ಪಟ್ಟಿರುವ ಆರೋಗ್ಯ ರೇಖೆ ಯಕೃತ್ತು ಮತ್ತು ಉದರ ರೋಗ ಉಂಟಾಗುವ ಪರಿಚಯ ನೀಡುತ್ತದೆ. ಇವರ ಜೊತೆಯಲ್ಲಿ ಒಂದು ವೇಳೆ ಸೂಕ್ಷ್ಮ ರೇಖೆಗಳ ಗುಚ್ಛ ಇದ್ದರೆ ವ್ಯಕ್ತಿ ಕ್ರೋಧಿಯೂ ಮತ್ತು ಶೀಘ್ರ ಕೋಪಿ ಸ್ವಭಾವದವನಾಗುತ್ತಾನೆ. ಇಂಥವರ ಎದೆ ಅವಶ್ಯವಾಗಿ ಕೆಟ್ಟು ಹೋಗುತ್ತದೆ.

ಯಾವ ಕೈನಲ್ಲಿ ಆರೋಗ್ಯ ರೇಖೆ ಇರುವುದಿಲ್ಲವೋ ಆದರೆ ಆ ಸ್ಥಾನದ ಮೇಲೆ ಕೆಲವು ಚಿಕ್ಕ ಮತ್ತು ತೆಳುವಾದ ಗೀರುಗಳಂತೆ ಇರುವುದೋ ಅಂಥವರಿಗೆ ಉದರವ್ಯಾಧಿ, ಯಕೃತ್ ದೋಷ ಉಂಟಾಗುತ್ತದೆ.

ಆರೋಗ್ಯ ರೇಖೆಯು ಯಾವುದಾದರೂ ಭಾಗದ ಮೇಲೆ ಬೇಡಿಯು ಗುರುತಾಗಿದ್ದರೆ ಮತ್ತು ಉಳಿದ ಭಾಗ ಸುಂದರ ಮತ್ತು ಶ್ರೇಷ್ಠವಾಗಿದ್ದರೂ ಸಹ ಬೇಡಿಯು ಆಯಸ್ಸಿನ ಭಾಗದ ಮೇಲೆ ಮಾನಸಿಕ ವಿಕಾರ ಉತ್ಪನ್ನವಾಗುತ್ತದೆ. ಇದರ ಜೊತೆಯಲ್ಲೇ ಒಂದು ವೇಳೆ ಶೀರ್ಷ ರೇಖೆಯು ಮೇಲೂ ಸಹ ಅದೇ ಆಯಸ್ಸಿನ ಮೇಲೆ ದ್ವೀಪವಿದ್ದರೆ ಮತ್ತಷ್ಟು ಅಶುಭತೆಯನ್ನು ನೀಡುತ್ತದೆ. ರೋಗ ಉನ್ಮಾದಕ್ಕೆ, ಹುಚ್ಚಿಗೆ, ಸನ್ನಿಪಾತಕ್ಕೆ ತಿರುಗಿಕೊಳ್ಳುತ್ತದೆ.

ಆರೋಗ್ಯ ರೇಖೆಯನ್ನು ಎಲ್ಲಿಯಾದರೂ ಯಾವುದಾದರೂ ಒಂದು ಅಥವಾ ಅಧಿಕ ಅಡ್ಡರೇಖೆಗಳು ಕತ್ತರಿಸಿದರೆ ಇದು ಗಂಭೀರ ರೋಗದ ಕಡೆಗೆ ಸಂಕೇತ ಮಾಡುತ್ತದೆ. ದ್ವೀಪ, ಕ್ರಾಸ್ ಅಥವಾ ಬಿಂದು ಚಿಹ್ನೆಗಳು ಸಹ ಗಂಭೀರ ರೋಗವನ್ನು ಪರಿಚಯಿಸುತ್ತವೆ.

ಜೀವನ ರೇಖೆ ಮತ್ತು ಆರೋಗ್ಯ ರೇಖೆ ಒಂದೇ ಆಯುಸ್ಸಿನ ಸ್ಥಾನಕ್ಕೆ ಹೋಗಿ ದೋಷಪೂರ್ಣವಾದರೆ ಜೀವನ ಸಂಕಟಪೂರ್ಣವಾಗಿರುತ್ತದೆಂದು ಭಾವಿಸಬೇಕು.

ಆರೋಗ್ಯ ರೇಖೆ ಸಾಗುತ್ತಾ ಸಣ್ಣದಾಗಿ ಲುಪ್ತವಾದರೆ ಗಂಭೀರ ಪರಿಣಾಮವೆಂದು ತಿಳಿದುಕೊಳ್ಳಬೇಕು. ಆದರೆ ಬುಧ ಪರ್ವತದ ಮೇಲೆ ಪುನಃ ಕಾಣಿಸಿಕೊಂಡರೆ ವ್ಯಕ್ತಿ ಗಂಭೀರ ರೋಗದಿಂದ ಉದ್ಧಾರನಾಗುತ್ತಾನೆ.

ಒಂದು ವೇಳೆ ಆರೋಗ್ಯ ರೇಖೆಯಲ್ಲಿ ಚಿಕ್ಕ ಚಿಕ್ಕ ದ್ವೀಪಗಳು ಕಾಣಿಸಿಕೊಂಡರೆ, ಉಗುರು ಉದ್ದವಾಗಿದ್ದರೆ ಎದೆ ನಿಶ್ಯಕ್ತವಾಗುತ್ತದೆ ಮತ್ತು ಅವು ಶ್ವಾಸಕೋಶ ರೋಗದ ಚಿಹ್ನೆಗಳಾಗಿರುತ್ತವೆ. ಒಂದು ವೇಳೆ ರೇಖೆಗಳು ಅಗಲವಾಗಿದ್ದರೆ ವ್ಯಕ್ತಿ ಗಂಟಲು ರೋಗದಿಂದ ಬಳಲುತ್ತಾನೆ.

ಆರೋಗ್ಯ, ಭಾಗ್ಯ ಮತ್ತು ಮಸ್ತಿಷ್ಕ ರೇಖೆಯೊಂದಿಗೆ ಸೇರಿ ತ್ರಿಭುಜವಾಗಿದ್ದರೆ ಮನುಷ್ಯ ತಾಂತ್ರಿಕನಾಗುತ್ತಾನೆ ಮತ್ತು ಗುಪ್ತ ವಿಷಯದಲ್ಲಿ ನಂಬಿಕೆ ಇರಿಸುವವನಾಗುತ್ತಾನೆ.

ಯಾರ ಕೈಲಿ ಆರೋಗ್ಯರೇಖೆ ಇರುವುದೇ ಇಲ್ಲವೋ ಅಂತಹ ವ್ಯಕ್ತಿ ಆರೋಗ್ಯವಂತನೂ ನಿರೋಗಿಯೂ ಆಗುತ್ತಾನೆ. ಸ್ವಕಾರ್ಯ ದಕ್ಷನಾಗಿರುತ್ತಾನೆ. ಕಾರ್ಯದ ಮಹತ್ವದ ಎದುರು ತನ್ನ ಪ್ರಾಣವನ್ನೂ ಸಹ ಲೆಕ್ಕಿಸುವುದಿಲ್ಲ.

ಆರೋಗ್ಯ ರೇಖೆ ಒಂದು ವೇಳೆ ಪ್ರದಕ್ಷಿಣೆ ಹಾಕಿಕೊಂಡು ಚಂದ್ರ ಪರ್ವತದ ಮೇಲೆ ಹೊರಟುಹೋಗಿದ್ದರೆ ವ್ಯಕ್ತಿ ಯಾವಾಗಲೂ ರೋಗ ಪೀಡಿತನೂ ಮತ್ತು ಚಿಂತಿತನೂ ಆಗಿರುತ್ತಾನೆ.

ಆರೋಗ್ಯ ರೇಖೆಯ ಮೇಲೆ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಗೆ ನಿದ್ರೆಯಲ್ಲಿ ಕನವರಿಸುವ ಬಡಬಡಿಸುವ ರೋಗ ಉಂಟಾಗುತ್ತದೆ. ಇಂತವನಿಗೆ ಪ್ರಾಯಃ ಪ್ರವಾಸ ಮತ್ತು ಪರ್ಯಟನೆಯ ಕನಸುಗಳೇ ಕಂಡುಬರುತ್ತವೆ.

ಆರೋಗ್ಯ ರೇಖೆ ಎಲ್ಲಿ ಹೃದಯ ರೇಖೆಯನ್ನು ಸಂಧಿಸುವುದೋ ಆ ಸ್ಥಾನವನ್ನು ಬಿಟ್ಟು ಬೇರೆಯಲ್ಲಿಯಾದರೂ ಸರಪಳಿ ಅಥವಾ ಕ್ರಾಸ್ ಚಿಹ್ನೆ ಇದ್ದರೆ ಧನಸಂಕಟ, ವ್ಯಾಪಾರ ನಾಶ ಉಂಟಾಗುತ್ತದೆ.

ಆರೋಗ್ಯ ರೇಖೆಯಿಂದ ಅಂಟಿಕೊಂಡಿರುವ ಚತುರ್ಭುಜ ಮತ್ತು ಅದರಲ್ಲಿ ಕ್ರಾಸ್ ಚಿಹ್ನೆ ಇದ್ದರೆ ಜೊತೆಗೆ ಬೆರಳುಗಳು ಮೃದುವಾಗಿದ್ದರೆ ಹಾಗೂ ಪ್ರಥಮ ಪರ್ವ ಉದ್ದವಾಗಿ ಮತ್ತು ಸುವಿಕಸಿತವಾಗಿದ್ದರೆ ವ್ಯಕ್ತಿ

ದಾನಿಯೂ, ಧರ್ಮಾತ್ಮನೂ, ಪರೋಪಕಾರಿಯೂ ಆಗುತ್ತಾನೆ.

ಆರೋಗ್ಯ ರೇಖೆಯ ಮೇಲೆ ನಕ್ಷತ್ರ ಚಿಹ್ನೆ ಇದ್ದರೆ ಅದು ಅಪಾಯವನ್ನು ಉತ್ಪನ್ನ ಮಾಡುತ್ತದೆ. ರೇಖೆಯ ಅಂತ್ಯದಲ್ಲಿ ನಕ್ಷತ್ರ ಚಿಹ್ನೆ ಜೊತೆಗೆ ಚಂದ್ರ ಪರ್ವತದ ಮೇಲೂ ಸಹ ನಕ್ಷತ್ರ ಚಿಹ್ನೆ ಇದ್ದರೆ ವ್ಯಕ್ತಿ ಆತ್ಮಹತ್ಯೆ ಮಾಡಿಕೊಳ್ಳುವ ಪ್ರಯತ್ನವನ್ನು ಹಲವು ಬಾರಿ ಮಾಡುತ್ತಾನೆ.

ಆರೋಗ್ಯ ರೇಖೆಯ ಅಂತ್ಯದಲ್ಲಿ ನಕ್ಷತ್ರ, ಎರಡೂ ಕೈಗಳಲ್ಲಿ ಜೀವನ ರೇಖೆಯ ಅಂತ್ಯದ ಮೇಲೆ ನಕ್ಷತ್ರ ಚಿಹ್ನೆ ಇದ್ದರೆ ಪಕ್ಷಾಘಾತದಂತಹ ರೋಗ ನೀಡುತ್ತದೆ.

ಶುಕ್ರ ಪರ್ವತ ಮತ್ತು ಹೃದಯ ರೇಖೆಯ ಮಧ್ಯದಲ್ಲಿನ ಶಾಖಾ ಸಮೂಹದಲ್ಲಿ ಸಮಾಪ್ತಿಗೊಳ್ಳುವ ಭಾಗ್ಯರೇಖೆಯ ಮೇಲೆ ದ್ವೀಪ ಚಿಹ್ನೆ ಇದ್ದರೆ ವಿವಾಹ ವಿಚ್ಛೇದನಕ್ಕೆ ಕಾರಣವಾಗುತ್ತದೆ.

ಬಹಳ ಇಕ್ಕಟ್ಟಾದ ಮತ್ತು ದಟ್ಟ ಬಣ್ಣದ ರೇಖೆ ಜೊತೆಯಲ್ಲೇ ಇಂತಹದೇ ಜೀವನ ರೇಖೆ ಮತ್ತು ಮಸ್ತಿಷ್ಕ ರೇಖೆಯ ಮೇಲೆ ಕಲೆ ಜ್ವರದ ಪ್ರವೃತ್ತಿ ಉಂಟುಮಾಡುತ್ತದೆ.

ಸೂರ್ಯನ ಕಡೆಗೆ ಹೋಗುವ ಆರೋಗ್ಯ ರೇಖೆ ಜೊತೆಯಲ್ಲಿ ಪೂರ್ಣವಾದ ಮತ್ತು ಪುಷ್ಪವಾದ ಮಣಿಕಟ್ಟು ಧನಧಾನ್ಯ ಸಂಪನ್ನತೆಯನ್ನು ಕೊಡುತ್ತವೆ.

ಚಂದ್ರನಿಂದ ನಿಮ್ನ ಮಂಗಳದ ಕಡೆಗೆ ಅರ್ಧ ವೃತ್ತಾಕಾರ ಮಾಡುವ ಆರೋಗ್ಯರೇಖೆ ಅಂತಃವೃತ್ತಿಯವನನ್ನಾಗಿ ಮಾಡುತ್ತದೆ.

ಈ ಆರೋಗ್ಯ ರೇಖೆ ಜೀವನ ರೇಖೆಯಂತೆ ಅಂಗೈನ ಮಧ್ಯಭಾಗದಿಂದ ಆರಂಭವಾದರೆ ಆರೋಗ್ಯ, ಕೀರ್ತಿ ಮತ್ತು ವ್ಯಾಪಾರದಲ್ಲಿ ಸಫಲತೆಯನ್ನು ನೀಡುತ್ತದೆ.

ಈ ರೇಖೆ ಮಸ್ತಿಷ್ಕ ರೇಖೆಯ ಮಧ್ಯಭಾಗದಿಂದ ಆರಂಭವಾಗಿ ಎರಡು ರೇಖೆಗಳನ್ನು ಸೇರಿಸಿದರೆ ವ್ಯಕ್ತಿ ಮಾನಸಿಕ ರೂಪದಿಂದ ವಿಕ್ಷಿಪ್ತನಾಗುತ್ತಾನೆ.

ಆರೋಗ್ಯ ರೇಖೆ ಒಂದು ವೇಳೆ ಅನೇಕ ಬಣ್ಣಗಳಿಂದ ಕೂಡಿದ್ದಾದರೆ ಪಕ್ಷಾಘಾತದ ಅಪಾಯ ಹೆಚ್ಚಾಗುತ್ತದೆ.

ಒಂದು ವೇಳೆ ಆರೋಗ್ಯ ರೇಖೆ ಚಂದ್ರ ಪರ್ವತದಿಂದ ಹಾದು ಅಂಗೈನ ದಡದಲ್ಲೇ ಸಾಗಿ ಬುಧದವರೆಗೆ ತಲುಪಿದರೆ ಆ ವ್ಯಕ್ತಿ ತನ್ನ ಜೀವನದಲ್ಲಿ ಅನೇಕ ಬಾರಿ ವಿದೇಶ ಯಾತ್ರೆ ಮಾಡುತ್ತಾನೆ.

ಆರೋಗ್ಯ ರೇಖೆ ಮತ್ತು ಮಸ್ತಿಷ್ಕ ರೇಖೆಯು ಮೇಲೆ ಕಲೆ ವ್ಯಕ್ತಿಯನ್ನು ಜೀವನವಿಡೀ ರೋಗಿಯಾಗುವಂತೆ ಮಾಡುತ್ತದೆ.

ಆರೋಗ್ಯ ರೇಖೆಯು ಅಂತ್ಯದ ಮೇಲೆ ಚತುರ್ಭುಜ ಉಂಟಾದರೆ ವ್ಯಕ್ತಿಯನ್ನು ದಮ್ಮು ರೋಗಿಯನ್ನಾಗಿ ಮಾಡುತ್ತದೆ.

ನಿಶ್ಶಕ್ತ ಆರೋಗ್ಯರೇಖೆ, ದಪ್ಪ ಬೆರಳುಗಳು ಇದ್ದರೆ ವ್ಯಕ್ತಿ ಲಕ್ವಾ ರೋಗಿಯಾಗಿರುತ್ತಾನೆ.

ಚಂದ್ರರೇಖೆ ಬಂದು ಆರೋಗ್ಯ ರೇಖೆಗೆ ಸೇರಿಕೊಂಡಿದ್ದರೆ ವ್ಯಕ್ತಿ ಕಾವ್ಯ ಪ್ರಣೇತನಾಗುತ್ತಾನೆ. ವಿದೇಶ ಯಾತ್ರೆ ಮಾಡುತ್ತಾನೆ.

ಅಂಗೈನ ಒಳಗೆ ಹೂತುಕೊಂಡಿರುವ ಆರೋಗ್ಯ ರೇಖೆ ಗುಪ್ತರೋಗವನ್ನು ಕೊಡುತ್ತದೆ. ಇಮ್ಮಡಿ ಆರೋಗ್ಯ ರೇಖೆ ಸೂರ್ಯ ಪರ್ವತವನ್ನು ಸ್ಪರ್ಶ ಮಾಡಿದರೆ ಆ ವ್ಯಕ್ತಿ ರಾಜನೀತಿಯಲ್ಲಿ ಒಳ್ಳೆಯ ಸಫಲತೆಯನ್ನು ಪಡೆಯುತ್ತಾನೆ.

ಆರೋಗ್ಯ ರೇಖೆ ಇಲ್ಲದೆ ಹೋದರೆ, ಆದರೆ ಬುಧ ಕ್ಷೇತ್ರ ಸಮ ಉನ್ನತವಾಗಿದ್ದರೆ ವ್ಯಕ್ತಿ ಸಂತೋಷ ಸ್ವಭಾವದವನು, ಸಂತಸ ಮನಸ್ಸಿನವನೂ ಆಗುತ್ತಾನೆ.

ಜೀವನ ರೇಖೆಯು ಜೊತೆಯಲ್ಲಿ ಸರಿಯಾಗಿ ಸೇರಿಕೊಂಡಿರುವ, ಆದರೆ ವಕ್ರವಕ್ರವಾಗಿರುವ ಜೊತೆಯಲ್ಲಿ ಜೀವನ ರೇಖೆಯು ಮೇಲೆ ಕೆಂಪು ಮತ್ತು ನೀಲಿ ಕಲೆ ಇರುವ ಆರೋಗ್ಯರೇಖೆ ವ್ಯಕ್ತಿಯ ಹೃದಯರೋಗದ ಕಾರಣವಾಗುತ್ತದೆ.

ಆರೋಗ್ಯ ರೇಖೆಯಿಂದ ಯಾವುದಾದರೂ ರೇಖೆ ಅಥವಾ ರೇಖೆಗಳು ಸೂರ್ಯನ ಕಡೆಗೆ ಹೋದರೆ ಅದು ವ್ಯಾಪಾರದಲ್ಲಿ ಪರಿವರ್ತನೆಯನ್ನು ಉಂಟು ಮಾಡುತ್ತದೆ.

ಆರೋಗ್ಯ ರೇಖೆಯು ಮೇಲು ಭಾಗದಲ್ಲಿ ಕ್ರಾಸ್ ಚಿಹ್ನೆ ಜೊತೆಯಲ್ಲಿ ಮಸ್ತಿಷ್ಕ ರೇಖೆಯು ಮೇಲೆ ವೃತ್ತವಿದ್ದರೆ ವ್ಯಕ್ತಿ ಕುರುಡನಾಗುತ್ತಾನೆ.

ಶುಕ್ರ ಪರ್ವತದಿಂದ ಉದಿತವಾದ ಅಲೆಯುಂತಿರುವ ಮತ್ತು ಉದ್ದವಾಗಿರುವ ಆರೋಗ್ಯ ರೇಖೆ ಕಾಮುಕತೆಯನ್ನು ನೀಡುತ್ತದೆ.

## 7. ವಿವಾಹ ರೇಖೆ (Marriage Line)

ದಾಂಪತ್ಯ ಜೀವನ ಮನುಷ್ಯ ಜೀವನದ ಒಂದು ಆವಶ್ಯಕ ಅಂಗವಾಗಿದೆ. ಇಚ್ಛಿತ ಜೀವನ ಜೊತೆಗಾರ ದೊರೆಯುವ ಅರ್ಥ ಜೀವನದ

ಪ್ರತಿ ಹೊಸ ಆಸೆ, ವಿಶ್ವಾಸ, ಪ್ರೇಮ, ಹೊಸಬಲ, ಸ್ಫೂರ್ತಿ ದೊರೆಯುವುದಾಗಿದೆ. ವಿರುದ್ಧ ಜೀವನ ಜೊತೆಗಾರ, ಪ್ರಾಪ್ತಿಯಾದರೆ ಎಲ್ಲಾ ಪರಿಸ್ಥಿತಿಗಳು ಅನುಕೂಲವಾಗಿದ್ದರೂ ಸಹ ವ್ಯಕ್ತಿ ತಾನು ಸುಸ್ತಾಗಿರುವಂತೆ, ಬೇಸರಗೊಂಡಿರುವಂತೆ, ಉತ್ಸಾಹಹೀನನಂತೆ, ನಿರಾಶನಾಗಿರುವಂತೆ ಅನುಭವ ಪಡೆದುಕೊಳ್ಳುತ್ತಾನೆ. ಮೂರ್ಖತೆ ಜೀವನದ ಮೋಹವನ್ನು ಭಂಗಗೊಳಿಸುತ್ತದೆ. ಅವನಿಗೆ ಮಾನವ ಜೀವನ ಭಾರ ಸ್ವರೂಪವಾಗಿ ಕಾಣಿಸುತ್ತದೆ. ಆದ್ದರಿಂದ ಅನುಕೂಲ ಜೀವನ ಜೊತೆಗಾರ ಇರಬೇಕಾದುದು ಆವಶ್ಯಕ. ಇದರ ಪರೀಕ್ಷೆಯನ್ನು ನಮ್ಮ ಕೈನ ರೇಖೆಗಳು ಮಾಡುತ್ತವೆ. ಶುಕ್ರ, ಬುಧ ಮತ್ತು ಚಂದ್ರಕ್ಷೇತ್ರದಿಂದ ನಾವು







ವಿವಾಹಿತ ಜೀವನದ ಜ್ಞಾನವನ್ನು ಪ್ರಾಪ್ತಿ ಮಾಡಿಕೊಳ್ಳಬಹುದು. ಶುಕ್ರ ಕಾಮ ಮತ್ತು ಪ್ರಣಯದ ನಿರ್ವಾಹಕ ಬುಧ ಸಂತುಷ್ಟಿ ಮತ್ತು ಸಾಮಾಜಿಕ ಮರ್ಯಾದೆಯ ಸೃಷ್ಟಿಕರ್ತ. ಚಂದ್ರ ದಾಂಪತ್ಯ ಜೀವನ ಮತ್ತು ರಸಿಕತೆ,

ನಿಷ್ಠೆ, ಸಾಮಾಜಿಕ ಪ್ರತಿಷ್ಠೆ, ಆರ್ಥಿಕ ಸ್ಥಿತಿ, ಪದವಿ, ಗೌರವದ ಪರಿಚಾಯಕನಾಗಿರುತ್ತಾನೆ.

ಅಂಗೈನಲ್ಲಿ ಬದಿಯಿಂದ ಈ ರೇಖೆ ಹೃದಯ ರೇಖೆಯ ಮೇಲೆ ಬುಧಕ್ಷೇತ್ರದಲ್ಲಿ ಅಡ್ಡವಾಗಿರುತ್ತದೆ. ಇದು ಸಂಖ್ಯೆಯಲ್ಲಿ ಒಂದು ಅಥವಾ ಒಂದಕ್ಕಿಂತ ಹೆಚ್ಚಾಗಿರುತ್ತದೆ. ಈ ರೇಖೆಗಳು ಎಷ್ಟು ಹೆಚ್ಚಾಗಿರುತ್ತದೋ ಅಷ್ಟೇ ಮದುವೆಯಾಗುತ್ತದೆಂದು ಹೇಳುತ್ತಾರೆ. ಆದರೆ ಇದು ಸರಿಯೆಂದು ನಂಬಲಾಗುವುದಿಲ್ಲ. ಆದರೆ ಅನೇಕ ಸ್ತ್ರೀಯರೊಂದಿಗೆ ಅಥವಾ ಪುರುಷರೊಂದಿಗೆ ಸಂಬಂಧ ಖಂಡಿತಾ ಆಗುವುದೆಂದು ಹೇಳಬಹುದು.

ಈ ರೇಖೆಗಳು ಒಂದೇ ಸಮನಾಗಿ ಅಸ್ಪಷ್ಟ ಅಥವಾ ಹರಿದು ಮುರಿದು ಹೋಗಿದ್ದರೆ ಇದು ವೈವಾಹಿಕ ವಿಷಮತೆಯನ್ನು ಪ್ರಕಟಗೊಳಿಸುತ್ತದೆ. ಇಂತಹ ಜಾತಕನು ನಿಮ್ನ ಕುಲದಲ್ಲಿ ವಿವಾಹ ಮಾಡಿಕೊಳ್ಳುತ್ತಾನೆ.

ಉದ್ದವಾದ ತೆಳುವಾದ ಸುಂದರ ರೇಖೆ ಸುಶೀಲ ಕನ್ಯೆಯೊಂದಿಗೆ ವಿವಾಹವಾಗುವುದೆಂದು ಸೂಚಿಸುತ್ತದೆ. ಈ ರೇಖೆ ಸುಂದರವಾಗಿದ್ದರೂ ಸಹ ದಪ್ಪವಾಗಿದ್ದರೆ ವಿಧವೆ ಅಥವಾ ವಿಧುರನೊಂದಿಗೆ ವಿವಾಹವಾಗುತ್ತದೆಂಬುದನ್ನು ತಿಳಿಸುತ್ತದೆ.

ಒಂದು ವೇಳೆ ಹರಿದ ಮುರಿದ ರೇಖೆ ಮನುಷ್ಯನ ಕೈಯಲ್ಲಿದ್ದರೆ ವಿಧುರನು ಮತ್ತು ಸ್ತ್ರೀಯ ಕೈಯಲ್ಲಿದ್ದರೆ ವಿಧವೆಯೂ ಆಗುತ್ತಾಳೆ. ಒಂದು ವೇಳೆ ಇಬ್ಬರ ಕೈಗಳಲ್ಲೂ ಒಂದೇ ರೀತಿಯ ರೇಖೆ ಇದ್ದರೆ ವಿಧುರ ಮತ್ತು ವಿಧವೆಯ ಪರಸ್ಪರ ವಿವಾಹವಾಗುತ್ತದೆಂದು ತಿಳಿಸುತ್ತದೆ.

ದ್ವೀಪ ಚಿಹ್ನೆಯುಕ್ತ ವಿವಾಹ ರೇಖೆ ಯಾವುದೋ ಹತ್ತಿರದ ಸಂಬಂಧಿಯೊಂದಿಗೆ ಪ್ರೇಮವಾಗುವುದೆಂದು ವ್ಯಕ್ತಗೊಳಿಸುತ್ತದೆ. ಹೃದಯ ರೇಖೆಯ ಕಡೆಗೆ ಬಾಗಿರುವ ಈ ರೇಖೆ ವಿಧುರ ಅಥವಾ ವಿಧವೆಯೊಂದಿಗೆ ಪ್ರಣಯ ಪ್ರಕಟಿಸುತ್ತದೆ. ವಿವಾಹ ರೇಖೆ ಅನೇಕ ಉದ್ದ ರೇಖೆಗಳಿಂದ ಕತ್ತರಿಸಲ್ಪಟ್ಟರೆ ಪ್ರಣಯ ಜೀವನ ಸುಖಪ್ರದವಾಗಿರುವುದಿಲ್ಲ. ಅನೇಕ ಕೈಗಳಲ್ಲಿ ಹೃದಯ ರೇಖೆಯ ಕಡೆಗೆ ಬಾಗಿರುವ ಈ ರೇಖೆ ವಿವಾಹ ಆಗಿ ಪುನಃ ವಿಚ್ಛೇದನವಾಗುವ ಭಾವನೆಯನ್ನು ಪ್ರಕಟಗೊಳಿಸುತ್ತದೆ.

ಕೆಲವು ವಿವಾಹ ರೇಖೆಯ ಜೊತೆಯಲ್ಲಿ ಪ್ರಭಾವಿಕ ರೇಖೆಗೂ ಸಹ ಇರುತ್ತವೆ. ಒಂದು ವೇಳೆ ಪ್ರಭಾವಿಕ ರೇಖೆಯಲ್ಲಿ ತಾಪವಿದ್ದರೆ ಹುಡುಗ ಅಥವಾ ಹುಡುಗಿಯ ಮದಾಚಾರಣ ವಿವಾಹವಾಗುವುದಕ್ಕೆ ಅಡಚಣೆ

ಉಂಟುಮಾಡುತ್ತದೆ.

ಒಂದು ವೇಳೆ ಪ್ರಭಾವಿಕ ರೇಖೆಯನ್ನು ಬೇರೆ ಚಿಕ್ಕ ಚಿಕ್ಕ ರೇಖೆಗಳು ಕತ್ತರಿಸುತ್ತಿದ್ದರೆ ವಿವಾಹ ವಿಚ್ಛೇದನವಾಗುವುದೆಂದು ತಿಳಿಸುತ್ತದೆ.

ಮುಳ್ಳಿನಂತಿರುವ ಪ್ರಭಾವಿಕ ರೇಖೆಗಳು ಮನುಷ್ಯನನ್ನು ಸದಾ ರೋಗಿಯಾಗಿರುವಂತೆ ಮಾಡುತ್ತವೆ.

ಒಂದು ವೇಳೆ ಸ್ತ್ರೀ ಅಥವಾ ಪುರುಷರ ಕೈನಲ್ಲಿ ವಿವಾಹ ರೇಖೆ ಕೆಳಭಾಗದ ಕಡೆಗೆ ಬಾಗಿದ್ದರೆ ಸ್ತ್ರೀಯ ರೇಖೆಯಿಂದ ಪುರುಷನ ಮತ್ತು ಪುರುಷನ ರೇಖೆಯಿಂದ ಸ್ತ್ರೀಯ ಮೃತ್ಯು ಮೊದಲೇ ಆಗುತ್ತದೆ. ಈ ರೇಖೆ ಒಂದು ವೇಳೆ ಒಂದೇ ಬಾರಿಗೆ ತಿರುಗಿಕೊಂಡಿದ್ದರೆ ಅಕಸ್ಮಾತ್ ಸಾವು ಉಂಟಾಗುವುದೆಂದು ತಿಳಿಯಬೇಕು. ಒಂದು ವೇಳೆ ನಿಧಾನವಾಗಿ ತಿರುಗಿಕೊಂಡಿದ್ದರೆ ಕೆಲವು ದಿನಗಳು ರೋಗದಿಂದ ನರಳಿದ ನಂತರ ಮೃತ್ಯುವಾಗುತ್ತದೆಂದು ಭಾವಿಸಬೇಕು.

ಒಂದು ವೇಳೆ ವಿವಾಹ ರೇಖೆ ಸೂರ್ಯ ರೇಖೆಯನ್ನು ಕೆಳಭಾಗದ ಕಡೆಗೆ ಕತ್ತರಿಸಿದರೆ ವಿವಾಹ, ಧನ, ಗೌರವ ಮತ್ತು ಐಶ್ವರ್ಯದ ನಾಶವಾಗುತ್ತದೆ.

ಒಂದು ವೇಳೆ ಹೃದಯ ರೇಖೆಯು ಅತ್ಯಂತ ಸಮೀಪ ವಿವಾಹ ರೇಖೆ ಇದ್ದರೆ ವಿವಾಹ ಬಾಲ್ಯಾವಸ್ಥೆಯಲ್ಲಿಯೇ ಆಗುವುದು ಖಂಡಿತವೆಂದು ಭಾವಿಸಬೇಕು.

ಒಂದು ವೇಳೆ ಎರಡೂ ಕೈಗಳಲ್ಲಿ ಗುರು ಪರ್ವತದ ಮೇಲೆ ಗುಣಾಕಾರದ ಚಿಹ್ನೆ ಸ್ಪಷ್ಟವಾಗಿ, ಶುದ್ಧವಾಗಿ ಮತ್ತು ದಟ್ಟವಾಗಿ ಕಾಣಿಸಿಕೊಂಡರೆ ವಿವಾಹ ಯಾವುದೋ ದೊಡ್ಡ ಮನೆಯ ಕನ್ಯೆಯೊಂದಿಗೆ ಅವಶ್ಯವಾಗಿ ಆಗುತ್ತದೆ.

ವಿವಾಹ ರೇಖೆ ಮಧ್ಯದಿಂದ ಮುರಿದುಹೋಗಿದ್ದರೆ ಮತ್ತು ಅದನ್ನು ಯಾವುದಾದರೂ ಮತ್ತೊಂದು ರೇಖೆ ಕತ್ತರಿಸಿಕೊಂಡು ಮುಂದಕ್ಕೆ ಹೊರಟುಹೋಗಿದ್ದರೆ ಮತ್ತು ಹೃದಯ ರೇಖೆಯು ಸಮೀಪಕ್ಕೆ ತಲುಪಿಬಿಟ್ಟಿದ್ದರೆ ವಿವಾಹದ ಪ್ರಸ್ತಾಪವೇನೋ ಖಂಡಿತಾ ಆಗುತ್ತದೆ, ಆದರೆ ವಿವಾಹ ನಡೆಯುವುದಿಲ್ಲ.

ಒಂದು ವೇಳೆ ವಿವಾಹ ರೇಖೆಯು ಶಾಖೆ ಹೃದಯ ರೇಖೆಯು ಕಡೆಗೆ ಬಾಗಿದ್ದರೆ ಪತಿ ಪತ್ನಿಯ ಅಭಿಪ್ರಾಯಗಳಲ್ಲಿ ಭಿನ್ನಾಭಿಪ್ರಾಯ ಇರುವುದರಿಂದ ಅವರ ವಿವಾಹ ದುಃಖಪ್ರದವಾಗಿರುತ್ತದೆ.

ಒಂದು ವೇಳೆ ವಿವಾಹ ರೇಖೆಯಿಂದ ಶಾಖೆಯೊಂದು ಹೊರಟಿದ್ದರೆ ಮತ್ತು ಹೃದಯ ರೇಖೆಯು ಕಡೆಗೆ ಹೊರಟಿದ್ದರೆ ಆದರೆ ಅದರೊಂದಿಗೆ ಸೇರಿಕೊಳ್ಳದಿದ್ದರೆ ಇಂತಹ ಪತಿ ಪತ್ನಿಯರ ಜೀವನ ಸುಖಮಯವಾಗೇನೋ ಖಂಡಿತಾ ಇರುತ್ತದೆ ಆದರೆ ಇವರು ಪರಸ್ಪರ ಸದಾ ಜಗಳವಾಡುತ್ತಿರುತ್ತಾರೆ.

ಒಂದು ವೇಳೆ ಈ ಒಂದು ಶಾಖೆ ಸ್ತ್ರೀಯ ಕೈಲಿದ್ದರೆ ಅವಳ ಪತಿ ಕುಡುಕನಾಗಿರುತ್ತಾನೆ ಮತ್ತು ನಶೆಯಲ್ಲಿ ಪತ್ನಿಯನ್ನು ಸದಾ ಹೊಡೆಯುವುದು, ಬೈಯ್ಯುವುದು ಮಾಡುತ್ತಾನೆ.

ಯಾವ ಮನುಷ್ಯನ ವಿವಾಹ ರೇಖೆಯ ಮೇಲೆ ನಕ್ಷತ್ರ ಸಮಾನ ಚಿಹ್ನೆ ಇದ್ದರೆ ಅಂತವನ ಪತ್ನಿ ಸತ್ತುಹೋಗುತ್ತಾಳೆ.

ಒಂದು ವೇಳೆ ವಿವಾಹ ರೇಖೆ ನೇರವಾಗಿ, ಉದ್ದವಾಗಿ ಮತ್ತು ದಟ್ಟವಾಗಿದ್ದರೆ ಮತ್ತು ಅದನ್ನು ಬೇರೆ ಯಾವುದಾದರೂ ರೇಖೆ ಕತ್ತರಿಸುತ್ತಿದ್ದರೆ ಇಂತಹ ಮನುಷ್ಯನ ಹೆಂಡತಿ ದೀರ್ಘಾಯುವು, ಸ್ವಸ್ಥಳೂ ಮತ್ತು ಸುಂದರ ಪತಿಯನ್ನು ಪ್ರೇಮಿಸುವವಳೂ ಆಗಿರುತ್ತಾಳೆ.

ಒಂದು ವೇಳೆ ವಿವಾಹ ರೇಖೆಯ ಕೆಳಗೆ ಶಾಖೆಗಳಿದ್ದರೆ ಮತ್ತು ಅದರ ಯಾವುದಾದರೂ ಶಾಖೆ ಶುಕ್ರಸ್ಥಾನವನ್ನು ಕತ್ತರಿಸುತ್ತಿದ್ದರೆ ವಿವಾಹ ಸಂಬಂಧ ಮುರಿದುಹೋಗುತ್ತದೆ.

ಈ ರೇಖೆ ಹೃದಯ ರೇಖೆಯ ಎಷ್ಟು ಹತ್ತಿರಕ್ಕೆ ಇರುವುದೋ ವಿವಾಹ ಅಷ್ಟೇ ಶೀಘ್ರವಾಗಿ ಆಗುತ್ತದೆ. ಸರಿಯಾದ ಸಮಯ ತಿಳಿದುಕೊಳ್ಳಲು ಹೃದಯ ರೇಖೆ ಮತ್ತು ಕಿರುಬೆರಳಿನ ಮಧ್ಯೆ ಇರುವ ದೂರವನ್ನು 70 ವರ್ಷ ಸುಮಾರೆಂದು ಭಾವಿಸಿ ತನ್ನ ಇಚ್ಛಾನುಸಾರ ಅದರ ಹತ್ತತ್ತು, ಐದೈದು ಇಷ್ಟಪಟ್ಟಷ್ಟು ಭಾಗ ಮಾಡಿಕೊಳ್ಳಬೇಕು. ಆಗ ಎಷ್ಟು ವರ್ಷದ ಭಾಗದ ಮೇಲೆ ರೇಖೆ ಸೇರುವುದೋ ಅದೇ ವರ್ಷದಲ್ಲಿ ವಿವಾಹವಾಗುತ್ತದೆ. ಕೆಳಗಿನ ಈ ನಿಯಮವನ್ನು ಗಮನಿಸಿ.

| ಪ್ರಥಮ ನಿಯಮ | ಸಮಯ ವಿಭಾಗ ಅಥವಾ ಆಯಸ್ಸು |
|---|---|
| ಹೃದಯ ರೇಖೆಯ ಮೇಲ ಕಿರುಬೆರಳಿನ ಕಡೆಗೆ | 15 ರಿಂದ 20 ವರ್ಷದವರೆಗೆ 4<br>25 ರಿಂದ 35 ವರ್ಷದವರೆಗೆ 3<br>40 ರಿಂದ 50 ವರ್ಷದವರೆಗೆ 2<br>55 ರಿಂದ 70 ವರ್ಷದವರೆಗೆ 1 |
| **ಎರಡನೇ ನಿಯಮ** | |
| ಕಿರು ಬೆರಳಿನ ಕೆಳಗೆ ಹೃದಯ ರೇಖೆಯ ಕಡೆಗೆ | 15 ರಿಂದ 20 ವರ್ಷದವರೆಗೆ 1<br>25 ರಿಂದ 35 ವರ್ಷದವರೆಗೆ 2<br>40 ರಿಂದ 50 ವರ್ಷದವರೆಗೆ 3<br>55 ರಿಂದ 70 ವರ್ಷದವರೆಗೆ 4 |

ಇದರ ಹೊರತು ವಿವಾಹದ ಸಮಯ ತಿಳಿದುಕೊಳ್ಳಲು ಮತ್ತೊಂದು ಪ್ರಮಾಣವಿದೆ. ಅದೇನೆಂದರೆ ಜೀವನ ರೇಖೆಯಿಂದ ಪ್ರಾರಂಭವಾಗಿ ಭಾಗ್ಯರೇಖೆಯಿಂದ ಯಾವ ಸ್ಥಾನದ ಮೇಲೆ ಯಾವುದಾದರೂ ರೇಖೆ ಸಂಧಿಸುವುದೋ ಅದೇ ಸಮಯದಲ್ಲಿ ವಿವಾಹ ಸಂಬಂಧ ಉಂಟಾಗುತ್ತದೆ.

ಒಂದು ವೇಳೆ ಎರಡು ಪ್ರಣಯ ರೇಖೆಗಳು ಜೊತೆ ಜೊತೆಯಲ್ಲಿಯೇ ಮುಂದುವರೆಯುತ್ತಿದ್ದರೆ ಅವನ ಜೀವನದಲ್ಲಿ ಒಟ್ಟಿಗೆ ಇಬ್ಬರು ಸ್ತ್ರೀಯರೊಂದಿಗೆ ಪ್ರೇಮ ವ್ಯವಹಾರ ನಡೆಯುತ್ತದೆಂದು ಭಾವಿಸಬೇಕು. ಪ್ರಣಯ ರೇಖೆಯ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ವ್ಯಕ್ತಿ ಪ್ರೇಮವನ್ನು ಮಧ್ಯಕ್ಕೇ ಬಿಟ್ಟುಬಿಡುತ್ತಾನೆ. ಪ್ರಣಯ ರೇಖೆಯ ಮೇಲೆ ದ್ವೀಪ ಚಿಹ್ನೆ ಇದ್ದರೆ ಕೆಟ್ಟ ಹೆಸರು ಬರುತ್ತದೆ. ಪ್ರಣಯ ರೇಖೆ ಮುಂದಕ್ಕೆ ಸಾಗಿ ಎರಡು ಭಾಗಗಳಾಗಿ ಹಂಚಿ ಹೋದರೆ ಪ್ರೇಮ ಶೀಘ್ರವೇ ಸಮಾಪ್ತಿಗೊಳ್ಳುತ್ತದೆ.

ಒಂದು ವೇಳೆ ವಿವಾಹ ರೇಖೆ ಕಿರುಬೆರಳಿನ ಎರಡನೇ ಭಾಗದ ಮೇಲೆ ಹತ್ತಿದ್ದರೆ ವ್ಯಕ್ತಿ ಜೀವನ ಪರ್ಯಂತ ಅವಿವಾಹಿತನಾಗಿ ಉಳಿಯುತ್ತಾನೆ.

ವಿವಾಹ ರೇಖೆಯಿಂದ ಅನೇಕ ಶಾಖೆಗಳ ಹೊರಟು ಶೀರ್ಷ ರೇಖೆಯನ್ನು ಕತ್ತರಿಸಿದರೆ ಇಂತವರು ಹೆಚ್ಚು ಕಾಮುಕರಾದರೂ ಸಹ ಪ್ರಖರ ಬುದ್ಧಿ ಉಳ್ಳವರಾಗಿರುತ್ತಾರೆ. ದಟ್ಟವಾದ ವಿವಾಹ ರೇಖೆಯ ಜೊತೆಯಲ್ಲಿ ಮಂಗಳ ರೇಖೆ ಶಕ್ತಿಯುವಾಗಿದ್ದರೆ ವ್ಯಕ್ತಿ ತನ್ನ ಇಚ್ಛಾಪೂರ್ತಿಗಾಗಿ ಎಲ್ಲಾ ರೀತಿಯ ಆಯುಧಗಳನ್ನು

ತನ್ನದಾಗಿಸಿಕೊಳ್ಳುತ್ತಾನೆ. ಇದರ ಜೊತೆಯಲ್ಲೇ ಶುಕ್ರ ಸಮ ಉನ್ನತವಾಗಿದ್ದರೆ ಮತ್ತು ಬೆರಳುಗಳ ಮೂರನೇ ಭಾಗ ದಪ್ಪವಾಗಿದ್ದರೆ ವ್ಯಕ್ತಿ ಬಲಾತ್ಕಾರಿಯಾಗುತ್ತಾನೆ ಹಾಗೂ ಕೊಲೆ ಮಾಡುವ ಮಟ್ಟಕ್ಕೂ ತಲುಪುವ ಸಂಭವ ಉಂಟು.

ವಿಕಸಿತ ಸೂರ್ಯ ಕ್ಷೇತ್ರ ಮತ್ತು ಸುಂದರ ವಿವಾಹ ರೇಖೆ ಇದ್ದರೆ ವ್ಯಕ್ತಿಯು ಸ್ತ್ರೀಯನ್ನು ತನ್ನ ಕಡೆಗೆ ಆಕರ್ಷಿಸಿಕೊಳ್ಳುವ ಗುಣವನ್ನು ಹೊಂದಿರುತ್ತಾನೆ. ಇಂತಹ ವ್ಯಕ್ತಿ ಭಾವುಕನು, ಸಂವೇದನಾಶೀಲನೂ ಮತ್ತು ಕಾಮಾಸಕ್ತನೂ ಆಗಿರುತ್ತಾನೆ. ಪ್ರಬಲ ಕಾಮೇಚ್ಛೆ ಪುರುಷನ ದೃಢತೆ ಕಾಮಪೂರ್ತಿಗಾಗಿ ಅಧೀರನನ್ನಾಗಿಸುತ್ತದೆ. ಆದರೆ ಇಂತಹ ವ್ಯಕ್ತಿ ಏನೇ ಕೆಲಸ ಮಾಡಿದರೂ ನಿಂದೆಗೆ ಗುರಿಯಾಗುವುದಿಲ್ಲ ಮತ್ತು ಸಮಾಜದಲ್ಲಿ ಗೌರವ ಹಾಳಾಗುವುದಿಲ್ಲ.

ವಿವಾಹ ರೇಖೆಯ ಆರಂಭದಲ್ಲಿ ಎಳ್ಳಿನ ಚಿಹ್ನೆ ಇದ್ದರೆ ಭಾವೀ ಜೀವನ ಜೊತೆಗಾರ ರೋಗಿಯಾಗಿರುತ್ತಾನೆಂದು ಸ್ಪಷ್ಟಪಡಿಸುತ್ತದೆ. ಒಂದು ವೇಳೆ ಎಳ್ಳಿನ ಚಿಹ್ನೆ ದಟ್ಟವಾಗಿದ್ದರೆ ವಿವಾಹದ ನಂತರ ಜೀವನ ಜೊತೆಗಾರನ ಇಹಲೀಲೆ ಸಮಾಪ್ತಿಗೊಳ್ಳುವುದು.

ವಿವಾಹ ರೇಖೆಯ ಮೇಲೆ ವರ್ಗದ ಚಿಹ್ನೆಯೂ ಸಹ ಮೇಲೆ ತಿಳಿಸಿರುವ ಫಲವನ್ನೇ ನೀಡುತ್ತದೆ. ಆದರೆ ಅದರ ಪ್ರಭಾವದಿಂದ ಖಾಯಿಲೆಯಿರುವ ಪತ್ನಿ ಗುಣಮುಖಳಾಗುವ ಸಂಭವವಿದೆ. ಈ ರೇಖೆಯು ಪ್ರಾರಂಭದಲ್ಲಿ ದ್ವೀಪದ ಚಿಹ್ನೆ ಇದ್ದರೆ ಜೊತೆಗಾರ ಅಥವಾ ಜೊತೆಗಾತಿಯ ಪ್ರೇಮ ಸಂಬಂಧ ಅನ್ಯರೊಂದಿಗೆ ಉಂಟಾಗುತ್ತದೆ. ದ್ವೀಪದ ಚಿಹ್ನೆ ರೇಖೆಯು ಅಂತ್ಯದಲ್ಲಿದ್ದರೆ ಸ್ವತಃ ರೋಗಿಯಾಗಿರುವುದರ ಜೊತೆಗೆ ಜೀವನ ಸಂಗಾತಿಯನ್ನೂ ಸಹ ರೋಗಿಯಾಗುವಂತೆ ಮಾಡುತ್ತದೆ. ಒಂದು ವೇಳೆ ಈ ರೇಖೆ ತನ್ನ ಅಂತ್ಯದಲ್ಲಿ ಮೇಲ್ಭಾಗದ ಕಡೆಗೆ ಎದ್ದರೆ ಅದು ವಿವಾಹವಾಗಲು ಬಿಡುವುದಿಲ್ಲ.

ವಿವಾಹ ರೇಖೆಯು ಆರಂಭದಲ್ಲಿ ಸೂಕ್ಷ್ಮವಾಗಿ ಮತ್ತು ನಂತರ ದಟ್ಟವಾಗಿದ್ದರೆ ವಿವಾಹಿತ ಜೀವನದ ಪ್ರಾರಂಭ ಅಲ್ಪ ಪ್ರೇಮದಿಂದ ಆಗುತ್ತದೆ ನಂತರ ನಿಧಾನವಾಗಿ ಇದರಲ್ಲಿ ದೃಢತೆ ಬರತೊಡಗುತ್ತದೆ. ಈ ರೇಖೆ ಮೊದಲು ದಟ್ಟವಾಗಿ ಮತ್ತು ನಂತರ ತೆಳುವಾಗಿದ್ದರೆ ಪ್ರಾರಂಭದಲ್ಲಿ ಹೆಚ್ಚು ಪ್ರೇಮ ಇರುತ್ತದೆ. ಕ್ರಮೇಣ ಪ್ರೀತಿಯಲ್ಲಿ ನ್ಯೂನತೆ ಬಂದುಬಿಡುತ್ತದೆ.

ಒಂದು ವೇಳೆ ರೇಖೆಯ ಮೇಲಿರುವ ತ್ರಿಶೂಲ ಚಿಹ್ನೆ ಸ್ಪಷ್ಟವಾಗಿಲ್ಲದಿದ್ದರೆ ಅಥವಾ ಮುರಿದು ಹೋಗಿದ್ದರೆ ಅದು ಅಷ್ಟೊಂದು ಕೆಟ್ಟದಾಗಿ ತನ್ನ ಪ್ರಭಾವವನ್ನು ಬೀರುವುದಿಲ್ಲ. ಗುಲಾಬಿ ಬಣ್ಣದ ವಿವಾಹದ ರೇಖೆ ಶುಭವಾದುದಾಗಿದೆ. ಇದರ ಪ್ರಭಾವದಿಂದ ವೈವಾಹಿಕ ಜೀವನ ಸಫಲವಾಗುತ್ತದೆ. ಹೆಚ್ಚು ಕೆಂಪು ಬಣ್ಣ ಪ್ರೇಮವನ್ನು ಗಾಢವಾಗಿಸುತ್ತದೆ. ಇಂತಹ ವ್ಯಕ್ತಿ ಸುಖಜೀವನ ಕಳೆಯುತ್ತಾನೆ.

ಒಂದು ವೇಳೆ ವಿವಾಹ ರೇಖೆ ಮಸ್ತಿಷ್ಕ ರೇಖೆಯನ್ನು ಸ್ಪರ್ಶಿಸಿದರೆ ಅಂತಹ ವ್ಯಕ್ತಿ ತನ್ನ ಪತ್ನಿಯ ಹತ್ಯೆ ಮಾಡುತ್ತಾನೆ. ಒಂದು ವೇಳೆ ಬುಧ ಪರ್ವತದ ಮೇಲೆ ವಿವಾಹ ರೇಖೆ ಅನೇಕ ಭಾಗಗಳಾಗಿ ಹಂಚಲ್ಪಟ್ಟಿದ್ದರೆ ಅನೇಕ ಬಾರಿ ಮದುವೆ ನಿಶ್ಚಿತಾರ್ಥ ಮುರಿದುಹೋಗುತ್ತದೆ.

ಎರಡು ಸಮಾನಾಂತರ ಬುಧ ರೇಖೆಗಳು ಎರಡು ವಿವಾಹದ ದ್ಯೋತಕವಾಗಿದೆ.

ಒಂದು ವೇಳೆ ವಿವಾಹ ರೇಖೆ ಮುಂದಕ್ಕೆ ಸಾಗಿ ಸೂರ್ಯರೇಖೆಯೊಂದಿಗೆ ಸೇರಿಕೊಂಡರೆ ಜಾತಕನ ಪತ್ನಿ ಉದ್ಯೋಗ ಮಾಡುತ್ತಾಳೆ ಮತ್ತು ಉಚ್ಚ ಪದವಿಯಲ್ಲಿರುತ್ತಾಳೆ.

ವಿವಾಹ ರೇಖೆಯ ಮೇಲೆ ನಿಂತಿರುವ ರೇಖೆಗಳು ಸಂತಾನದ ದ್ಯೋತಕವಾಗಿದೆ. ಸಂತಾನ ರೇಖೆಗಳು ಅತ್ಯಂತ ಸೂಕ್ಷ್ಮ ಮತ್ತು ನಿಶ್ಶಕ್ತವಾಗಿರುತ್ತದೆ. ಅವುಗಳನ್ನು ಬರಿಗಣ್ಣಿನಿಂದ ನೋಡಲು ಸಾಧ್ಯವಿಲ್ಲ.

ಸಂತಾನ ರೇಖೆಗಳಲ್ಲಿ ಯಾವುದು ಉದ್ದವಾಗಿ ಮತ್ತು ಪುಷ್ಟವಾಗಿ ಇರುತ್ತವೋ ಅವು ಪುತ್ರ ರೇಖೆಗಳು ಮತ್ತು ಯಾವುದು ಸೂಕ್ಷ್ಮವಾಗಿ ಮತ್ತು ಬಲಹೀನವಾಗಿರುತ್ತದೋ ಅವುಗಳನ್ನು ಕನ್ಯಾರೇಖೆಗಳೆಂದು ತಿಳಿದುಕೊಳ್ಳಬೇಕು.

ಒಂದು ವೇಳೆ ಮೇಲೆ ತಿಳಿಸಿದ ಯಾವುದಾದರೂ ರೇಖೆ ಮುರಿದುಹೋಗಿದ್ದರೆ ಬಾಲಕನ ಮೃತ್ಯುವೆಂದು ತಿಳಿಯಬೇಕು.

ಒಂದು ವೇಳೆ ಮಣಿಕಟ್ಟು ನಿರ್ಬಲವಾಗಿದ್ದರೆ ಮತ್ತು ಶುಕ್ರಪರ್ವತ ಅವಿಕಸಿತವಾಗಿದ್ದರೆ ವ್ಯಕ್ತಿಗೆ ಸಂತಾನ ಸುಖ ಪ್ರಾಪ್ತವಾಗುವುದಿಲ್ಲ.

ಸ್ಪಷ್ಟ ಮತ್ತು ನೇರ ಸಂತಾನ ರೇಖೆಗಳು ಸ್ವಸ್ಥ ಸಂತಾನದ ದ್ಯೋತಕವಾಗಿದೆ. ಆದರೆ ಒಂದು ವೇಳೆ ರೇಖೆಗಳು ನಿಶ್ಶಕ್ತವಾಗಿದ್ದರೆ ಸಂತಾನವೂ ಸಹ ನಿಶ್ಶಕ್ತವಾಗಿರುತ್ತದೆಂದು ತಿಳಿದುಕೊಳ್ಳಬೇಕು.

ಒಂದು ವೇಳೆ ವಿವಾಹ ರೇಖೆ ಆಕಸ್ಮಾತ್ ಕತ್ತರಿಸಿಹೋಗಿದ್ದರೆ ಗೃಹಸ್ಥ

ಜೀವನದಲ್ಲಿ ತೊಂದರೆ ಎಂದು ತಿಳಿದುಕೊಳ್ಳಬೇಕು.

ವಿವಾಹ ರೇಖೆಯ ಮೇಲೆ ಕಪ್ಪು ಕಲೆ ಪತ್ನಿ ಸುಖದಲ್ಲಿ ಬಾಧಕವಾಗಿರುತ್ತದೆ.

ಒಂದು ವೇಳೆ ವಿವಾಹ ರೇಖೆಯು ಒಂದು ಶಾಖೆ ಕೆಳಗೆ ಬಾಗಿ ಶುಕ್ರ ಪರ್ವತದ ಮೇಲೆ ತಲುಪುತ್ತಿದ್ದರೆ ಪತ್ನಿ ವ್ಯಭಿಚಾರಿಣಿಯಾಗುತ್ತಾಳೆ.

## ಸಾಧಾರಣ ರೇಖೆಗಳು

### 1. ಮಂಗಳ ರೇಖೆ (Line of Mars)

ಈ ರೇಖೆ ಹೆಬ್ಬೆರಳಿನ ಹತ್ತಿರ ಜೀವನ ರೇಖೆಯ ಮೂಲ ಉಗಮಸ್ಥಾನದಿಂದ ಹೊರಟು ಮಂಗಳ ಕ್ಷೇತ್ರದ ಮೇಲಿಂದ ಹಾದು ಶುಕ್ರ ಪರ್ವತದ ಕಡೆಗೆ ಹೋಗುತ್ತದೆ. ಇದನ್ನು ಮಂಗಳ ರೇಖೆ ಎಂದು



ಕರೆಯುತ್ತಾರೆ. ಆದರೆ ಇದರ ಉಗಮ ಸ್ಥಾನ ನಿಶ್ಚಿತವಾಗಿರುವುದಿಲ್ಲ. ಕೆಲವು ಜನಗಳ ಕೈಗಳಲ್ಲಿ ಇದು ಜೀವನ ರೇಖೆಯ ಮಧ್ಯದಿಂದ ಆಗುತ್ತದೆ. ಕೆಲವು ಕೈಗಳಲ್ಲಿ ಈ ರೇಖೆ ಜೀವನ ರೇಖೆಯ ಸರಿಸಮನಾಗಿ ಸಾಗುತ್ತಿರುವಂತೆ ಕಾಣಿಸುತ್ತದೆ. ಶುಕ್ರ ಕ್ಷೇತ್ರದ ಕಡೆಗೆ ಈ ರೇಖೆ ಮುಂದುವರಿದಾಗ ಇದು ಜೀವನ ರೇಖೆಯಿಂದ ದೂರ ಸರಿದು ಹೋಗುತ್ತದೆ.

ಈ ರೇಖೆಯನ್ನು ಜೀವನ ರೇಖೆಯ ಸಹಾಯಕ ರೇಖೆಯೆಂದು ನಂಬಲಾಗಿದೆ. ಈ ರೇಖೆಗಳು ಒಂದು ರೇಖೆಯಿಂದ ಹಿಡಿದು ನಾಲ್ಕು ರೇಖೆಗಳವರೆಗೂ ಇರುತ್ತವೆ. ಇವು ಮಂಗಳದ ಮೇಲೆ ಶುಕ್ರ ಕ್ಷೇತ್ರದ ಮೇಲೆ ಪೂರ್ವ ಪ್ರಭಾವ ಇಟ್ಟುಕೊಂಡಿರುತ್ತವೆ. ಈ ರೇಖೆಗಳ ಉದ್ದ

ಸಮಾನವಾಗಿರದೆ ಭಿನ್ನ ಭಿನ್ನವಾಗಿರುತ್ತವೆ.

ಮಂಗಳ ರೇಖೆಯನ್ನು ನಾವು ಎರಡು ಭಾಗಗಳಾಗಿ ವಿಂಗಡಿಸಬಹುದು.

1. ಈ ರೇಖೆಗಳು ಜೀವನ ರೇಖೆಯ ಸಮಾನಾಂತರವಾಗಿ ಕೊನೆಯವರೆಗೂ ಹೋಗುತ್ತವೆ ಮತ್ತು ಪೂರ್ಣವಾಗಿ ಜೀವನ ರೇಖೆಗೆ ಸಹಾಯ ಮಾಡುತ್ತವೆ. ಇಂತಹ ವ್ಯಕ್ತಿ ಓದು – ಬರಹದಲ್ಲಿ, ಕಲಾಕೌಶಲ ಕಾರ್ಯದಲ್ಲಿ ದಕ್ಷರಾಗಿರುತ್ತಾರೆ. ಶೀಘ್ರ ನಿರ್ಣಯ ತೆಗೆದುಕೊಳ್ಳುವವರು, ಸತತ ಕ್ರಿಯಾಶೀಲರು, ಕುಶಾಗ್ರ ಬುದ್ಧಿಯವರೂ ಪರಿಶ್ರಮಿಗಳೂ ಇವರಾಗಿರುತ್ತಾರೆ. ಇವರು ದೈಹಿಕ ರೂಪದಿಂದ ದಷ್ಟಪುಷ್ಟರು, ಸುಂದರರು, ಜ್ಞಾನಿಗಳು, ದಾರ್ಶನಿಕರು ಆಗಿರುತ್ತಾರೆ. ಇವರು ದುರ್ಬಲ ಹೃದಯದವರು ಮತ್ತು ಜಗಳ ಕದನದಿಂದ ದೂರವಿರುವವರೂ ಆಗಿರುತ್ತಾರೆ.

2. ಮಂಗಳ ರೇಖೆ ಜೀವನ ರೇಖೆಯಿಂದ ಆರಂಭವಾಗಿ ಅದರ ಜೊತೆಯಲ್ಲಿ ನ್ಯೂನಕೋನ ಮಾಡುತ್ತಾ ಆಯಸ್ಸು ರೇಖೆಯಿಂದ ದೂರದಿಂದಲೇ ಶುಕ್ರನ ಮೇಲೆ ತಲುಪುತ್ತದೆ. ಈ ವ್ಯಕ್ತಿ ಹಠ ಸ್ವಭಾದವರನು, ಅಸೂಯಾಪರನು, ದ್ವೇಷ ಮಾಡುವಂಥವನು ಮತ್ತು ಬೇಜವಾಬ್ದಾರಿಯವನು ಆಗುತ್ತಾನೆ. ಆಯುಸ್ಸಿನ ಜೊತೆಯಲ್ಲಿ ಈ ದುರ್ಗಣಗಳು ಸಹ ಹೆಚ್ಚಾಗುತ್ತಾ ಹೋಗುತ್ತದೆ. ಸಿಡಿಮಿಡಿ ಸ್ವಭಾವ, ಜಗಳ–ಕದನ ಮಾಡುವ ಶೀಘ್ರ ಕೋಪಿ ಇಂತಹ ವ್ಯಕ್ತಿ ಆಗುತ್ತಾನೆ.

ತೆಳುವಾದ ಮತ್ತು ಸರಪಳಿಯುಕ್ತ ಜೀವನ ರೇಖೆಯ ಜೊತೆ ಮಂಗಳ ರೇಖೆಯ ಸಾಮಾನ್ಯ ಉಪಸ್ಥಿತಿ ಪರಂಪರಾಗತ ಕೋಮಲತೆಯನ್ನು ವ್ಯಕ್ತಪಡಿಸುತ್ತದೆ. ಮೇಲಿನಿಂದ ಹೇಡಿಯಾಗಿ ಕಾಣಿಸಿದರೂ ಸಹ ಒಳಗಿನಿಂದ ದೃಢವಾಗಿರುವ ವ್ಯಕ್ತಿ ಇಂಥವನಾಗಿರುತ್ತಾನೆ.

ಮನುಷ್ಯನ ಕೈಯಲ್ಲಿ ಜೀವನರೇಖೆ ಎರಡು ಸ್ಥಾನದಲ್ಲಿ ಕತ್ತರಿಸಿದ್ದರೆ ಅಥವಾ ಅಲೆಯಂತಿದ್ದರೆ ಅಥವಾ ಸರಪಳಿಯಂತಿದ್ದರೆ ಅಥವಾ ದ್ವೀಪ ಚಿಹ್ನೆಯಿಂದ ಕೂಡಿದ್ದರೆ ಅಂತಹ ಮನುಷ್ಯ ರೋಗಿಯಾಗಿರುತ್ತಾನೆ ಮತ್ತು ಸಾವಿನಷ್ಟು ಕಷ್ಟಪಡುತ್ತಾನೆ. ಆದರೆ ಮಂಗಳ ರೇಖೆ ಶುದ್ಧವಾಗಿಯೂ ನಿರ್ದೋಷವಾಗಿಯೂ ಸ್ಪಷ್ಟವಾಗಿಯೂ ಇದ್ದರೆ ಮೇಲೆ ತಿಳಿಸಿದ ದೋಷಗಳಿಂದ ಉಳಿದುಕೊಳ್ಳಬಹುದು.

ಮಂಗಳ ರೇಖೆ ಒಂದು ವೇಳೆ ಜೀವನ ರೇಖೆಯನ್ನು ದಾಟಿ ಹೋದರೆ ಮನುಷ್ಯ ತನ್ನ ಉನ್ನತಿಗೋಸ್ಕರ ಹುಚ್ಚನಾಗಿಬಿಡುತ್ತಾನೆ. ಅವನು ನಿರಂತರ ಮೇಲಕ್ಕೇರಲು ಪ್ರಯಾಸಪಡುತ್ತಾನೆ.

ಮಂಗಳ ರೇಖೆ ಯಾವುದೇ ತೊಂದರೆ ಇಲ್ಲದೆ ಶುಕ್ರ ಕ್ಷೇತ್ರವನ್ನು ತಲುಪಿದರೆ ಮತ್ತು ಜೀವನ ರೇಖೆ ಅಂಗೈನ ಮಧ್ಯದಿಂದ ಒಮ್ಮೆಗೇ ಸಮಾಪ್ತಿಗೊಂಡರೆ ಅಂತಹ ವ್ಯಕ್ತಿ ಪೂರ್ಣ ಆಯಸ್ಸು ಭೋಗ ಮಾಡುತ್ತಾನೆ.

ದೃಢ ಜೀವನ ರೇಖೆಯ ಜೊತೆಯಲ್ಲಿ 2–3 ಸಮಾನಾಂತರ ಮತ್ತು ಪೂರ್ಣ ಮಂಗಳ ರೇಖೆಗಳು ನೈತಿಕ ಉನ್ನತಿಯ ಪರಿಚಯ ನೀಡುತ್ತದೆ. ಸಂಸಾರ ಭೋಗದ ತೀವ್ರತೆ ಮತ್ತು ಅದರ ಪೂರ್ತಿಗಾಗಿ ಮನುಷ್ಯ ಏನನ್ನು ಬೇಕಾದರೂ ಮಾಡಲು ಸಿದ್ಧನಾಗಿರುತ್ತಾನೆ.

ತೆಳುವಾದ ಅನೇಕ ಸಮಾನಾಂತರ ರೇಖೆಗಳು ಅಶುಭವೆಂದು ನಂಬಲಾಗಿದೆ. ಇಂತಹ ವ್ಯಕ್ತಿ ಮನಸ್ಸನ್ನು ಶಾಂತಗೊಳಿಸಲು ವಿರುದ್ಧ ನೇರ ಹೆಜ್ಜೆಗಳನ್ನು ಹಾಕುತ್ತಾನೆ. ಕಾಮವಾಂಛೆಯ ಪೂರ್ತಿಗಾಗಿ ಏನು ಬೇಕಾದರೂ ಮಾಡಬಲ್ಲ. ಚಾರಿತ್ರ್ಯ ಮತ್ತು ಆರೋಗ್ಯ ಎರಡನ್ನೂ ಇಂತಹ ವ್ಯಕ್ತಿ ಕಳೆದುಕೊಳ್ಳುತ್ತಾನೆ.

ಮಂಗಳದ ಯಾವುದಾದರೂ ಶಾಖೆ ವಿವಾಹ ರೇಖೆಯನ್ನು ಕತ್ತರಿಸಿಕೊಂಡು ಮುಂದುವರೆದರೆ ವೈವಾಹಿಕ ಜೀವನ ದುಃಖಪೂರ್ಣವಾಗಿರುತ್ತದೆ. ಗೃಹಸ್ಥ ಜೀವನದಲ್ಲಿ ಆನಂದವಿರುವುದಿಲ್ಲ.

ಮಂಗಳದ ಯಾವುದಾದರೂ ಶಾಖೆ ಭಾಗ್ಯ ಅಥವಾ ಶೀರ್ಷ ರೇಖೆಯೊಂದಿಗೆ ಹೋಗಿ ಸೇರಿಕೊಂಡರೆ ಶ್ರೇಷ್ಠ ಫಲವೆಂದು ತಿಳಿದುಕೊಳ್ಳಬೇಕು.

ಭಾಗ್ಯ ರೇಖೆಯನ್ನು ಕತ್ತರಿಸುವ ಮಂಗಳ ರೇಖೆ ಭಾಗ್ಯದ ನಾಶ ಮಾಡುತ್ತದೆ. ಒಂದು ವೇಳೆ ಮಂಗಳ ರೇಖೆ ಸೂರ್ಯ ರೇಖೆಯನ್ನು ಕತ್ತರಿಸಿದರೆ ಕೀರ್ತಿ ಮತ್ತು ಬುದ್ಧಿ ನಾಶವಾಗುತ್ತದೆ. ಸೂರ್ಯನ ಮೇಲೆ ಒಂದು ವೇಳೆ ಕ್ರಾಸ್, ಬಿಂದು ಅಥವಾ ದ್ವೀಪ ಅಡ್ಡ ತೊಂದರೆ ರೇಖೆಯಾದರೆ ಕೀರ್ತಿ ಮತ್ತು ಸೌಭಾಗ್ಯವೂ ಸಹ ನಾಶವಾಗುತ್ತದೆ.

ಮಂಗಳ ರೇಖೆಯ ಶಾಖೆ ಒಂದು ವೇಳೆ ಚಂದ್ರ ಪರ್ವತದ ಮೇಲೆ ತಲುಪಿದರೆ ವ್ಯಕ್ತಿ ಕುಡುಕನು, ಚಂಚಲನು, ವಿಲಾಸಿಯೂ, ವ್ಯಭಿಚಾರಿಯೂ, ಸುಳ್ಳು ಹೇಳುವವನಾಗಿಯೂ ನೃತ್ಯಗಾಯನ

ಪ್ರಿಯನಾಗುವನು. ಇವನು ಸದ್ಗೃಹಸ್ಥನಾಗಿರುವುದಿಲ್ಲ.

**2. ಚಂದ್ರರೇಖೆ**

ಇದು ಧನುಸ್ಸಿನ ಆಕಾರದ ರೇಖೆಯಾಗಿರುತ್ತದೆ ಮತ್ತು ಇದು ಚಂದ್ರ ಕ್ಷೇತ್ರದಿಂದ ಪ್ರಾರಂಭವಾಗಿ ವರುಣ ಮತ್ತು ಪ್ರಜಾಪತಿ ಕ್ಷೇತ್ರಗಳ ಮೇಲಿನಿಂದ ಸಾಗುತ್ತಾ ಬುಧ ಪರ್ವತದವರೆಗೆ ಬಂದು ನಿಲ್ಲುತ್ತದೆ. ಬಹಳ



ಕಡಿಮೆ ಜನಗಳ ಕೈಲಿ ಈ ರೇಖೆ ನೋಡಲು ಸಿಗುತ್ತದೆ. ಈ ರೇಖೆ ಅಂತರಜ್ಞಾನದ ಪರಿಚಯ ನೀಡುತ್ತದೆ.

ಈ ರೇಖೆಯಿಂದ ಸಂಬಂಧಿತ ವ್ಯಕ್ತಿ ಬಹಳ ಬುದ್ಧಿವಂತನು, ಸಾಧನ ಸಂಪನ್ನನು, ಐಶ್ವರ್ಯ ಶಾಲಿಯೂ, ಆಧ್ಯಾತ್ಮದ ಕಡೆಗೆ ಆಸಕ್ತಿ ಇರಿಸಿಕೊಂಡಿರುವವನು, ದಿವ್ಯಾತ್ಮನೂ, ಸಾಧುಸನ್ಯಾಸಿಗಳ ಸಂಗ ಮಾಡುವವನು, ದಯಾಳುವೂ, ಪರೋಪಕಾರಿಯೂ, ಜ್ಞಾನಿ ಮತ್ತು ಸಿದ್ಧಾತ್ಮನೂ ಆಗಿರುತ್ತಾನೆ. ಸತತ ಕಾರ್ಯ ಮಾಡುವವನೂ, ಸತ್ಯಾನ್ವೇಷಿಯೂ, ಖ್ಯಾತಿ ಪ್ರಾಪ್ತನೂ, ಭೂತ, ಭವಿಷ್ಯ ಮತ್ತು ವರ್ತಮಾನಗಳ ತಿಳುವಳಿಕೆಯುಳ್ಳವನೂ, ಸುಂದರನೂ, ಪ್ರತಿಷ್ಠಿತನೂ ಆಗಿರುತ್ತಾನೆ.

ಈ ರೇಖೆ ಬುಧ ಪರ್ವತದವರೆಗೆ ತಲುಪಿದರೆ ಅಂತಹ ವ್ಯಕ್ತಿ ಪ್ರತಿಭಾವಂತನು, ಪ್ರಭಾವಶಾಲಿಯೂ, ಪ್ರಖರ ಬುದ್ಧಿಯವನು, ಅನಾಯಾಸವಾಗಿ ಶುಭಫಲ ಪಡೆದುಕೊಳ್ಳುವನು, ದೇವಿಶಕ್ತಿ ಉಳ್ಳವನು, ಸ್ವಪ್ನದಲ್ಲಿ ದಿವ್ಯಜ್ಞಾನ ಪ್ರಕಟಿಸುವವನು, ಅಂತರ್ದೃಷ್ಟಿ ಉಳ್ಳವನು,

ಏಕಾಂತ ಪ್ರೇಮಿಯು, ಸ್ವತಃ ತನ್ನಲ್ಲೇ ಮುಳುಗಿರುವವನು ಆಗಿರುತ್ತಾನೆ.

ಶುಭವಾದ ಚಂದ್ರ ರೇಖೆಯ ಜೊತೆಯಲ್ಲಿ ಬೆರಳುಗಳು ಉದ್ದವಾಗಿಯೂ, ಅಗ್ರ ಭಾಗ ಚೂಪಾಗಿಯೂ ಇದ್ದರೆ ಅಂತಹ ವ್ಯಕ್ತಿ ಜ್ಞಾನಿಯೂ, ವಿದ್ವಾಂಸನೂ ಮತ್ತು ಕೀರ್ತಿಶಾಲಿಯೂ ಆಗುತ್ತಾನೆ. ಚಂದ್ರರೇಖೆ ಉತ್ತಮವಾಗಿದ್ದು ಮತ್ತು ಹೆಬ್ಬೆರಳು ಚೂಪಾಗಿಯೂ ಶೀರ್ಷರೇಖೆ ಇಳಿಜಾರಾಗಿಯೂ ಇದ್ದರೆ ಅಂತಹ ವ್ಯಕ್ತಿ ಆಧ್ಯಾತ್ಮ ಪ್ರೇಮಿಯಾಗುತ್ತಾನೆ.

ವರ್ಗಾಕಾರದ ಕೈಯಲ್ಲಿ ಕಠೋರತೆ ಮತ್ತು ಅಲ್ಪರೇಖೆ ಇದ್ದರೆ ಅಂತಹ ವ್ಯಕ್ತಿ ಅನುಭವಿಯೂ ಮತ್ತು ಯಥಾರ್ಥ ಬದುಕು ಬದುಕುವವನಾಗುತ್ತಾನೆ.

ಈ ರೇಖೆ ಸುಂದರವಾಗಿರದೆ ಅಸ್ಪಷ್ಟವಾಗಿದ್ದರೆ ವ್ಯಕ್ತಿ ಪ್ರಭಾವ ಹೀನನಾಗುತ್ತಾನೆ. ಅಲ್ಲಲ್ಲಿ ಮುರಿದುಹೋಗಿರುವ ರೇಖೆ ವ್ಯರ್ಥ ಮತ್ತು ಅಸತ್ಯದ ಪರಿಚಯ ನೀಡುತ್ತದೆ. ವಕ್ರವಾದ ಚಂದ್ರರೇಖೆ ಸಫಲತೆಯಲ್ಲಿ ಕಠೋರ ಶ್ರಮದ ಪರಿಚಯ ನೀಡುತ್ತದೆ.

ಪೂರ್ತಿಯಾಗದ ಅರ್ಧ ವೃತ್ತಪ್ರದರ್ಶನ ಪ್ರಿಯತೆಯನ್ನು ನೀಡುತ್ತದೆ.

ಕೇವಲ ಮಂಗಳದ ಮೇಲೆ ಈ ರೇಖೆ ಕಾಣಿಸಿಕೊಂಡರೆ ಅಸಫಲತೆ, ವಿರಕ್ತಿ ನೀಡುತ್ತದೆ. ದಟ್ಟವಾದ ರೇಖೆಯುಳ್ಳ ವ್ಯಕ್ತಿ ಅಂತರ್ಜ್ಞಾನದಲ್ಲಿ ಶಕ್ತಿಯುತನು, ದಾರ್ಶನಿಕನು ಮತ್ತು ಬ್ರಹ್ಮಜ್ಞಾನಿಯೂ ಆಗುತ್ತಾನೆ.

ದ್ವೀಪ ಚಿಹ್ನೆಯಿಂದ ಕೂಡಿದ ಚಂದ್ರರೇಖೆ ಮೂರ್ಖತೆಯ ದ್ಯೋತಕವಾಗಿದೆ. ಒಂದು ದ್ವೀಪ ಚಿಹ್ನೆ ಇದ್ದರೆ ಕಡಿಮೆ ದೋಷ ಮತ್ತು ಅಧಿಕ ದ್ವೀಪ ಚಿಹ್ನೆ ಇದ್ದರೆ ಅಧಿಕ ದೋಷ ಉಂಟಾಗುತ್ತದೆ. ರೇಖೆಯ ಆರಂಭದಲ್ಲಿ ದ್ವೀಪದ ಚಿಹ್ನೆ ಇದ್ದರೆ ಸ್ವಪ್ನದಲ್ಲಿ ನಡೆದಾಡುವ ದೋಷವನ್ನು ನೀಡುತ್ತದೆ.

ರೇಖೆಯ ಅಂತ್ಯದಲ್ಲಿ ನಕ್ಷತ್ರ ಚಿಹ್ನೆ ಇದ್ದರೆ ಅದ್ಭುತ ಸಫಲತೆಯನ್ನು ನೀಡುತ್ತದೆ. ಪ್ರಬಲ ಬುಧ ರೇಖೆಯೂ ಇದ್ದರೆ ಧನದಲ್ಲಿ ವೃದ್ಧಿ ಉಂಟಾಗುತ್ತದೆ. ರೇಖೆಯ ಅಂತ್ಯದಲ್ಲಿ ನಕ್ಷತ್ರ ಚಿಹ್ನೆ ಮತ್ತು ದೋಷದಿಂದ ಕೂಡಿದ ಬುಧರೇಖೆ ಇದ್ದರೆ ಜ್ಞಾನದ ದುರುಪಯೋಗ ಮಾಡಿಸುತ್ತದೆ. ಇಂತಹ ವ್ಯಕ್ತಿ ಮೋಸದ ಕಾರ್ಯವನ್ನು ಮಾಡುತ್ತಾನೆ.

ಬುಧದ ಮೇಲೆ ಬಾಗಿರುವ ಚಂದ್ರ ರೇಖೆ ಶೀರ್ಷರೇಖೆಯನ್ನು

ಕತ್ತರಿಸಿದರೆ ವ್ಯಕ್ತಿ ಕಲ್ಪನಾಶೀಲನು, ವಿಚಾರಶೀಲನೂ ಆಗುತ್ತಾನೆ. ಗುರುವಿನ ಮೇಲೆ ಬಾಗಿರುವ ಚಂದ್ರರೇಖೆ ಮಹತ್ವಾಕಾಂಕ್ಷೆಯ ಪೂರ್ತಿ ಮತ್ತು ಗೂಢ ವಿದ್ಯೆಯ ತಿಳುವಳಿಕೆ ನೀಡುತ್ತದೆ.

ಯಾವುದಾದರೂ ರೇಖೆಯ ಶಾಖೆ ಶನಿಪರ್ವತದಲ್ಲಿ ಸೇರಿಕೊಂಡು ವಿಲೀನಗೊಂಡರೆ ಜೀವನದ ವಿಕಾಸವಾಗುತ್ತದೆ. ಇಂತಹ ವ್ಯಕ್ತಿ ಇದ್ದಕ್ಕಿದ್ದಂತೆ ಉನ್ನತಿಯ ಶಿಖರಕ್ಕೆ ತಲುಪುತ್ತಾನೆ. ಕೀರ್ತಿ ಗೌರವ ದೊರೆಯುತ್ತದೆ.

ಸೂರ್ಯ ರೇಖೆಯೊಂದಿಗೆ ಸೇರಿಕೊಳ್ಳುವ ಚಂದ್ರರೇಖೆ ಲೌಕಿಕ ಬಂಧನಗಳನ್ನು ಮುರಿಯಲು ಬಯಸುತ್ತದೆ. ರೇಖೆಯ ಮೇಲೆ ಸ್ವಾಸ್ತಿಕ ಚಿಹ್ನೆ ಇದ್ದರೆ ತಾಂತ್ರಿಕ ಕ್ಷೇತ್ರದಲ್ಲಿ ಉನ್ನತಿ ನೀಡುತ್ತದೆ. ಕ್ರಾಸ್ ಚಿಹ್ನೆ ವ್ಯಾವಹಾರಿಕ ಜ್ಞಾನದ ಕೊರತೆಯನ್ನು ನೀಡುತ್ತದೆ.

ಜೇನುತುಪ್ಪದಂತಹ ಬಣ್ಣದ ರೇಖೆ ಶ್ರೇಷ್ಠವಾದುದಾಗಿರುತ್ತದೆ.

ಶ್ವೇತ ಬಣ್ಣದ ಚಂದ್ರ ಗುಣಗಳನ್ನು ಹೆಚ್ಚಿಸುವುದರಲ್ಲಿ ಸಹಾಯ ನೀಡುತ್ತದೆ. ಚಂದ್ರ ಕ್ಷೇತ್ರ ಸುಭದ್ರವಾಗಿದ್ದು, ಚಂದ್ರರೇಖೆ ಸುಂದರವಾಗಿದ್ದು ಮತ್ತು ಕೆಳಗೆ ನೇತಾಡುವ ಶೀರ್ಷ ರೇಖೆಯುಳ್ಳ ವ್ಯಕ್ತಿ ಕಲ್ಪನಾಲೋಕದಲ್ಲಿ ವಿಹರಿಸುತ್ತಾನೆ. ಧೈರ್ಯದ ಮತ್ತು ಲೌಕಿಕ ಜ್ಞಾನದ ಅಭಾವ ಉಂಟಾಗುತ್ತದೆ. ಇಂತಹ ವ್ಯಕ್ತಿ ಸೀಮಿತ ಆಯಸ್ಸಿನವನು ಮತ್ತು ಜಿಪುಣನೂ ಆಗಿರುತ್ತಾನೆ.

ವಿಕಸಿತ ಚಂದ್ರ ಕ್ಷೇತ್ರದ ಜೊತೆಯಲ್ಲಿ ಸುಂದರ ಚಂದ್ರ ರೇಖೆ ಇದ್ದರೆ ಹೊಸ ಆವಿಷ್ಕಾರದ ಕಡೆಗೆ ಪ್ರೇರಣೆ ನೀಡುತ್ತದೆ.

### 3. ಪ್ರತಿಭಾ ಪ್ರಭಾವಕ ರೇಖೆ (Line of Influence)

ಈ ರೇಖೆ ಯಾವ ರೇಖೆಯ ಜೊತೆಯಲ್ಲಿ ಇದ್ದರೂ ಸಹ ಆ ರೇಖೆಯ ಪ್ರಭಾವವನ್ನು ವೃದ್ಧಿಗೊಳಿಸುತ್ತದೆ. ಈ ರೇಖೆ ಚಂದ್ರಕ್ಷೇತ್ರ ಮತ್ತು ವರುಣ ಕ್ಷೇತ್ರದ ಮೇಲಿಂದ ಸಾಗಿ ಭಾಗ್ಯರೇಖೆಯವರೆಗೆ ತಲುಪುತ್ತದೆ. ಕೆಲವು ಜನಗಳ ಕೈಲಿ ಈ ರೇಖೆ ಎರಡರಷ್ಟು ಮತ್ತು ಕೆಲವರ ಕೈಯಲ್ಲಿ ಮೂರರಷ್ಟು ಕಂಡುಬರುತ್ತದೆ. ಇದರ ಪ್ರಾರಂಭ ಶುಕ್ರ ಪರ್ವತದಿಂದಲೂ ಆಗಿರುವುದನ್ನು ಕಾಣಬಹುದು.

ಯಾರ ಕೈನಲ್ಲಿ ಪ್ರಭಾವಕ ರೇಖೆಗಳು ಇರುತ್ತವೆಯೋ ಅಂತಹ ವ್ಯಕ್ತಿಯನ್ನು ಮೇಲ್ಮಟ್ಟಕ್ಕೆ ತಲುಪಿಸಲು ಈ ರೇಖೆಗಳು ಹೆಚ್ಚು ಸಹಾಯಕವಾಗಿರುತ್ತವೆ. ಈ ರೇಖೆಗಳು ಎಲ್ಲಿಂದಲೇ ಹೊರಟರೂ ಸಹ ಶುಕ್ರ, ಸೂರ್ಯ, ಗುರು, ಬುಧ ಅಥವಾ ಶನಿ ಪರ್ವತಗಳನ್ನು

ಸ್ಪರ್ಶಿಸುತ್ತವೆ.

ಯಾವ ರೇಖೆಗಳು ಶಕ್ತಿಯುತವಾಗಿರುತ್ತವೋ ಅವು ಮುಂದಕ್ಕೆ ಸಾಗಿ



ಬುಧ, ಸೂರ್ಯ, ಶನಿ ಮತ್ತು ಗುರು ಪರ್ವತವನ್ನು ಸ್ಪರ್ಶ ಮಾಡುತ್ತವೆ. ಆದರೆ ಬಲಹೀನ ರೇಖೆಗಳು ಮಧ್ಯದಲ್ಲೇ ಉಳಿದುಬಿಡುತ್ತವೆ.

ಒಂದು ವೇಳೆ ಈ ರೇಖೆಗಳು ಭಾಗ್ಯರೇಖೆಯನ್ನು ಕತ್ತರಿಸಿದರೆ ಅಂತಹ ವ್ಯಕ್ತಿ ಭಾಗ್ಯಹೀನನಾಗುತ್ತಾನೆ. ಇದೇ ರೀತಿ ಯಾವುದಾದರೂ ಪ್ರಭಾವಕ ರೇಖೆ ಆರೋಗ್ಯ ರೇಖೆಯನ್ನು ಕತ್ತರಿಸಿದರೆ ಅಂತಹ ವ್ಯಕ್ತಿಯ ಆರೋಗ್ಯ ಅತ್ಯಂತ ಬಲಹೀನವಾಗಿರುತ್ತದೆ. ಒಂದು ವೇಳೆ ಯಾವುದಾದರೂ ಪ್ರಭಾವಕ ರೇಖೆ ಮಸ್ತಿಷ್ಕ ರೇಖೆಯನ್ನು ಕತ್ತರಿಸಿದರೆ ಆ ವ್ಯಕ್ತಿ ತನ್ನ ಜೀವನದಲ್ಲಿ ಖಂಡಿತಾ ಹುಚ್ಚನಾಗುತ್ತಾನೆ.

ಒಂದು ವೇಳೆ ಯಾವುದಾದರೂ ಪ್ರಭಾವಕ ರೇಖೆ ಭಾಗ್ಯರೇಖೆಯೊಂದಿಗೆ ಹೋಗಿ ಸೇರಿಕೊಂಡರೆ ಅಂತಹ ವ್ಯಕ್ತಿಯ ಪ್ರಬಲ ಭಾಗ್ಯೋದಯವಾಗುತ್ತದೆ. ಇಂತಹ ವ್ಯಕ್ತಿಗೆ ಆಕಸ್ಮಿಕ ರೂಪದಿಂದ ಧನಲಾಭ ಉಂಟಾಗುತ್ತದೆ ಮತ್ತು ಈತನು ತನ್ನ ವ್ಯಕ್ತಿತ್ವದ ಮಾಧ್ಯಮದಿಂದ ಜೀವನದಲ್ಲಿ ಸಫಲತೆಯನ್ನು ಪಡೆದುಕೊಳ್ಳುತ್ತಾನೆ.

ಒಂದು ವೇಳೆ ಕೆಲವು ಪ್ರಭಾವಕ ರೇಖೆಗಳು ಚಂದ್ರ ಕ್ಷೇತ್ರದಿಂದ ಎದ್ದರೆ ಅಂತಹ ವ್ಯಕ್ತಿ ಕವಿ, ಭಾವುಕ, ಚಿತ್ರಕಾರ ಅಥವಾ ಸೌಂದರ್ಯ ಪ್ರೇಮಿ ಆಗುತ್ತಾನೆ. ಇಂತಹ ವ್ಯಕ್ತಿಯ ವ್ಯಕ್ತಿತ್ವ ಅತ್ಯಂತ ಸಂಮೋಹನವಾಗಿರುತ್ತದೆ ಮತ್ತು ಜೀವನದಲ್ಲಿ ಪ್ರಸಿದ್ಧಿ

ಪಡೆದುಕೊಳ್ಳುತ್ತಾನೆ.

ಒಂದು ವೇಳೆ ಶುಕ್ರ ಪರ್ವತದಿಂದ ಕೆಲವು ಪ್ರಭಾವಕ ರೇಖೆಗಳು ಏಳುತ್ತಿದ್ದರೆ ಅಂತಹ ವ್ಯಕ್ತಿ ಧೂರ್ತನು, ಚಾಲಾಕಿಯೂ ಮತ್ತು ಪರಿಸ್ತ್ರೀಗಾಮಿಯೂ ಆಗುತ್ತಾನೆ. ಮಂಗಳ ರೇಖೆಯಿಂದ ಏಳುವ ಪ್ರಭಾವಕ ರೇಖೆಗಳು ವ್ಯಕ್ತಿಯನ್ನು ಸಾಹಸಿಯನ್ನಾಗಿ ಮಾಡುತ್ತದೆ.

**4. ವಿದ್ಯಾರೇಖೆ**



ಈ ರೇಖೆಮಧ್ಯದ ಬೆರಳು ಮತ್ತು ಉಂಗುರದ ಬೆರಳಿನ ಮಧ್ಯದಿಂದ ಹೊರಡುತ್ತದೆ ಮತ್ತು ಸೂರ್ಯ ಕ್ಷೇತ್ರದ ಕಡೆಗೆ ಬಾಗುತ್ತಾ ಮುಂದುವರೆಯುತ್ತದೆ.

ಯಾವ ವ್ಯಕ್ತಿಗಳ ಕೈಲಿ ಈ ರೇಖೆ ಇರುತ್ತದೋ ಅಂತಹ ವ್ಯಕ್ತಿಗಳು ಶಿಕ್ಷಣ ಕ್ಷೇತ್ರದಲ್ಲಿ ಪೂರ್ಣ ಸಫಲತೆಯನ್ನು ಪಡೆದುಕೊಳ್ಳುತ್ತಾರೆ.

ಅನೇಕ ಬಾರಿ ಇಂತಹ ರೇಖೆ ಉಳ್ಳವರು ಉಚ್ಚ ಶಿಕ್ಷಣ ಪಡೆದುಕೊಳ್ಳದೇ ಹೋದರೂ ಸಹ ಅತ್ಯಂತ ಬುದ್ಧಿವಂತರು ಮತ್ತು ಜ್ಞಾನಿಗಳೂ ಆಗಿರುತ್ತಾರೆ. ಸಭ್ಯ ಸಮಾಜದಲ್ಲಿ ಇವರನ್ನು ಗೌರವಿಸುತ್ತಾರೆ ಮತ್ತು ತಮ್ಮ ಬುದ್ಧಿಯ ಬಲದಿಂದ ಇವರು ಪೂರ್ಣ ಸಫಲತೆಯನ್ನು ಪಡೆದುಕೊಳ್ಳುತ್ತಾರೆ.

**5. ವಿಜ್ಞಾನ ರೇಖೆ**

ಈ ರೇಖೆ ಬುಧ ಪರ್ವತದ ಪಕ್ಕದಲ್ಲಿ ಇರುತ್ತದೆ. ಒಂದು ವೇಳೆ ಬುಧ ಪರ್ವತದ ಮೇಲೆ ಐದು ನಿಂತಿರುವ ರೇಖೆಗಳಿದ್ದರೆ ಅವುಗಳನ್ನು ವಿಜ್ಞಾನ ರೇಖೆಗಳೆಂದು ಕರೆಯಲಾಗುತ್ತದೆ.

ಯಾವ ವ್ಯಕ್ತಿಗಳ ಕೈಯಲ್ಲಿ ಈ ರೇಖೆ ಇರುತ್ತದೋ ಅಂಥವರು ಸ್ವತಃ ಪ್ರಸಿದ್ಧ ವಿಜ್ಞಾನಿಗಳಾಗಿರುತ್ತಾರೆ ಅಥವಾ ವಿಜ್ಞಾನಕ್ಕೆ ಸಂಬಂಧಪಟ್ಟ



ಪುಸ್ತಕಗಳ ಲೇಖಕರಾಗಿ ಹಣ, ಕೀರ್ತಿ ಮತ್ತು ಗೌರವವನ್ನು ಪಡೆದುಕೊಳ್ಳುತ್ತಾರೆ. ಇಂತಹ ವ್ಯಕ್ತಿಗಳು ತಕ್ಷಣ ನಿರ್ಣಯ ತೆಗೆದುಕೊಳ್ಳುವ ಚತುರರು ಮತ್ತು ಪರಿಶ್ರಮಿಗಳಾಗಿರುತ್ತಾರೆ.

### 6. ಸಂತಾನ ರೇಖೆ

ಸಂತಾನ ರೇಖೆಗಳು ವಿವಾಹ ರೇಖೆಯ ಮೇಲೆ ಕೆಳಗೆ ಎರಡೂ ಕಡೆ



ನ್ಯೂನಾಧಿಕ ಅಂತರದಲ್ಲಿ ನೋಡಲು ಸಿಗುತ್ತವೆ. ಇದರ ಅಸ್ತಿತ್ವ ಕಿರುಬೆರಳಿನ ಮೂಲದಲ್ಲಿ ಉಂಟಾಗುತ್ತದೆ.

ವಿವಾಹ ರೇಖೆಯ ಮೇಲೆ ಎಷ್ಟು ರೇಖೆಗಳಿರುತ್ತವೆಯೋ ಮತ್ತು ಆ ರೇಖೆಗಳಲ್ಲಿ ಯಾವುವು ಸುಂದರವಾಗಿ, ಶುದ್ಧವಾಗಿ ಸ್ಪಷ್ಟವಾಗಿ ಮತ್ತು ಉದ್ದವಾಗಿರುತ್ತವೋ ಅವು ಪುತ್ರೋತ್ಪತ್ತಿ ರೇಖೆಗಳೆಂದು ನಂಬಲಾಗಿದೆ. ಯಾವ ನಿಂತಿರುವ ರೇಖೆಗಳು ಚಿಕ್ಕದಾಗಿ ಮತ್ತು ದಟ್ಟವಾಗಿ ಸ್ಪಷ್ಟವಾಗಿರುತ್ತವೋ ಅವು ಕನ್ಯಾಕಾರಕ ರೇಖೆಗಳೆಂದು ತಿಳಿಯಬೇಕು.

ಯಾವ ರೇಖೆಗಳು ಅತ್ಯಂತ ಚಿಕ್ಕವಾಗಿ ಹರಿದು ಮುರಿದು ಹೋಗಿರುತ್ತವೆಯೋ, ಬಿಂದು ಚಿಹ್ನೆಯಿಂದ, ದ್ವೀಪ ಚಿಹ್ನೆಯಿಂದ ಕೂಡಿರುತ್ತವೆಯೋ ಮತ್ತು ಅಲೆಯಂತೆ ಇರುತ್ತದೋ ಹಾಗೂ ಇನ್ನಿತರ ದೋಷಗಳಿಂದ ಕೂಡಿರುತ್ತದೋ ಅವು ಸಂತಾನದ ಮೃತ್ಯುವನ್ನು ಸೂಚಿಸುವಂತಹವಾಗಿರುತ್ತವೆ.

ಒಂದು ವೇಳೆ ರೇಖೆಗಳು ಹೊಯ್ದಾಡುವಂತೆ ಅಪೂರ್ಣವಾಗಿದ್ದರೆ ಗರ್ಭಸ್ರಾವ ಮತ್ತು ಗರ್ಭಕ್ಷಯದ ಸೂಚನೆ ಕೊಡುತ್ತದೆ.

ಒಂದು ವೇಳೆ ರೇಖೆಗಳು ಸರಿಯಾಗಿ ಕಾಣದಿದ್ದರೆ ಸಮತಲ ಶುಕ್ರನ ಜೊತೆಯಲ್ಲಿ ಮಣಿಕಟ್ಟು ಅಂಗೈನಲ್ಲಿ ಹೂತುಹೋಗಿದ್ದರೆ ವ್ಯಕ್ತಿ ಸಂತಾನಹೀನನೆಂದು ತಿಳಿದುಕೊಳ್ಳಬೇಕು.

ಮಣಿಕಟ್ಟಿನ ರೇಖೆ ತನ್ನ ಸ್ವಾಭಾವಿಕ ಸ್ಥಿತಿಯಿಂದ ಮೇಲಕ್ಕೆ ಎದ್ದು ಅಂಗೈ ಮೇಲೆ ಹತ್ತಿರುವಂತೆ ಕಾಣಿಸಿದರೆ ಸಂತಾನ ರೇಖೆಗಳ ಉಪಸ್ಥಿತಿಯೂ ಸಹ ವ್ಯರ್ಥವಾದಂತಾಗಿರುತ್ತದೆ. ಏಕೆಂದರೆ ಇಂತಹ ವ್ಯಕ್ತಿ ಸಂತಾನೋತ್ಪತ್ತಿಯಲ್ಲಿ ಅಸಫಲನಾಗಿರುತ್ತಾನೆ.

ಸ್ಪಷ್ಟ, ನಿರ್ದೋಷ, ಉದ್ದವಾದ ರೇಖೆ ಇದ್ದರೆ ಹುಡುಗ ಮಾತೃ ಪಿತೃಭಕ್ತನು, ಆಜ್ಞಾಕಾರಿಯೂ, ಹಿತೈಷಿಯೂ, ಯಶಸ್ವಿಯೂ ಆಗುತ್ತಾನೆ. ಹುಡುಗಿ ಪಿತೃಕುಲ ಮತ್ತು ಪತಿಕುಲ ಎರಡಕ್ಕೂ ಶುಭವಾದವ ಳಾಗಿರುತ್ತಾಳೆ.

ಕುರೂಪವಾದ, ಅಸ್ಪಷ್ಟರೇಖೆ ದುಃಖವನ್ನು ನೀಡುವ, ಕೆಲಸಕ್ಕೆ ಬಾರದ, ಹೊಟ್ಟೆ ಉರಿಸುವ ಅಯೋಗ್ಯ ಸಂತಾನದ ಪರಿಚಯ ನೀಡುತ್ತದೆ. ಸಂತಾನ ರೇಖೆ ಎಲ್ಲಿಯಾದರೆ ಮಧ್ಯೆ ಖಂಡನಗೊಂಡರೆ ಅಕಾಲ ಮೃತ್ಯುವನ್ನು ನೀಡುತ್ತದೆ. ಅನೇಕ ಭಾಗಗಳಲ್ಲಿ ವಿಭಕ್ತಗೊಂಡಿರುವ ಸಂತಾನರೇಖೆ ಅಕಾಲ ಮೃತ್ಯುಕಾರಕವಾಗಿದೆ.

ಸಂತಾನ ರೇಖೆಯು ಕೆಳಭಾಗದ ಅಂಚಿನ ಮೇಲ ದ್ವೀಪ ಚಿಹ್ನೆ ಇದ್ದರೆ ರೋಗಿ ಬಾಲಕ ಜನಿಸುವ ಸೂಚನೆ ನೀಡುತ್ತದೆ. ಕೊನೆಯಲ್ಲಿ ದ್ವೀಪ ಇದ್ದರೆ ದೀರ್ಘ ಖಾಯಿಲೆಯಿಂದ ನರಳಿ ವ್ಯತು. ಅಷ್ಟವನೆಂದು ಪರಿಚಯ ನೀಡುತ್ತದೆ.

ಸಂತಾನರೇಖೆ ಮೇಲಕ್ಕೆ ಏಳುತ್ತಾ ಕಿರುಬೆರಳಿನ ಮೂಲವನ್ನು ದಾಟುತ್ತಾ ಅದರ ವಿಭಕ್ತಿಯಲ್ಲಿ ಪ್ರವೇಶಿಸಿದರೆ ಬಾಲಕ ಜೀವಿತದಲ್ಲಿ ರಾಜದಂಡ ಪಡೆಯುತ್ತಾನೆಂಬುದನ್ನು ಸೂಚಿಸುತ್ತದೆ.

ಒಂದು ವೇಳೆ ಈ ರೇಖೆ ದಾಂಪತ್ಯ ಜೀವನವನ್ನು ಕತ್ತರಿಸುತ್ತಾ ಕೆಳಭಾಗದ ಕಡೆಗೆ ಸಾಗಿದರೆ ಸಂತಾನ ಆಚಾರಹೀನನು, ಕಲಂಕಿತನು ಆಗಿರುತ್ತಾನೆ. ತಂದೆ ತಾಯಿಯರಿಗೆ ಇದರಿಂದ ಕಷ್ಟ ಉಂಟಾಗುವುದು.

**7. ಯಾತ್ರಾರೇಖೆ**

ಚಂದ್ರ, ಬುಧ ಮತ್ತು ಶುಕ್ರ ಯಾತ್ರಾಪ್ರವೃತ್ತಿ ಮತ್ತು ಕ್ರಿಯೆಯಲ್ಲಿ ಪ್ರಾಮುಖ್ಯತೆಯನ್ನು ಇಟ್ಟುಕೊಂಡಿರುತ್ತವೆ. ಇವುಗಳ ಅನುಸಾರ ಮೂರೂ



ಗ್ರಹಗಳ ಕ್ಷೇತ್ರಗಳು ನಿರ್ದೋಷವಾಗಿರುವುದು ಅವಶ್ಯಕ. ಕಾರಣ ಇವುಗಳ ಸಬಲತೆ ಯಾತ್ರೆಗಳನ್ನು ಆಗಾಗ್ಗೆ ಮಾಡುವ ಸಂದರ್ಭವನ್ನು ತಂದುಕೊಡುತ್ತವೆ.

1. **ಹೆಬ್ಬೆರಳಿನ ಮೂಲದಿಂದ ಉತ್ಪನ್ನವಾಗಿ ಜೀವನ ರೇಖೆಯ ಕಡೆಗೆ ಏಳುವ ಅಥವಾ ಅದರಲ್ಲಿ ಹೋಗಿ ಸೇರಿಕೊಳ್ಳುವ ರೇಖೆಗಳು ಅರ್ಥಾತ್ ಶುಕ್ರಕ್ಷೇತ್ರದ ಮೇಲೆ ಸ್ಥಿತಿವಾಗಿ**

**ನಿಂತಿರುವ ರೇಖೆಗಳು ಯಾತ್ರಾರೇಖೆಗಳಾಗಿವೆ.**

2. **ಕಿರುಬೆರಳಿನ ಮೂಲದಲ್ಲಿ ಉತ್ಪನ್ನವಾಗಿ ಬುಧ ಕ್ಷೇತ್ರದಿಂದ ಸಾಗುತ್ತಾ ಆಯುಸ್ಸು ರೇಖೆಯ ಮೇಲೆ ತಲುಪುವ ರೇಖೆಗಳು ಅಥವಾ ಕೆಲವು ಕ್ಷೇತ್ರದ ದಡದಲ್ಲಿ ಒಂದು ಸೂರ್ಯಕ್ಷೇತ್ರದ ಕಡೆಗೆ ಸ್ಥಿತ ನಿಂತ ರೇಖೆಗಳು ಯಾತ್ರಾ ರೇಖೆಗಳೆಂದು ಕರೆಯಲ್ಪಡುತ್ತವೆ.**

ಪಾಶ್ಚಾತ್ಯ ವಿದ್ವಾಂಸರು ಚಂದ್ರ ಮತ್ತು ಮಂಗಳವನ್ನು ಯಾತ್ರಾರ್ಥ ಕಾರಕವೆಂದು ನಂಬುತ್ತಾರೆ. ಕೆಲವರು ಚಂದ್ರ ಮತ್ತು ಬುಧನಿಗೆ ಪ್ರಾಶಸ್ತ್ಯ ಕೊಡುತ್ತಾರೆ.

ಕೆಲವರ ಮನಸ್ಸಿನಲ್ಲಿ ಮಣಿಕಟ್ಟಿನಿಂದ ಉತ್ಪನ್ನವಾಗಿ ನಿಂತಿರುವ ರೇಖೆಗಳು ಯಾತ್ರಾರೇಖೆಗಳಾಗಿರುತ್ತವೆ.

ಕೆಲವರು ಅಂಗೈನ ದಡದಿಂದ ಚಂದ್ರ ಕ್ಷೇತ್ರದ ಮೇಲೆ ತಲುಪುವ ರೇಖೆಗಳನ್ನು ಮತ್ತು ಇನ್ನು ಕೆಲವರು ಜೀವನ ರೇಖೆಯ ಕಡೆಗೆ ಚಂದ್ರ ಕ್ಷೇತ್ರದ ಕಡೆಗೆ ಬರುವ ರೇಖೆಗಳನ್ನು ಯಾತ್ರಾ ರೇಖೆಗಳೆಂದು ನಂಬುತ್ತಾರೆ.

ಮಣಿಕಟ್ಟಿನಿಂದ ಉತ್ಪನ್ನವಾದ ನಿಂತಿರುವ ರೇಖೆಗಳು ಒಂದು ವೇಳೆ ಮಂಗಳದ ಮೇಲೆ ಹೋಗಿ ತಲುಪಿದರೆ ಅದು ದೀರ್ಘ ಯಾತ್ರೆಯ ಪರಿಚಯ ನೀಡುತ್ತದೆ.

ಕೆಲವು ವಿದ್ವಾಂಸರ ಅನುಸಾರ ಒಂದೇ ಕೈನಲ್ಲಿ ಉಂಟಾಗಿರುವ ಯಾತ್ರಾ ರೇಖೆಗಳು ಅಷ್ಟೊಂದು ಪ್ರಭಾವ ಉಳ್ಳದ್ದಾಗಿರುವುದಿಲ್ಲ. ಆದರೆ ಎರಡು ಕೈಗಳಲ್ಲೂ ಯಾತ್ರಾರೇಖೆಗಳಿದ್ದರೆ ಯಾತ್ರೆಗಳು ಖಂಡಿತಾ ಆಗುತ್ತವೆ.

ಯಾತ್ರಾ ರೇಖೆಗಳ ಸ್ಪರ್ಶ ದ್ವೀಪ, ಬಿಂದು ಮಂತಾದವುಗಳೊಡನೆ ಆಗಿದ್ದರೆ ಯಾತ್ರೆ ಭಯಕಾರಕವಾಗಿರುತ್ತದೆ. ಅದು ದುರ್ಘಟನೆಯ ಕಡೆಗೆ ಸಂಕೇತ ಮಾಡುತ್ತದೆ. ರೇಖೆಯ ಅಂತ್ಯದಲ್ಲಿ ವರ್ಗವಿದ್ದರೆ ಅದು ಧನಹಾನಿ ಸೂಚಕವಾಗಿರುತ್ತದೆ. ತ್ರಿಭುಜ ಮತ್ತು ಚತುಷ್ಕೋಣ ಶುಭಲಾಭ ಮತ್ತು ಸುಖದಾಯಕ ಚಿಹ್ನೆಯಾಗಿದೆ.

ಯಾತ್ರೆಯಿಂದ ಭಾಗ್ಯವನ್ನು ಪ್ರಬುದ್ಧ ಮಾಡಲು ಚಂದ್ರ ಕ್ಷೇತ್ರದ ಮೇಲೆ ಯಾತ್ರಾ ರೇಖೆಯು ಭಾಗ್ಯರೇಖೆಯೊಂದಿಗೆ ಸೇರಿಕೊಳ್ಳುವುದು ಶುಭವೆಂದು ತಿಳಿಯಲಾಗಿದೆ. ಒಂದು ವೇಳೆ ಈ ರೇಖೆ ಭಾಗ್ಯರೇಖೆಯಲ್ಲಿ ಹೋಗಿ ಸೇರಿಕೊಂಡರೆ ಸುದೀರ್ಘವಾದ ಮತ್ತು ಲಾಭದಾಯಕವಾದ

ಯಾತ್ರೆ ಆಗುತ್ತದೆ. ಒಂದು ವೇಳೆ ಯಾತ್ರಾ ರೇಖೆ ಭಾಗ್ಯರೇಖೆಯನ್ನು ಸ್ಪರ್ಶ ಮಾಡದಿದ್ದರೆ ಕೇವಲ ಸಾಮಾನ್ಯ ಯಾತ್ರೆಯಷ್ಟೇ ಆಗುತ್ತದೆ.

ಜೀವನ ರೇಖೆಯಿಂದ ಉದ್ಭವ ಯಾತ್ರಾ ರೇಖೆ ಶುಕ್ರ ಕ್ಷೇತ್ರದ ಮೇಲೆ ತಲುಪಿದರೆ ಸ್ಥಳ ಯಾತ್ರೆ ಸೂಚಕವಾಗಿರುತ್ತದೆ. ಆದರೆ ಜೀವನ ರೇಖೆಯಿಂದ ಚಂದ್ರಕ್ಷೇತ್ರದ ಮೇಲೆ ತಲುಪಿದರೆ ಇದು ಸಮುದ್ರ ಯಾತ್ರೆಯನ್ನು ಸೂಚಿಸುತ್ತದೆ.

ಚಂದ್ರ ಕ್ಷೇತ್ರದಿಂದ ಹೊರಟಿರುವ ಯಾವುದಾದರೂ ಯಾತ್ರಾ ರೇಖೆ ಸರ್ಪಾಕಾರವಾಗಿ ಶುಕ್ರರೇಖೆಯ ಮೇಲೆ ತಲುಪಿದರೆ ಜಲಮಾರ್ಗದ ಮೂಲಕ ಉದ್ಯಮ ಮಾಡುವ ಸೂಚನೆ ನೀಡುತ್ತದೆ.

ಯಾತ್ರಾ ರೇಖೆ ಮಣಿಕಟ್ಟಿನಿಂದ ಹೊರಟು ಬುಧ ಕ್ಷೇತ್ರದ ಮೇಲೆ ತಲುಪಿದರೆ ಅಕಸ್ಮಾತ್ ಧನಸಂಪತ್ತು ಪ್ರಾಪ್ತವಾಗುತ್ತದೆ. ಒಂದು ವೇಳೆ ಗುರುಕ್ಷೇತ್ರದ ಮೇಲೆ ತಲುಪಿದರೆ ಯಾತ್ರೆ ಬಹಳ ದೊಡ್ಡದಾಗಿರುವುದಾಗಿರುತ್ತದೆ ಮತ್ತು ಯಾತ್ರೆಯಿಂದ ಪ್ರಭುತ್ವ ಪ್ರಾಪ್ತಿಯಾಗುತ್ತದೆ.

ಯಾತ್ರಾ ರೇಖೆ ಶನಿ ಕ್ಷೇತ್ರದ ಮೇಲೆ ತಲುಪಿದರೆ ಯಾತ್ರೆಯ ಸಂಬಂಧ ಯಾವುದಾದರೂ ಗಂಭೀರ ಘಟನೆಯೊಂದಿಗೆ ಆಗುತ್ತದೆ. ಸೂರ್ಯ ರೇಖೆಯ ಮೇಲೆ ತಲುಪುವುದು ಅತ್ಯಂತ ಶುಭವಾದುದಾಗಿದೆ. ಧನ ಮತ್ತು ಕೀರ್ತಿಯಲ್ಲಿ ವೃದ್ಧಿ ಉಂಟಾಗುತ್ತದೆ.

ಜೀವನ ರೇಖೆಯಿಂದ ಹೊರಟು ಅದರ ಆಸರೆಯಲ್ಲಿ ಸಮಾನಾಂತರ ಸಾಗುವ ಯಾತ್ರಾ ರೇಖೆ ವಿದೇಶದಲ್ಲಿ ಕೆಲಸ ಮಾಡುವುದನ್ನು ಸೂಚಿಸುತ್ತದೆ.

ಗುರುವಿನಿಂದ ಉತ್ಪನ್ನವಾದ ಈ ರೇಖೆಯ ಜೊತೆಯಲ್ಲಿ ಅದರ ಮೇಲೆ ಗುಣಾಕಾರದ ಚಿಹ್ನೆ ಇದ್ದರೆ ಅಪಾಯವೆಂದು ತಿಳಿದುಕೊಳ್ಳಬೇಕು. ಅದು ಜಲಭಯವಾಗಿರುತ್ತದೆ. ಒಂದು ವೇಳೆ ತ್ರಿಕೋನದ ಚಿಹ್ನೆ ಇದ್ದರೆ ಅದು ದುಃಖ ನೀಡುವ ಯಾತ್ರೆಯ ಸೂಚಕವಾಗಿರುತ್ತದೆ.

ಮಣಿಕಟ್ಟಿನ ಮೇಲೆ ಸ್ಥಿತ ರೇಖೆಗಳು ತ್ರಿಕೋನದ ಸ್ವರೂಪವನ್ನು ಧರಿಸಿಕೊಂಡರೆ ವಿದೇಶ ಯಾತ್ರೆ ಆನಂದಪೂರ್ವಕವಾಗಿ ಮತ್ತು ನಿರ್ವಿಘ್ನವಾಗಿ ಆಗುತ್ತದೆ.

ಯಾತ್ರಾರೇಖೆ ಜೀವನ ರೇಖೆಯ ಅಂತ್ಯದಲ್ಲಿ ಇಮ್ಮಡಿ ಜಿಹ್ವೆಯಾದರೆ ಪದೇ ಪದೇ ಯಾತ್ರಾ ಸೂಚಕವಾಗಿರುತ್ತದೆ.

ದ್ವೀಪ ರೋಗಭಯವನ್ನು, ಎಳ್ಳು, ಗುಣಾಕಾರ, ಖಂಡ ಚಿಹ್ನೆ ದುರ್ಘಟನೆಯನ್ನೂ, ನಕ್ಷತ್ರ ಮೃತ್ಯುಭಯವನ್ನು, ಧನಹಾನಿಯನ್ನು ಸೂಚಿಸುತ್ತದೆ.

ಯಾತ್ರಾ ರೇಖೆಯ ಜೊತೆಯಲ್ಲಿ ಗುಚ್ಛ ಅಥವಾ ಬಲೆಯಂತಹ ಚಿಹ್ನೆ ಜಟಿಲ ಮನೋಸ್ಥಿತಿಯನ್ನುಂಟು ಮಾಡುತ್ತದೆ. ಆತ್ಮಜ್ಞಾನಿಯು ಕಾರಣದಿಂದಾಗಿ ಮನೆಯನ್ನು ಬಿಟ್ಟುಹೋಗುತ್ತಾನೆ, ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

ಈ ರೇಖೆಗಳು ಬುಧ ಪರ್ವತದ ಹತ್ತಿರದಲ್ಲಿ ವಿವಾಹ ರೇಖೆಯ ಮೇಲೆ ನಿಂತಿರುವ ಗೀರುಗಳ ರೂಪದಲ್ಲಿ ಕಾಣಿಸುತ್ತವೆ. ವಾಸ್ತವವಾಗಿ ಈ ರೇಖೆಗಳು ಕೂದಲಿನಂತೆ ತೆಳುವಾಗಿರುತ್ತವೆ. ಇದನ್ನು ಬರಿಗಣ್ಣಿನಿಂದ ನೋಡಲು ಸಾಧ್ಯವಿಲ್ಲ.

**8. ಸಹೋದರ – ಸಹೋದರಿ ರೇಖೆಗಳು**

ಈ ರೇಖೆಗಳು ಶುಕ್ರ ಕ್ಷೇತ್ರದ ಮೇಲಿರುತ್ತವೆ. ಇದು ಮಣಿಕಟ್ಟಿನ ಕಡೆಯಿಂದ ಹೆಬ್ಬೆರಳಿನ ತೃತೀಯ ಭಾಗದಿಂದ ಆರಂಭವಾಗಿ ಮೇಲುಗಡೆ



ಮಂಗಳ ಕ್ಷೇತ್ರದ ಕಡೆಗೆ ಹೋಗುತ್ತದೆ. ಆದರೆ ಇದು ಶುಕ್ರ ಕ್ಷೇತ್ರದವರೆಗೆ ಸೀಮಿತವಾಗಿದ್ದುಬಿಡುತ್ತವೆ. ಈ ರೇಖೆಗಳು ಸಂಖ್ಯೆಯಲ್ಲಿ ಎಷ್ಟಿರುತ್ತವೋ ಅಷ್ಟೇ ಸಹೋದರ ಸಹೋದರಿಯರಿರುವುದು ನಿಶ್ಚಿತ.

ಈ ರೇಖೆಗಳು ಶುದ್ಧವಾಗಿ, ಸುಂದರವಾಗಿ, ಸ್ಪಷ್ಟವಾಗಿ, ನಿರ್ದೋಷವಾಗಿದ್ದರೆ ಸಹೋದರ-ಸಹೋದರಿಯರು ಅಷ್ಟೇ ಆರೋಗ್ಯವಂತರು, ದಷ್ಟಪುಷ್ಟರು ಮತ್ತು ಶಕ್ತಿವಂತರೂ ಆಗಿರುತ್ತಾರೆ.

ಈ ರೇಖೆಗಳು ಇಲ್ಲದೆ ಹೋದರೆ ಜಾತಕನು ಏಕಾಂಗಿಯಾಗಿರುತ್ತದೆಂದು ಪ್ರದರ್ಶಿಸುತ್ತದೆ. ನಿಂತಿರುವ ಶುಕ್ರ ಕ್ಷೇತ್ರದ ರೇಖೆಗಳಲ್ಲಿ ಕೆಲವು ರೇಖೆಗಳು ಉದ್ದವಾಗಿಯೂ, ಸುಂದರವಾಗಿಯೂ, ಶುದ್ಧವಾಗಿಯೂ ಮತ್ತು ಸ್ಪಷ್ಟವಾಗಿರುತ್ತವೆ. ಅವು ಸಹೋದರರ ಸಂಖ್ಯೆಯನ್ನು ಹೇಳುತ್ತವೆ ಮತ್ತು ಯಾವುದು ಚಿಕ್ಕವಾಗಿರುತ್ತವೋ ಅವು ಸಹೋದರಿಯರ ಸಂಖ್ಯೆಯನ್ನು ತಿಳಿಸುತ್ತವೆ. ಅತ್ಯಂತ ಚಿಕ್ಕವಾಗಿರುವ, ಭಗ್ನವಾಗಿರುವ, ಹರುಕು ಮುರುಕಾಗಿರುವ ದ್ವೀಪಯುಕ್ತ ಅಥವಾ ಧನಸ್ಸು ಚಿಹ್ನೆ ಅಥವಾ ದೋಷಪೂರ್ಣವಾಗಿರುವ ರೇಖೆಗಳು ಸಹೋದರ-ಸಹೋದರಿಯರ ವಿಯೋಗ ಅಥವಾ ಮೃತ್ಯುವಿನ ಸೂಚನೆ ನೀಡುತ್ತದೆ.

## 9. ಮಿತ್ರರೇಖೆಗಳು

ಬೆರಳಿನ ಮೂಲದ ಮೇಲೆ ಹಾಗೂ ಬೆರಳಿನ ಭಾಗಗಳ ಮೇಲೆ ಕೆಲವು ನಿಂತಿರುವ ರೇಖೆಗಳು ಕಾಣಿಸಿಕೊಂಡರೆ ಈ ರೇಖೆಗಳು ಮಿತ್ರರನ್ನು ಸೂಚಿಸುತ್ತವೆ. ಒಂದು ವೇಳೆ ಬೆರಳಿನ ಪ್ರಾರಂಭಿಕ ಭಾಗದಲ್ಲಿ ನಿಂತಿರುವ



ರೇಖೆಗಳು ಇಲ್ಲದೇ ಹೋದರೆ ಅಂತಹ ವ್ಯಕ್ತಿ ಏಕಾಂತ ಪ್ರಿಯನು ಮತ್ತು ಇವನ ಜೀವನದಲ್ಲಿ ಮಿತ್ರರ ಸಹಯೋಗ ಶೂನ್ಯಕ್ಕೆ ಸಮಾನ ಎಂದು

ತಿಳಿಯಬೇಕು.

ಈ ರೇಖೆಗಳು ಎಷ್ಟು ಹೆಚ್ಚು ಆಳವಾಗಿ, ಸ್ಪಷ್ಟವಾಗಿ ಮತ್ತು ನಿರ್ದೋಷವಾಗಿರುತ್ತವೋ ಅವನ ಮಿತ್ರರು ಅಷ್ಟೇ ಅಧಿಕ ವಿಶ್ವಾಸ ಪಾತ್ರರು ಮತ್ತು ಸಮಯ ಬಂದಾಗ ಸಹಾಯ ಮಾಡುವವರೂ ಆಗಿರುತ್ತಾರೆ. ಇದಕ್ಕೆ ವಿರುದ್ಧವಾಗಿ ಈ ರೇಖೆಗಳು ನಿರ್ಬಲವಾಗಿದ್ದರೆ ಅಂತಹ ವ್ಯಕ್ತಿಯ ಜೀವನದಲ್ಲಿ ಮಿತ್ರರ ಸಹಕಾರ ದೊರೆಯುವುದಿಲ್ಲ ಅಥವಾ ಮಿತ್ರರೇ ಇವನಿಗೆ ಜೀವನದಲ್ಲಿ ಮೋಸ ಮಾಡುತ್ತಾರೆಂದು ಸೂಚಿಸುತ್ತದೆ.

ಬೆರಳುಗಳ ಭಾಗಗಳ ಮೇಲೆ ಅಡ್ಡರೇಖೆಗಳು ಶತ್ರುಗಳನ್ನು ಸೂಚಿಸುವಂತಹವಾಗಿರುತ್ತವೆ. ಒಂದು ವೇಳೆ ಈ ರೇಖೆಗಳು ಆಳವಾಗಿ ಮತ್ತು ಸ್ಪಷ್ಟವಾಗಿದ್ದರೆ ಅಂಥವನ ಶತ್ರುಗಳು ಸಹ ಸುಭದ್ರವಾದವರಾಗಿರುತ್ತಾರೆ. ಇದಕ್ಕೆ ವಿರುದ್ಧವಾಗಿ ಈ ರೇಖೆಗಳು ದುರ್ಬಲವಾಗಿದ್ದರೆ ಅಥವಾ ಮುರಿದುಹೋಗಿದ್ದರೆ ಆ ವ್ಯಕ್ತಿಯ ಶತ್ರುಗಳು ದುರ್ಬಲರಾಗಿರುತ್ತಾರೆ ಎಂದು ಅರ್ಥ.

ಒಂದು ವೇಳೆ ತೋರುಬೆರಳಿನ ಮೇಲೆ ನಿಂತಿರುವ ಗೀರುಗಳು ಕೆಲಸ ಮಾಡುವ ಮಿತ್ರರ ಸೂಚಕವಾಗಿರುತ್ತದೆ. ಇದೇ ರೀತಿ ತೋರು ಬೆರಳಿನ ಮೇಲೆ ಅಡ್ಡ ಇರುವ ಗೀರುಗಳು ಕೆಲಸ ಮಾಡುವ ಶತ್ರುಗಳ ಸಂಖ್ಯೆಯನ್ನು ತಿಳಿಸುತ್ತದೆ.

## 10. ಪದವಿ ರೇಖೆ

ಹೆಬ್ಬೆರಳಿನ ಕೆಳಗೆ ಶುಕ್ರ ಕ್ಷೇತ್ರದ ಮೇಲೆ, ಜೀವನ ರೇಖೆಯ ಮೇಲೆ ಯಾವ ರೇಖೆಗಳಿರುತ್ತವೋ ಅವು ಪದವಿ ರೇಖೆಗಳೆಂದು ನಂಬಲಾಗಿದೆ.

ಈ ರೇಖೆಗಳು ಎಷ್ಟು ಸುಂದರವಾಗಿ ಮತ್ತು ಸಶಕ್ತವಾಗಿರುವುದೋ ಅಷ್ಟೇ ಪದೋನ್ನತಿಯ ಸಂಭವವಿರುತ್ತದೆ. ಬಲಿಷ್ಠ ರೇಖೆಗಳು ಪದವಿಯ ಉಚ್ಚತೆಯ ಆಭಾಸ ನೀಡುತ್ತವೆ. ಕೆಲವು ವಿದ್ವಾಂಸರು ಇದನ್ನು ಸಹೋದರ ರೇಖೆ ಎಂದು ಕರೆಯುತ್ತಾರೆ.

## 11. ಆಕಸ್ಮಿಕ ರೇಖೆಗಳು

ಕೆಲವು ರೇಖೆಗಳು ಅಂಗೈನಲ್ಲಿ ಆಗಾಗ್ಗೆ ಉತ್ಪನ್ನವಾಗಿ ತಮ್ಮ ಪ್ರಭಾವವನ್ನು ತೋರಿಸುತ್ತವೆ. ಯಾವಾಗ ಅವುಗಳಿಗೆ ಸಂಬಂಧಿಸಿದ ಕಾರ್ಯಗಳು ಸಮಾಪ್ತಿಗೊಳ್ಳುತ್ತವೋ ಆವಾಗ ಈ ಆಕಸ್ಮಿಕ ಸಮಾಪ್ತಿಗೊಳ್ಳುತ್ತವೆ. ಇವು ಅಂಗೈನ ಯಾವುದಾದರೂ ಭಾಗದಲ್ಲಿ ಅಥವಾ

ಯಾವುದಾದರೂ ಪರ್ವತದ ಮೇಲೆ ಹುಟ್ಟುತ್ತವೆ ಅಥವಾ ಸಮಾಪ್ತಿಗೊಳ್ಳುತ್ತವೆ.



ಈ ರೇಖೆಗಳು ಯಾವ ರೇಖೆಯ ಜೊತೆಯಲ್ಲಿ ಮುಂದುವರೆಯುತ್ತವೋ ಆ ರೇಖೆಗಳ ಗುಣಗಳಲ್ಲಿ ವೃದ್ಧಿಯನ್ನು ಉಂಟು ಮಾಡುತ್ತವೆ. ಇದರ ವಿರುದ್ಧವಾಗಿ ಒಂದು ವೇಳೆ ಈ ರೇಖೆಗಳು ಯಾವುದಾದರೂ ರೇಖೆಯನ್ನು ಕತ್ತರಿಸಿದರೆ ಆ ರೇಖೆಯ ಗುಣದಲ್ಲಿ ನ್ಯೂನತೆಯನ್ನು ತರುತ್ತವೆ.

## 12. ಸುಮನ ರೇಖೆ

ಅಂಗೈನಲ್ಲಿ ಈ ರೇಖೆ ಕೇತು ಪರ್ವತದಿಂದ ಹೊರಟು ಬುಧ ಕ್ಷೇತ್ರದವರೆಗೆ ಹೋಗುವಂತೆ ಕಾಣಿಸುತ್ತದೆ. ಒಂದು ವೇಳೆ ಈ ರೇಖೆ



ಖಾಯಿಲೆಯನ್ನು ಅನುಭವಿಸಬೇಕಾಗುತ್ತದೆ. ಆದರೆ ಒಂದು ವೇಳೆ ಈ ರೇಖೆ ಆರೋಗ್ಯರೇಖೆಯು ಸಮಾನಂತರವಾಗಿ ಸಾಗಿದರೆ ಅವನ ಆರೋಗ್ಯ ಚೆನ್ನಾಗಿರುತ್ತದೆ.

ಒಂದು ವೇಳೆ ಈ ರೇಖೆ ಯಾವುದೋ ರೇಖೆಯನ್ನು ಕತ್ತರಿಸುತ್ತಾ ಬುಧ ಪರ್ವತದವರೆಗೆ ತಲುಪಿದರೆ ಆ ವ್ಯಕ್ತಿ ದೇಶದ ಗೌರವಾನ್ವಿತ ವ್ಯಕ್ತಿಯಾಗುತ್ತಾನೆ ಮತ್ತು ಕೂಟನೀತಿ ಕ್ಷೇತ್ರದಲ್ಲಿ ಅವನು ಅತ್ಯಂತ ಉಚ್ಚ ಪದವಿಗೆ ತಲುಪುತ್ತಾನೆ.

ಒಂದು ವೇಳೆ ಈ ರೇಖೆ ಸರಪಳಿಯಂತೆ ಇದ್ದರೆ ಅಂಥವನಿಗೆ ಪರಿವಾರದ ಸುಖ ದೊರೆಯುವುದಿಲ್ಲ. ಇದೇ ರೀತಿ ಒಂದು ವೇಳೆ ಈ ರೇಖೆ ಅಲೆಅಲೆಯಾಗಿದ್ದರೆ ಅದು ಕಾಮಾಲೆ ರೋಗವನ್ನು ನೀಡುತ್ತದೆ.

ಒಂದು ವೇಳೆ ಈ ರೇಖೆ ಅಂತ್ಯದಲ್ಲಿ ಎರಡು ಭಾಗಗಳಾಗಿ ಹಂಚಲ್ಪಟ್ಟರೆ ಅಂತಹ ವ್ಯಕ್ತಿ ನಪುಂಸಕನಾಗುತ್ತಾನೆ. ಒಂದು ವೇಳೆ ಈ ರೇಖೆಯ ಒಂದು ತುದಿ ಶುಕ್ರ ಪರ್ವತದ ಮೇಲೆ ತಲುಪಿದರೆ ಅಂತಹ ವ್ಯಕ್ತಿ ಅವಶ್ಯಕತೆಗಿಂತ ಹೆಚ್ಚು ಕಾಮುಕನು ಮತ್ತು ಭೋಗಿಯೂ ಆಗುತ್ತಾನೆ.

## 13. ಮಣಿಕಟ್ಟಿನ ರೇಖೆಗಳು

ಮಣಿಕಟ್ಟಿನ ಮೇಲೆ ಮೂರು ಅಡ್ಡರೇಖೆಗಳು ಮಣಿಕಟ್ಟಿನ ರೇಖೆಗಳೆಂದು ಕರೆಯಲ್ಪಡುತ್ತವೆ. ಕೆಲವು ಜನಗಳ ಕೈಗಳಲ್ಲಿ ಎರಡು



ಮಣಿಕಟ್ಟು ರೇಖೆಗಳಿರುತ್ತವೆ. ಮತ್ತೆ ಕೆಲವರ ಕೈಗಳಲ್ಲಿ ನಾಲ್ಕು ಮಣಿಕಟ್ಟು ರೇಖೆಗಳು ಇರುತ್ತವೆ. ಈ ರೇಖೆಗಳು ಆರೋಗ್ಯ, ಧನ, ಪ್ರತಿಷ್ಠೆ ಮತ್ತು

ಗೌರವ ಸೂಚಕವಾಗಿರುತ್ತವೆ.

ಮಣಿಕಟ್ಟಿನಿಂದ ಒಂದು ವೇಳೆ ಯಾವುದಾದರೂ ರೇಖೆ ಹೊರಟು ಮೇಲುಗಡೆಗೆ ಸಾಗಿದರೆ ಅಂತವನ ಮನೋಕಾಮನೆಗಳು ಅವನ ಜೀವನದಲ್ಲೇ ಪೂರ್ಣವಾಗುತ್ತವೆ. ಒಂದು ವೇಳೆ ಮಣಿಕಟ್ಟಿನಿಂದ ಯಾವುದಾದರೂ ರೇಖೆ ಹೊರಟು ಚಂದ್ರ ಪರ್ವತದ ಕಡೆಗೆ ಹೋಗುತ್ತಿದ್ದರೆ ಅಂಥವನು ಜೀವನದಲ್ಲಿ ಅನೇಕ ಬಾರಿ ವಿದೇಶ ಯಾತ್ರೆ ಮಾಡುತ್ತಾನೆ.

ಸಾಮುದ್ರಿಕ ಶಾಸ್ತ್ರದ ಅನುಸಾರ ಒಂದು ವೇಳೆ ಮಣಿಕಟ್ಟಿನ ಮೇಲೆ ನಾಲ್ಕು ಮಣಿಕಟ್ಟು ರೇಖೆಗಳಿದ್ದರೆ ಅವನ ಆಯಸ್ಸು ಪೂರ್ಣ 100 ವರ್ಷಗಳಾಗಿರುತ್ತವೆ. ಯಾರ ಕೈಲಿ ಮೂರು ಮಣಿಕಟ್ಟು ರೇಖೆಗಳಿರುತ್ತವೋ ಅವನ ಆಯಸ್ಸು 75 ವರ್ಷಗಳಾಗಿರುತ್ತವೆ. ಎರಡು ರೇಖೆಗಳಿದ್ದರೆ 50 ವರ್ಷ ಮತ್ತು ಒಂದು ಮಣಿಕಟ್ಟು ರೇಖೆ ಇದ್ದರೆ ಅವನ ಆಯಸ್ಸು 25 ವರ್ಷಗಳಾಗಿರುತ್ತವೆ.

ಒಂದು ವೇಳೆ ಮಣಿಕಟ್ಟಿನ ರೇಖೆಗಳು ಮುರಿದುಹೋಗಿದ್ದರೆ ಅಥವಾ ಛಿದ್ರ ಛಿದ್ರವಾಗಿದ್ದರೆ ಆ ವ್ಯಕ್ತಿಯು ಜೀವನದಲ್ಲಿ ನಿರಂತರ ತೊಂದರೆಗಳು ಬರುತ್ತಿರುತ್ತವೆ. ಇದಕ್ಕೆ ವಿರುದ್ಧವಾಗಿ ಈ ರೇಖೆಗಳು ನಿರ್ದೋಷವಾಗಿ ಮತ್ತು ಸ್ಪಷ್ಟವಾಗಿ ಇದ್ದರೆ ಆ ವ್ಯಕ್ತಿಯು ಪ್ರಬಲ ಭಾಗ್ಯೋದಯವಾಗುತ್ತದೆ.

ಒಂದು ವೇಳೆ ಮಣಿಕಟ್ಟಿನ ರೇಖೆ ಸರಪಳಿಯಂತಿದ್ದರೆ ಅವನ ಜೀವನದಲ್ಲಿ ನಿರಂತರ ಕಷ್ಟಗಳು ಬರುತ್ತಿರುತ್ತವೆ. ಇದರ ಮೇಲೆ ಗೋಧಿಯ ಚಿಹ್ನೆ ಸೌಭಾಗ್ಯ ಸೂಚಕವಾಗಿದೆ. ಒಂದು ವೇಳೆ ಬಿಂದು ಚಿಹ್ನೆ ಇದ್ದರೆ ಅವನಿಗೆ ಜೀವನದಲ್ಲಿ ಉದರಕ್ಕೆ ಸಂಬಂಧಪಟ್ಟ ರೋಗ ಉಂಟಾಗುತ್ತದೆ. ಒಂದು ವೇಳೆ ಮಣಿಕಟ್ಟಿನ ರೇಖೆಯು ಮೇಲೆ ದ್ವೀಪದ ಚಿಹ್ನೆ ಇದ್ದರೆ ಅವನಿಗೆ ಜೀವನದಲ್ಲಿ ದುರ್ಘಟನೆಗಳನ್ನು ಎದುರಿಸಬೇಕಾಗಿ ಬರುತ್ತದೆ. ಸರಪಳಿಯ ಸಮಾನವಿರುವ ಮಣಿಕಟ್ಟು ರೇಖೆ ದುರ್ಭಾಗ್ಯ ಸೂಚಕವೆಂದು ಹೇಳಲಾಗುತ್ತದೆ.

ಒಂದು ವೇಳೆ ಎರಡು ಮಣಿಕಟ್ಟಿನ ರೇಖೆಗಳು ಪರಸ್ಪರ ಸೇರಿಕೊಂಡರೆ ದುರ್ಘಟನೆಯಿಂದ ಅವನ ಅಂಗ ಭಂಗವಾಗುತ್ತದೆ. ಒಂದು ವೇಳೆ ಈ ರೇಖೆಗಳು ನೀಲಿಯಾಗಿದ್ದರೆ ಅವನ ಜೀವನ ಪೂರ್ತಿ ಖಾಯಿಲೆಯಿಂದ ನರಳುತ್ತಾನೆ. ಹಳದಿ ಬಣ್ಣದ ಮಣಿಕಟ್ಟು ರೇಖೆಗಳು

ವಿಶ್ವಾಸಘಾತುಕನ ಕಾರಣದಿಂದಾಗಿ ಜೀವನದಲ್ಲಿ ಬಹಳಷ್ಟು ಕಷ್ಟಗಳನ್ನು ಅನುಭವಿಸಬೇಕಾಗುತ್ತದೆಂಬುದನ್ನು ಸೂಚಿಸುತ್ತದೆ.

ವಾಸ್ತವದಲ್ಲಿ ಮಣಿಕಟ್ಟು ರೇಖೆಗಳು ಎಷ್ಟು ಅಧಿಕ ಸ್ಪಷ್ಟವಾಗಿ, ಆಳವಾಗಿ ಮತ್ತು ನಿರ್ದೋಷವಾಗಿರುತ್ತವೋ ಅಷ್ಟೇ ಹೆಚ್ಚು ಶ್ರೇಷ್ಠವಾದುವೆಂದು ಹೇಳಲಾಗುತ್ತದೆ.

## 14. ಶುಕ್ರ ರೇಖೆಗಳು

ಶುಕ್ರ ಪರ್ವತದ ಮೇಲೆ ಯಾವುದು ನಿಂತಿರುವ ಮತ್ತು ಅಡ್ಡವಾಗಿರುವ ರೇಖೆಗಳು ಇರುತ್ತವೆಯೋ ಅವನ್ನು ಶುಕ್ರರೇಖೆಗಳೆಂದು



ಕರೆಯಲಾಗುತ್ತವೆ. ಆದರೆ ಯಾವ ರೇಖೆಗಳು ಹೆಬ್ಬೆರಳಿನಿಂದ ಆಯುಸ್ಸು ರೇಖೆಯ ಕಡೆಗೆ ಹೋಗುತ್ತಿರುವವ್ವೋ ಅವು ಮಾತ್ರ ಶುಕ್ರ ರೇಖೆಗಳೆಂದು ಗಮನಿಸಬೇಕು.

ಒಂದು ವೇಳೆ ಈ ರೇಖೆಗಳು ಆಳವಾಗಿ, ಸ್ಪಷ್ಟವಾಗಿ ಮತ್ತು ನಿರ್ದೋಷವಾಗಿದ್ದರೆ ಇವು ಶುಭಫಲ ನೀಡುವುದರಲ್ಲಿ ಸಹಾಯಕ ವಾಗುತ್ತವೆ. ಇದಕ್ಕೆ ವಿರುದ್ಧವಾಗಿ ಈ ರೇಖೆಗಳು ಮುರಿದು ಹೋಗಿದ್ದರೆ, ದುರ್ಬಲವಾಗಿದ್ದರೆ ಮತ್ತು ಛಿದ್ರ ಚಿದ್ರವಾಗಿದ್ದರೆ ಇಂತಹ ವ್ಯಕ್ತಿಯ ಜೀವನದಲ್ಲಿ ಅನೇಕ ತೊಂದರೆಗಳು ಎದುರಾಗುತ್ತವೆ. ಇಂಥವನ ಭಾಗ್ಯೋದಯ ವಿಳಂಬವಾಗುತ್ತದೆ ಮತ್ತು ಸಮಾಜದಲ್ಲಿ ಕೆಟ್ಟ ಹೆಸರನ್ನು ಪಡೆಯಬೇಕಾಗುತ್ತದೆ.

## 15. ರಹಸ್ಯ ಕ್ರಾಸ್

ಇದು ಹೃದಯ ರೇಖೆ ಮತ್ತು ಮಸ್ತಿಷ್ಕ ರೇಖೆಯ ಮಧ್ಯೆ ಉಂಟಾಗುವ ಕ್ರಾಸ್ ಆಗಿರುತ್ತದೆ. ಇದನ್ನು ರಹಸ್ಯ ಕ್ರಾಸ್ ಎಂದು ಕರೆಯುತ್ತಾರೆ. ಯಾವ ವ್ಯಕ್ತಿಯ ಅಂಗೈನಲ್ಲಿ ಈ ಕ್ರಾಸ್ ಇರುತ್ತದೋ



ಅವನು ವೈಜ್ಞಾನಿಕ ದೃಷ್ಟಿ ಸಂಪನ್ನನಾಗುತ್ತಾನೆ.

ಒಂದು ವೇಳೆ ಈ ಕ್ರಾಸ್ ಗುರು ಪರ್ವತದ ಕೆಳಗೆ ಇದ್ದರೆ ವ್ಯಕ್ತಿ ತನ್ನ ಗುರಿಯನ್ನು ಮುಟ್ಟೇ ಮುಟ್ಟುತ್ತಾನೆ. ಒಂದು ವೇಳೆ ಇದು ಶನಿ ಪರ್ವತದ ಕೆಳಗೆ ಇದ್ದರೆ ಆ ವ್ಯಕ್ತಿ ಸಾಹಿತ್ಯ ಕ್ಷೇತ್ರದಲ್ಲಿ ಪ್ರಸಿದ್ಧಿ ಪಡೆಯುತ್ತಾನೆ. ಒಂದು ವೇಳೆ ಈ ಕ್ರಾಸ್ ಚಂದ್ರ ಪರ್ವತದ ಸಮೀಪವಿದ್ದರೆ ಆ ವ್ಯಕ್ತಿ ಕವಿಯಾಗುತ್ತಾನೆ. ಈ ಕ್ರಾಸ್‌ನಿಂದ ಯಾವುದೇ ಪರ್ವತ ಪ್ರಭಾವಿತವಾಗುವುದೋ ಆ ಪರ್ವತದ ಗುಣಗಳಲ್ಲಿ ವಿಶೇಷ ವೃದ್ಧಿಯಾಗುವುದು.

## 16. ದುರ್ಘಟನೆಯ ರೇಖೆಗಳು

ಶನಿ ಪರ್ವತದಿಂದ ಯಾವ ರೇಖೆಗಳು ಹೊರಟು ಮಸ್ತಿಷ್ಕ ರೇಖೆಯನ್ನು ಕತ್ತರಿಸುವುದೋ ಅವುಗಳು ದುರ್ಘಟನೆಯ ರೇಖೆಗಳೆಂದು ಕರೆಯಲ್ಪಡುತ್ತವೆ.

ಕ್ರಾಸ್ ಚಿಹ್ನೆ ದುರ್ಘಟನೆಯ ಕಡೆಗೆ ಸಂಕೇತ ಮಾಡುತ್ತದೆ. ಒಂದು ವೇಳೆ ಗುರು ಪರ್ವತದ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ಅದು ಶುಭ ಫಲವನ್ನು ಕೊಡುವಂತಹದು ಮತ್ತು ಭಾಗ್ಯವರ್ಧಕ ಮಾಡುವಂತಹದಾಗಿರುತ್ತದೆ. ಶನಿ ಪರ್ವತದ ಮೇಲೆ ಕ್ರಾಸ್‌ನ ಚಿಹ್ನೆ ದುರ್ಘಟನೆಯಿಂದ ಮೃತ್ಯುವಾಗುತ್ತದೆಂದು ಸಂಕೇತ ಮಾಡುತ್ತದೆ. ಒಂದು ವೇಳೆ ಮಂಗಳ ಪರ್ವತದ ಮೇಲೆ ಕ್ರಾಸ್ ಇದ್ದರೆ ಆ ವ್ಯಕ್ತಿ ಯುದ್ಧದಲ್ಲಿ

ಸಾಯುತ್ತಾನೆ. ಒಂದು ವೇಳೆ ಸೂರ್ಯ ಪರ್ವತದ ಮೇಲೆ ಕ್ರಾಸ್ ಚಿಹ್ನೆ



ಇದ್ದರೆ ಆವನ ಮೃತ್ಯು ವಿಶ್ವಾಸಘಾತನಿಂದ ಆಗುತ್ತದೆ. ಬುಧ ಪರ್ವತದ ಮೇಲೆ ಈ ಕ್ರಾಸ್ ಚಿಹ್ನೆ ಇದ್ದರೆ ವಾಹನದ ದುರ್ಘಟನೆಯಿಂದ ಆ ವ್ಯಕ್ತಿಯು ಮೃತ್ಯುವಾಗುತ್ತದೆಂದು ಸೂಚಿಸುತ್ತದೆ.

ಚಂದ್ರ ಪರ್ವತದ ಮೇಲೆ ಕ್ರಾಸ್ ಚಿಹ್ನೆ ನೀರಿನಲ್ಲಿ ಮುಳುಗಿ ಮೃತ್ಯುವಾಗುವುದೆಂದು ಸೂಚಿಸುತ್ತದೆ. ಒಂದು ವೇಳೆ ಮಸ್ತಿಷ್ಕ ರೇಖೆಯ ಮೇಲೆ ಈ ಕ್ರಾಸ್ ಚಿಹ್ನೆ ಇದ್ದರೆ ಆ ವ್ಯಕ್ತಿ ಹುಚ್ಚನಾಗುತ್ತಾನೆ. ಹೃದಯ ರೇಖೆಯು ಮೇಲೆ ಈ ಕ್ರಾಸ್ ಚಿಹ್ನೆ ಇದ್ದರೆ ವ್ಯಕ್ತಿ ವಿಧುರ ಜೀವನ ನಡೆಸಬೇಕಾಗುತ್ತದೆಂದು ಸಂಕೇತ ನೀಡುತ್ತದೆ.

**17. ತ್ರಿಕೋನ**

ಅಂಗೈನಲ್ಲಿ ಮಸ್ತಿಷ್ಕ ರೇಖೆ, ಜೀವನ ರೇಖೆ ಮತ್ತು



ಬುಧರೇಖೆಯೊಂದಿಗೆ ಸೇರಿ ಯಾವ ತ್ರಿಕೋನ ಉಂಟಾಗುತ್ತದೋ ಆ

ತ್ರಿಕೋನ ಅತುಲ ಧನ ಪ್ರಾಪ್ತಿಯಾಗುತ್ತದೆಂದು ಸಂಕೇತ ನೀಡುತ್ತದೆ. ಇಂತಹ ವ್ಯಕ್ತಿಯ ಜೀವನದಲ್ಲಿ ಆಕಸ್ಮಿಕ ರೂಪದಿಂದ ಶ್ರೇಷ್ಠ ಧನಲಾಭವಾಗುತ್ತದೆ.

## 18. ಗುರುವಲಯ

ಗುರು ಮತ್ತು ಶನಿಯ ಬೆರಳುಗಳಿಂದ ಹೊರಡುವ ಈ ಚಿಕ್ಕ ರೇಖೆ ಗುರು ಕ್ಷೇತ್ರದ ಹೊರ ದಡವನ್ನು ಸ್ಪರ್ಶ ಮಾಡುತ್ತಾ ಜೀವನ ರೇಖೆ



ಆರಂಭವಾಗುವ ಸ್ಥಾನದ ಮೇಲುಭಾಗದಲ್ಲಿ ಸಮಾಪ್ತಿಯಾಗುತ್ತದೆ. ಈ ರೀತಿ ಬೃಹಸ್ಪತಿ ಕ್ಷೇತ್ರದ ಮುದ್ರೆಯ ಸಮಾನ ಸುತ್ತುವರೆಯುವುದರಿಂದ ಈ ರೇಖೆಯನ್ನು ಗುರುವಲಯವೆಂದು ಕರೆಯುತ್ತಾರೆ.

ಈ ರೇಖೆಯ ಪ್ರಭಾವ ಮನುಷ್ಯನ ಮಸ್ತಿಷ್ಕದ ಮೇಲೆ ಗೂಢ ವಿದ್ಯೆಯ ಜ್ಞಾನಾರ್ಥವಾಗಿ ಬೀಳುತ್ತದೆ. ಇಂತಹ ವ್ಯಕ್ತಿ ಆ ವಿದ್ಯೆಗಳನ್ನು ಅಧ್ಯಯನ ಮಾಡಲು ಪ್ರೇರಿತನಾಗುತ್ತಾನೆ. ಅವನಲ್ಲಿ ಭಾವನೆಗಳು ಅಧಿಕವಾಗಿರುವುದರಿಂದ ಮನೋವಿಜ್ಞಾನದ ಬಗ್ಗೆಯೂ ಹೆಚ್ಚು ಆಸಕ್ತಿ ಉಂಟಾಗುತ್ತದೆ.

ಒಂದು ವೇಳೆ ಅನೇಕ ರೇಖೆಗಳು ವಿಭಿನ್ನ ದಿಕ್ಕಿನಲ್ಲಿ ಎದ್ದರೆ ಮೇಲೆ ಹೇಳಿದ ಲಕ್ಷಣಗಳಲ್ಲಿ ದೃಢತೆ ಉಂಟಾಗುತ್ತದೆ.

ಬ್ರಹ್ಮಜ್ಞಾನ ಅಥವಾ ಆತ್ಮಜ್ಞಾನದ ಪ್ರಾಪ್ತಿಗಾಗಿ ಯೋಗ್ಯತೆ ಇರಬೇಕು. ಯಾರ ತರ್ಕಶಕ್ತಿ ಪ್ರಬಲವಾಗಿರುತ್ತದೋ ಅವರಲ್ಲಿ ಅಧ್ಯಯನ ನಡೆಸುವ ಸ್ವಭಾವವಿರುತ್ತದೆ. ಒಂದು ವೇಳೆ ಇದು ಉಪಲಬ್ಧವಾಗಿದ್ದರೆ ಸಫಲತೆ ಖಂಡಿತ ಪ್ರಾಪ್ತವಾಗುತ್ತದೆ. ಗುರುವಲಯವೂ ಸಹ ಅಂಥವರನ್ನೇ ಅಧಿಕ ಸಫಲರನ್ನಾಗಿ ಮಾಡುತ್ತದೆ.

ಗುರುವಲಯದ ದೃಢತೆ ಮನುಷ್ಯನ ಕಲ್ಪನಾಶೀಲತೆಗೆ ಪ್ರೋತ್ಸಾಹ ನೀಡುತ್ತದೆ. ಇಂತಹ ಮನುಷ್ಯನಿಗೆ ಸ್ವಪ್ನಗಳು ಹೆಚ್ಚಾಗಿ ಕಾಣುತ್ತವೆ ಮತ್ತು ದೇವಿ ಸಂಕೇತದ ಪ್ರತಿ ಅಧಿಕ ನಿಷ್ಠೆ ಅವನನ್ನು ದಿವ್ಯದೃಷ್ಟಿ ಉಳ್ಳವನನ್ನಾಗಿ ಮಾಡುತ್ತದೆ. ಆದರೆ ಮನುಷ್ಯ ಇದರಲ್ಲಿ ಸಫಲತೆ ಪಡೆದೇ ಪಡೆಯುತ್ತಾನೆಂದು ಅರ್ಥವಲ್ಲ.

ಸಶಕ್ತ ಗುರುರೇಖೆಯ ಜೊತೆಯಲ್ಲಿ ಬೆರಳುಗಳು ವರ್ಗಾಕಾರದ ತುದಿ ಮತ್ತು ಗಂಟುಳ್ಳ ಕೀಲುಗಳಿಂದ ಯುಕ್ತವಾಗಿದ್ದರೆ ಮನುಷ್ಯ ಅತ್ಯಂತ ಮಹಾತ್ಮನಾಗುತ್ತಾನೆ. ಒಂದು ವೇಳೆ ಅವನಲ್ಲಿ ಅಧ್ಯಯನ ಮತ್ತು ತರ್ಕ ಮಾಡುವ ಸ್ವಭಾವವಿದ್ದರೆ ಈ ಲಕ್ಷಣ ಸಫಲತೆಯನ್ನು ವ್ಯಕ್ತಗೊಳಿಸುತ್ತದೆ. ಒಂದು ವೇಳೆ ಶೀರ್ಷ ರೇಖೆಯೂ ಸಹ ಸಶಕ್ತವಾಗಿದ್ದರೆ ಇದು ತನ್ನ ಫಲವನ್ನು ಪ್ರಭಾವೋತ್ಪಾದಕ ರೀತಿಯಲ್ಲಿ ಪ್ರಸ್ತುತಪಡಿಸಲು ಪ್ರಯತ್ನ ಶೀಲವಾಗಿರುತ್ತವೆ.

ಈ ರೇಖೆ ಸುಂದರವಾಗಿದ್ದರೆ ನಿಪುಣ ವ್ಯಕ್ತಿತ್ವವನ್ನು ಪರಿಚಯಿಸುತ್ತದೆ. ಇಂತಹ ಜಾತಕನು ಸಾಹಸ ಮತ್ತು ಸಂಕಲ್ಪದಿಂದ ತೆಗೆದುಕೊಂಡರೆ ಸಫಲತೆ ಖಂಡಿತ ದೊರಕುತ್ತದೆ.

ಒಂದು ವೇಳೆ ಅನ್ಯ ಲಕ್ಷಣಗಳು ಅನುಕೂಲವಿರದಿದ್ದರೆ ಗುರುವಲಯ ಒಂದೇ ಕುಶಲ ವ್ಯಕ್ತಿತ್ವದ ಪರಿಚಾಯಕವಲ್ಲ.

### 19. ಶನಿ ವಲಯ

ಈ ರೇಖೆ ಬೃಹಸ್ಪತಿ ಮತ್ತು ಶನಿ ರೇಖೆಗಳ ಮಧ್ಯದಿಂದ ಹೊರಟು ಶನಿಯನ್ನು ಸುತ್ತುವರೆಯುತ್ತಾ ಸೂರ್ಯ ಕ್ಷೇತ್ರದವರೆಗೆ ತಲುಪುತ್ತದೆ.



ಇಂತಹ ವ್ಯಕ್ತಿ ಕರ್ಮ ಕ್ಷೇತ್ರದಲ್ಲಿ ಎಂದಿಗೂ ಸಫಲನಾಗಲು ಸಾಧ್ಯವಿಲ್ಲ. ಶನಿಯ ದುರ್ಗುಣ ಪ್ರಭಾವ ಹೆಚ್ಚಾಗುತ್ತದೆ. ಹೊಟ್ಟೆ ಪಾಡಿಗಾಗಿ

ಅಲೆದಾಡಬೇಕಾಗುತ್ತದೆ. ಬಾರಿ ಬಾರಿಗೂ ನಷ್ಟ ಉಂಟಾಗುತ್ತದೆ ಮತ್ತು ವ್ಯಾಪಾರವನ್ನು ಬಾರಿ ಬಾರಿಗೂ ಬದಲಿಸಬೇಕಾಗಿ ಬರುತ್ತದೆ.

ಇದೆಲ್ಲದಕ್ಕೂ ಶನಿಯ ಪ್ರಭಾವದಿಂದ ಉತ್ಪನ್ನವಾಗುವ ಅಸ್ಥಿರ ಮನೋವೃತ್ತಿ ಮತ್ತು ಧೈರ್ಯಭಾವನೆಯೇ ಕಾರಣವಾಗಿರುತ್ತದೆ. ಶನಿಯ ಕೆಟ್ಟ ಪ್ರಭಾವ ಯಾವುದೇ ಯೋಜನೆಯನ್ನು ಸಫಲವಾಗಲು ಬಿಡುವುದಿಲ್ಲ.

ಇಂತಹ ವ್ಯಕ್ತಿ ನಿರಾಶೆಗೊಂಡು ಆತ್ಮಹತ್ಯೆ ಮಾಡಿಕೊಳ್ಳುವ ಮಟ್ಟಕ್ಕೆ ತಲುಪುತ್ತಾನೆ.

ಊರ್ಧ್ವ ಮಂಗಳದ ನಿರ್ಬಲತೆಯ ಜೊತೆಯಲ್ಲಿ ಹೆಬ್ಬೆರಳು ಚಿಕ್ಕದಾಗಿರುವುದು ಬುಧರೇಖೆ ಮತ್ತು ಶೀರ್ಷ ರೇಖೆ ದೋಷ ಪೂರ್ಣವಾಗಿದ್ದರೆ ವ್ಯಕ್ತಿ ಅತ್ಯಂತ ನಿರಾಶನಾಗಿ ಆತ್ಮಹತ್ಯೆಯ ಕಡೆಗೆ ಉನ್ಮುಖನಾಗುತ್ತಾನೆ.

ಸುಭದ್ರ ಮತ್ತು ಸುಪುಷ್ಟ ಹೆಬ್ಬೆರಳಿನ ಜೊತೆಯಲ್ಲಿ ಗುರು, ಶುಕ್ರ ಮತ್ತು ಸೂರ್ಯ ಕ್ಷೇತ್ರ ಸಬಲವಾಗಿದ್ದರೆ ಶನಿ ದೋಷಗಳು ಶಮನವಾಗುತ್ತವೆ.

ಒಂದು ವೇಳೆ ವಲಯ ಪೂರ್ಣವಾಗುವುದಕ್ಕೆ ಮುಂಚೆಯೇ ಕತ್ತರಿಸಿ ಹೋದರೆ ಶುಭಲಕ್ಷಣವೆಂದು ಭಾವಿಸಬೇಕು. ಇದರ ಕಾರಣದಿಂದಾಗಿ ಶನಿರೇಖೆ ಶುಭತ್ವ ಉಳಿದುಕೊಂಡುಬಿಡುತ್ತದೆ. ಪರಿಣಾಮ ಸ್ವರೂಪ ಮನುಷ್ಯ ಅಧಿಕ ಅಸಫಲನು ಮತ್ತು ನಿರಾಶನೂ ಆಗುವುದಿಲ್ಲ.

ಶನಿ ವಲಯದ ಜೊತೆಯಲ್ಲಿ ದೋಷಪೂರ್ಣ ಮಂಗಳ ಕ್ಷೇತ್ರ ಮತ್ತು ಬುಧ ರೇಖೆಯ ನಿರ್ಬಲತೆ ಸಾಹಸ ಹೀನತೆಯ ಪರಿಚಯ ನೀಡುತ್ತದೆ. ಇಂತಹ ವ್ಯಕ್ತಿ ಆತ್ಮಜ್ಞಾನದ ಕಾರಣದಿಂದ ಅನೇಕ ಕೆಟ್ಟ ವಿಚಾರಗಳ ಕಡೆಗೆ ಅಗ್ರಸರನಾಗುತ್ತಾನೆ. ಇವುಗಳಲ್ಲಿ ಅಸಫಲತೆ, ಆತ್ಮಾಘಾತ ಅಥವಾ ಅರ್ಧ ವಿಕ್ಷಿಪ್ತತೆಯೂ ಸೇರಿಕೊಂಡಿವೆ.

ಮೇಲೆ ತಿಳಿಸಿದ ದೋಷಗಳ ಜೊತೆಯಲ್ಲಿ ಒಂದು ವೇಳೆ ನಿರ್ಬಲ ಬುಧ ರೇಖೆಯ ಮೇಲೆ ದ್ವೀಪದ ಚಿಹ್ನೆ ಇದ್ದರೆ ಇದು ಸಾಹಸ ಹೀನತೆಯನ್ನು ಪರಿಚಯಿಸುತ್ತದೆ. ಇಂತಹ ವ್ಯಕ್ತಿ ಅನ್ಯಾಯವನ್ನು ಸಹಿಸಿಕೊಂಡರೂ ಅದರ ವಿರುದ್ಧ ಪ್ರತಿಭಟನೆ ಮಾಡುವ ಸಾಹಸವನ್ನು ಒಟ್ಟುಗೂಡಿಸಿಕೊಳ್ಳಲಾರ ಮತ್ತು ಪ್ರತಿದಿನ ಕೆಳಮಟ್ಟಕ್ಕೆ ಸಾಗುತ್ತಾ ಹೋಗುತ್ತಾನೆ.

ಶನಿ ರೇಖೆಯ ಜೊತೆಯಲ್ಲಿ ಶೀರ್ಷರೇಖೆಯ ಮೇಲೆ ದ್ವೀಪ ಚಿಹ್ನೆ ಇದ್ದರೆ ಅದು ಕ್ಷಣಿಕ ವಿಚಾರಗಳನ್ನು ಸೂಚಿಸುತ್ತದೆ. ಇದರ ಕಾರಣದಿಂದಾಗಿ ಮನುಷ್ಯ ತನ್ನನ್ನು ತಾನು ಸ್ಥಿರವಾಗಿ ಇಟ್ಟುಕೊಳ್ಳಲಾರ, ಪರಿಣಾಮ ಸ್ವರೂಪವಾಗಿ ಅಸಫಲತೆಯೇ ಉಂಟಾಗುತ್ತದೆ.

ಭಾಗ್ಯರೇಖೆ ಅಥವಾ ಸೂರ್ಯರೇಖೆ ದೋಷಯುಕ್ತವಾಗಿದ್ದರೆ ಅಥವಾ ಭಗ್ನವಾಗಿದ್ದರೆ ಶನಿರೇಖೆಯ ಪ್ರಭಾವ ಹೆಚ್ಚಾಗುತ್ತದೆ. ಇದರಿಂದ ಕಾರ್ಯದಲ್ಲಿ ಮನಸ್ಸಿರುವುದಿಲ್ಲ ಮತ್ತು ಮನುಷ್ಯ ತನ್ನ ವ್ಯಾಪಾರವನ್ನು ಪದೇ ಪದೇ ಬದಲಿಸುತ್ತಿರುತ್ತಾನೆ.

ಕೈ ಕೋಮಲ ಮತ್ತು ಸಡಿಲವಾಗಿದ್ದರೆ, ಶೀರ್ಷ ರೇಖೆ ಕುರೂಪವಾಗಿದ್ದರೆ ಮತ್ತು ಮಂಗಳ ಕ್ಷೇತ್ರ ದುರ್ಬಲವಾಗಿದ್ದರೆ ಮನುಷ್ಯ ಶನಿರೇಖೆಯಿಂದ ಹೆಚ್ಚು ಪ್ರಭಾವಿತನಾಗುತ್ತಾನೆ. ಒಂದು ವೇಳೆ ಶನಿ ರೇಖೆಯ ಉಪಸ್ಥಿತಿಯಲ್ಲಿ ಶೀರ್ಷ ರೇಖೆ ಪ್ರಬುದ್ಧವಾಗಿದ್ದರೆ ಅಥವಾ ತನ್ನ ಶಾಖೆಗಳನ್ನು ಚಂದ್ರಕ್ಷೇತ್ರದ ಕಡೆಗೆ ಬಾಗಿಸುತ್ತಿದ್ದರೆ ವ್ಯಕ್ತಿ ಕಲ್ಪನಾ ಪ್ರಧಾನನಾಗುತ್ತಾನೆ. ಅವನು ಮೆದುಳಿನ ಕುದುರೆ ಓಡಿಸುತ್ತಿರುತ್ತಾನೆ ಅಥವಾ ಮರಳಿನಲ್ಲಿ ಅರಮನೆ ಕಟ್ಟುತ್ತಿರುತ್ತಾನೆ. ಆದ್ದರಿಂದ ನಿರಾಶನಾದರೆ ಅಸಫಲತೆ ಪಡೆಯುತ್ತಾನೆ.

ಮಂಗಳ ಉಚ್ಚವಾಗಿ ಮತ್ತು ನಿರ್ದೋಷವಾಗಿದ್ದರೆ ಶನಿಯ ಪ್ರಭಾವವನ್ನು ಅದುಮಿಡುತ್ತಾನೆ. ಇಂತಹ ವ್ಯಕ್ತಿ ಸಾಹಸದ ಬಲದಿಂದ ಮುಂದುವರೆಯುತ್ತಾನೆ ಮತ್ತು ಅಸಫಲತೆಯಿಂದ ನಿರಾಶೆಗೊಳ್ಳುವುದಿಲ್ಲ.

## 20. ಶುಕ್ರವಲಯ

ಶುಕ್ರವಲಯದ ಉಗಮ ಮತ್ತು ಅವಸಾನ ಸ್ಥಾನ ಕೆಳಕಂಡಂತಿವೆ.

1. ತೋರು ಬೆರಳಿನಿಂದ ಆರಂಭವಾಗಿ ಅರ್ಧ ಅಥವಾ ಚತುರ್ಥಾಂಶ ಮುದ್ರೆಯ ಸಮಾನ ಶನಿ ಮತ್ತು ರವಿ ಕ್ಷೇತ್ರಗಳಲ್ಲಿ ಹಾದು ಕಿರುಬೆರಳಿನ ಮೇಲೆ ಸಮಾಪ್ತಿಗೊಳ್ಳುತ್ತದೆ. ಇದನ್ನೇ ಶುಕ್ರ ಮುದ್ರೆ ಎನ್ನುತ್ತಾರೆ.
2. ಗುರುಕ್ಷೇತ್ರದಿಂದ ಆರಂಭವಾಗಿ ಉದ್ದದಲ್ಲಿ ಮೊಟ್ಟೆಯಾಕಾರ ಹೃದಯರೇಖೆಯಿಂದ ಮೇಲೆ ಬುಧದಲ್ಲಿ ತಲುಪುತ್ತಾ ತಲುಪುತ್ತಾ ಸಮಾಪ್ತಿಗೊಳ್ಳುವುದೇ ಶುಕ್ರಮುದ್ರೆಯಾಗಿರುತ್ತದೆ.
3. ತೋರು ಬೆರಳು ಮತ್ತು ಮಧ್ಯದ ಬೆರಳಿನ ಮಧ್ಯಭಾಗದಿಂದ ಉತ್ಪನ್ನವಾಗಿ ಧನುಸ್ಸು ಆಕಾರವಾಗಿ ಉಂಗುರದ ಬೆರಳು ಮತ್ತು

ಕಿರುಬೆರಳಿನ ಮಧ್ಯಭಾಗದಲ್ಲಿ ಯಾವ ಸ್ಥಾನವಿದೆಯೋ ಅಲ್ಲಿ ತಲುಪಿ ಸಮಾಪ್ತಿಗೊಳ್ಳುವುದೇ ಶುಕ್ರಮುದ್ರೆಯಾಗಿದೆ.

4. ಮಧ್ಯದ ಬೆರಳು ಮತ್ತು ಉಂಗುರದ ಬೆರಳನ್ನೇ ವೃತ್ತಾಕಾರವಾಗಿ ಸುತ್ತಿಕೊಂಡು ಸಮಾಪ್ತಿಗೊಳ್ಳುವುದೇ ಶುಕ್ರಮುದ್ರೆಯಾಗಿದೆ.

ಈ ರೇಖೆ ಅನೇಕ ಬಾರಿ ಹೃದಯ ರೇಖೆಯ ಅಭಾವವನ್ನೂ ಸಹ



ಪೂರ್ತಿ ಮಾಡುತ್ತದೆ. ಕೆಲವು ಕೈಗಳಲ್ಲಿ ಈ ಶುಕ್ರ ಮುದ್ರೆ ಒಂದು ಮತ್ತೆ ಕೆಲವು ಕೈಗಳಲ್ಲಿ ಎರಡು-ಮೂರು ಅಥವಾ ನಾಲ್ಕರವರೆಗೂ ಇರುತ್ತವೆ. ಕೆಲವು ಕೈಗಳಲ್ಲಿ ಎರಡು ಸಮಾನಾಂತರ ರೇಖೆಗಳ ರೂಪದಲ್ಲಿ ಮತ್ತೆ ಕೆಲವು ಕೈಗಳಲ್ಲಿ ವೃತ್ತಾಕಾರದ ರೇಖೆಗಳ ರೂಪದಲ್ಲಿ ಇನ್ನೂ ಕೆಲವು ಕೈಗಳಲ್ಲಿ ಎರಡು ಚೂರಾಗಿ ನಾಲ್ಕು ರೇಖೆಗಳ ರೂಪದಲ್ಲಿ ಕಾಣಿಸುತ್ತವೆ.

ಇವುಗಳೆಲ್ಲದರ ಪ್ರಭಾವ ಆಕಾರ-ಪ್ರಕಾರ ಮತ್ತು ಸ್ವರೂಪವನ್ನು ಅವಲಂಬಿಸಿರುತ್ತದೆ.

ಈ ರೇಖೆಯ ಪ್ರಮುಖತೆ ಇರುವ ವ್ಯಕ್ತಿಗಳು ಸ್ನಾಯುವಿನ ನಿರ್ಬಲತೆಯ ಕಾರಣದಿಂದ ವಿಕ್ಷಿಪ್ತಾವಸ್ಥೆಯವರೆಗೂ ತಲುಪುತ್ತಾರೆ. ಈ ರೇಖೆ ಹೆಚ್ಚು ಪ್ರಭಾವ ಶಾಲಿಯಾಗಿಲ್ಲದೇ ಹೋದರೂ ಸಹ ಮಾನಸಿಕ ಅವಸ್ಥೆಯನ್ನು ನೀಡುತ್ತದೆ. ಅದು ಅನೈತಿಕತೆಯ ಕಡೆಗೆ ಬಾಗಿಸುತ್ತದೆ. ವ್ಯಕ್ತಿ ಮಾನಸಿಕ ಉತ್ತೇಜನೆ ಮತ್ತು ಅಶ್ಲೀಲ ವಿಚಾರಗಳಲ್ಲಿ ಮುಳುಗುತ್ತಾನೆ.

ಯಾವ ಶುಕ್ರ ಮುದ್ರೆ ಕೇವಲ ಶನಿ ಮತ್ತು ಸೂರ್ಯ ಕ್ಷೇತ್ರವನ್ನು ಮಾತ್ರ ಕೈನಲ್ಲಿ ಆವರಿಸಿಕೊಂಡಿರುತ್ತದೋ ಮತ್ತು ಕೈನ ರಚನೆಯು ಆಧಾರದ ಮೇಲೆ ಅಶುಭವಾಗಿರುತ್ತದೋ, ಶುಕ್ರ ಮತ್ತು ಚಂದ್ರರೂ

ಸಹದೋಷಪೂರ್ಣವಾಗಿರುತ್ತದೋ ಮತ್ತು ಮಂಗಳ ರೇಖೆ ಆಳವಾಗಿ ಅಗಲವಾಗಿ ಹರಡಿಕೊಂಡಿರುತ್ತದೋ ಮತ್ತು ಕೆಂಪು ಸುಕ್ಕಾದ ಬಣ್ಣವಿರುತ್ತದೋ ಅಂತಹ ಮನುಷ್ಯ ದುರಾಚಾರಿಯೂ, ಲಂಪಟನೂ, ದುಷ್ಟನೂ ಮತ್ತು ಚಾರಿತ್ರ್ಯಹೀನನೂ ಆಗುತ್ತಾನೆ.

ಈ ರೇಖೆ ತನ್ನ ನಿರ್ದೋಷ ಅವಸ್ಥೆಯಲ್ಲಿ ಸದೋಷ ಅವಸ್ಥೆಯಲ್ಲಿರುವಷ್ಟು ಪ್ರಭಾವಶಾಲಿಯಾಗಿರುವುದಿಲ್ಲ. ಶುಭ ರೇಖೆಯ ಶುಭ ಪ್ರಭಾವವೇನೋ ಕಡಿಮೆಯಾಗುತ್ತದೆ. ಆದರೆ ಅಶುಭ ರೇಖೆಯ ಫಲ ಬಹಳ ಹೆಚ್ಚು ಕೆಟ್ಟದ್ದಾಗಿರುತ್ತದೆ. ಇದರ ಕೆಟ್ಟ ಪ್ರಭಾವ ಶರೀರದ ಅಂಗಾಂಗಗಳ ಮೇಲೆ ಬೀಳುತ್ತದೋ ಅಥವಾ ಇಲ್ಲವೋ ಆದರೆ ಮಸ್ತಿಷ್ಕದ ಮೇಲೆ ಖಂಡಿತವಾಗಿ ಬೀಳುತ್ತದೆ.

ಯಾವ ಜನಗಳು ಮಸ್ತಿಷ್ಕ ವಿಕಾರಗಳಿಂದ ಪೀಡಿತರಾಗಿರುತ್ತಾರೋ ಅವರಿಗೆ ಯಾವುದೇ ಸ್ವಾಭಾವಿಕ ಮಾತಿನಲ್ಲಿ ಅಷ್ಟೊಂದು ಆನಂದ ಉಂಟಾಗುವುದಿಲ್ಲ. ಆದರೆ ಕಾಲ್ಪನಿಕ ಮಾತುಗಳಲ್ಲಿ ಬಹಳ ಆನಂದ ಉಂಟಾಗುತ್ತದೆ. ಆದ್ದರಿಂದಲೇ ಇವರು ತಮ್ಮ ಇಚ್ಛಾಶಕ್ತಿಯಲ್ಲಿ ಅಧಿಕ ಅಧೀನರಾಗಿರುತ್ತಾರೆ. ಇದೇ ರೀತಿ ಎಲ್ಲಿಯಾದರೂ ಶನಿ ಕ್ಷೇತ್ರ ಹೆಚ್ಚು ವಿಕಸಿತವಾಗಿದ್ದರೆ ಎಲ್ಲಾ ಗುಣಗಳು ಅದುಮಲ್ಪಡುತ್ತವೆ ಮತ್ತು ಮನಸ್ಸಿನಲ್ಲಿ ಸಮಾಜ ಅಥವಾ ವ್ಯಕ್ತಿಯ ಪ್ರತಿ ತಿರಸ್ಕಾರ ಉತ್ಪನ್ನವಾಗುತ್ತದೆ.

ಒಂದು ವೇಳೆ ಯಾವುದಾದರೂ ಕೈನಲ್ಲಿ ಇದೇ ಶುಕ್ರ ಮುದ್ರೆ ತೆಳುವಾಗಿ, ಹಗುರವಾಗಿ ನಿರ್ದೋಷವಾಗಿದ್ದು ಯಾವುದೇ ರೂಪದಲ್ಲಿ ಭಾಗ್ಯ ಮತ್ತು ಸೂರ್ಯ ರೇಖೆಯನ್ನು ಸ್ಪರ್ಶ ಮಾಡದ ಹೋದರೆ ಅಥವಾ ಅವುಗಳನ್ನು ಕತ್ತರಿಸದೇ ಹೋದರೆ ಯಾವುದಾದರೂ ರೀತಿಯಿಂದ ಅಲ್ಪ ಸ್ವಲ್ಪ ಶುಭಫಲದಾಯಕವಾಗಿ ಖಂಡಿತಾ ಆಗುತ್ತದೆ.

ಈ ರೇಖೆಯ ಮೂಲಕ ಭಾಗ್ಯರೇಖೆ ಮತ್ತು ಕೀರ್ತಿ ರೇಖೆ ಕತ್ತರಿಸಲ್ಪಟ್ಟರೆ ಸ್ನಾಯುವಿನ ದುರ್ಬಲತೆ ಉಂಟಾಗುತ್ತದೆ.

ಶೀರ್ಷ ರೇಖೆ ಮತ್ತು ಜೀವನ ರೇಖೆ ಸ್ವಸ್ಥವಾಗಿ, ಸುಂದರವಾಗಿ, ಸುಭದ್ರವಾಗಿದ್ದರೆ ಮತ್ತು ಬೃಹಸ್ಪತಿ ಮತ್ತು ಶುಕ್ರಕ್ಷೇತ್ರ ವಿಕಸಿತವಾಗಿದ್ದರೆ ಅಂತಹ ವ್ಯಕ್ತಿಯ ಮೇಲೆ ಶುಭ ಪ್ರಭಾವ ವಿಶೇಷವಾಗಿರುತ್ತದೆ. ಕಾರಣ ಈ ಸ್ಥಿತಿಯಲ್ಲಿ ಇದರ ಮೂಲಕ ಸೂರ್ಯರೇಖೆ ಮತ್ತು ಹೃದಯ ರೇಖೆಯ ಗುಣ ಹೆಚ್ಚಾಗುತ್ತವೆ ಫಲಸ್ವರೂಪವಾಗಿ ವ್ಯಕ್ತಿಯ ಮೇಲೆ

ಚಾರಿತ್ರಿಕ ನಿಯಂತ್ರಣದ ಜೊತೆಯಲ್ಲಿ ಸ್ನಾಯುವಿನ ಸಂವೇದನಶೀಲತೆ ವೃದ್ಧಿಯಾಗುತ್ತದೆ.

ಅಶುಭ ಶುಕ್ರ ಮುದ್ರೆ ಆಳವಾಗಿ, ಅಗಲವಾಗಿ ಕೆಂಪಾಗಿದ್ದರೆ ಮತ್ತು ಭಾಗ್ಯ ಹಾಗೂ ಸೂರ್ಯ ರೇಖೆಯನ್ನು ಕತ್ತರಿಸಿದರೆ ವ್ಯಕ್ತಿಯು ಬುದ್ಧಿ ಮತ್ತು ಧನದ ನಾಶವಾಗುತ್ತದೆ. ವ್ಯಕ್ತಿ ವಿಚಾರ ದೂಷಿತನು, ಪ್ರೇಮೋನ್ಮತ್ತನೂ, ಕಾಮಲೋಲುಪನೂ, ಕಾಮಾಂಧನೂ ಆಗುತ್ತಾನೆ ಮತ್ತು ಕೆಟ್ಟ ಹೆಸರು ಪಡೆಯುತ್ತಾನೆ.

ಈ ರೇಖೆ ಒಂದು ವೇಳೆ ತನ್ನ ಸ್ಥಾನದಿಂದ ಸ್ವಲ್ಪ ಸರಿದುಕೊಂಡಿದ್ದರೆ ಮತ್ತು ಶನಿಯಿಂದ ಬುಧ ಕ್ಷೇತ್ರದವರೆಗೆ ತನ್ನ ಮಾರ್ಗವನ್ನು ಮಾಡಿಕೊಂಡರೆ ವ್ಯಕ್ತ ಸಂಸಾರದ ಸುಖದಲ್ಲಿ ಬಿದ್ದು ನೈತಿಕತೆ ಮತ್ತು ವಿವೇಕವನ್ನು ಮರೆತುಬಿಡುತ್ತಾನೆ. ಅಪಕೀರ್ತಿ ಪಡೆಯುತ್ತಾನೆ.

ಶುಕ್ರ ರೇಖೆ ನಿರ್ದೋಷವಾಗಿದ್ದರೆ ಬುದ್ಧಿಯು ಪ್ರಖರತೆ ಇರುತ್ತದೆ. ಆದಕಾರಣ ಮನುಷ್ಯ ದಾರ್ಶನಿಕನು, ಸಾಹಿತ್ಯಕಾರನು, ಕಾವ್ಯಪ್ರೇಮಿಯೂ, ಸಂಗೀತಜ್ಞನೂ ಆಗುತ್ತಾನೆ. ಮದಿರೆ ಮತ್ತು ಸುಂದರಿಯರ ಚಟಕ್ಕೆ ಬಲಿಯಾಗಿ ಯಾವುದೋ ರೀತಿ ವಿರುದ್ಧ ಫಲ ಪಡೆಯುತ್ತಾನೆ.

ಭಾವನಾತ್ಮಕ ಸಂವೇದನೆಯನ್ನು ಪ್ರಕಟಪಡಿಸುವುದು ಇದರ ನಿಶ್ಚಿತಗುಣವಾಗಿದೆ. ಜೊತೆಯಲ್ಲೇ ಮಾನವೀಯ ಗುಣಗಳಾದ ಕರುಣೆ, ದಯೆ, ಸಹಾನುಭೂತಿ, ಉದಾರತೆ, ಧೈರ್ಯ ಮುಂತಾದವುಗಳ ಉದ್ದೀಪನ ಮಾಡುತ್ತದೆ.

ಒಂದು ವೇಳೆ ಯಾರ ಕೈಲಾದರೂ ನಿಕೃಷ್ಟ ರೀತಿಯ ಶುಕ್ರ ಮುದ್ರೆ ಇದ್ದರೆ ಮತ್ತು ಇದು ಇಮ್ಮಡಿ, ಮುಮ್ಮಡಿ, ನಾಲ್ಮಡಿಯಾಗಿ ಒಂದು ಮತ್ತೊಂದರ ಸಮಾನಾಂತರವಾಗಿದ್ದರೆ ಮತ್ತು ಸೂರ್ಯ ಹಾಗೂ ಭಾಗ್ಯರೇಖೆಯನ್ನು ಕತ್ತರಿಸಿದರೆ ಅಂತಹ ಸ್ತ್ರೀ ಪುರುಷರು ಅಪ್ರಾಕೃತಿಕ ನಿಯಮಗಳ ವರ್ತನೆ ಉಳ್ಳವರಾಗುತ್ತಾರೆ. ಇಂತಹ ಸ್ತ್ರೀಯರು ಇರುಳು ಕುರುಡರೂ ಮತ್ತು ಸನ್ನಿ ಹಿಡಿದವರೂ ಆಗಿರುತ್ತಾರೆ. ಇಂತಹ ಪುರುಷರು ರೋಗಗಳಿಂದ ಪೀಡಿತರಾಗಿ ದುರ್ಬಲರು, ಹಳದಿ ವರ್ಣದವರು, ನಿಶ್ಶಕ್ತ ಮಸ್ತಿಷ್ಕದವರು ಆಗುತ್ತಾರೆ.

ಬಲಗೈನ ಶುಕ್ರ ಮುದ್ರೆಯನ್ನು ಇತ್ತಕಡೆಯಿಂದ ಅತ್ತಕಡೆಯಿಂದ ಬರುವ ಅವರೋಧ ರೇಖೆಗಳು ಕತ್ತರಿಸಿದರೆ ಅಂತಹ ವ್ಯಕ್ತಿ ಕಾಮಾಂಧನಾಗಿ ಯಶಸ್ಸು, ಕೀರ್ತಿ ಮತ್ತು ಪ್ರಭುತ್ವವನ್ನು ಕಳೆದುಕೊಳ್ಳುತ್ತಾನೆ. ಭಾಗ್ಯ

ರೇಖೆಯು ಸಹ ಇದರ ಜೊತೆಯಲ್ಲಿ ಖಂಡಿಸಲ್ಪಟ್ಟಿದ್ದರೆ ಭಾಗ್ಯಹೀನನಾಗುತ್ತಾನೆ ಮತ್ತು ರವಿ ಖಂಡಿಸಲ್ಪಟ್ಟಿದ್ದರೆ ಕರ್ಮಹೀನನಾಗುತ್ತಾನೆ.

ಶುಕ್ರ ಮುದ್ರೆಯ ಮೇಲೆ ನಕ್ಷತ್ರ ಚಿಹ್ನೆ ಇದ್ದರೆ ರೋಗಿಯನ್ನಾಗಿ ಮಾಡುತ್ತದೆ. ಧಾತುಕ್ಷೀಣ ಮತ್ತು ಪ್ರಮೇಹ ರೋಗಗಳು ಉಂಟಾಗುತ್ತವೆ.

## 21. ರವಿವಲಯ

ಒಂದು ವೇಳೆ ಯಾವುದಾದರೂ ರೇಖೆ ಮಧ್ಯದ ಬೆರಳು ಮತ್ತು



ಉಂಗುರದ ಬೆರಳಿನ ಮಧ್ಯದಿಂದ ಹೊರಟು ಸೂರ್ಯಪರ್ವತವನ್ನು ಸುತ್ತುತ್ತಾ ಉಂಗುರದ ಬೆರಳು ಮತ್ತು ಕಿರುಬೆರಳಿನ ಮಧ್ಯಕ್ಕೆ ಹೋಗಿ ಸಮಾಪ್ತಿಗೊಂಡರೆ ಇಂತಹ ರೇಖೆಯನ್ನು ರವಿವಲಯ ಅಥವಾ ರವಿಮುದ್ರೆ ಎಂದು ಕರೆಯುತ್ತಾರೆ.

ಯಾವ ವ್ಯಕ್ತಿಯ ಕೈನಲ್ಲಿ ರವಿ ಮುದ್ರೆ ಇರುತ್ತದೋ ಅಂತಹ ವ್ಯಕ್ತಿ ಜೀವನದಲ್ಲಿ ಬಹಳ ಸಾಮಾನ್ಯ ಮಟ್ಟದ ವ್ಯಕ್ತಿಯಾಗುತ್ತಾನೆ. ಅವನಿಗೆ ತನ್ನ ಜೀವನದಲ್ಲಿ ಪದೇ ಪದೇ ಅಸಫಲತೆಯನ್ನು ಎದುರಿಸಬೇಕಾಗುತ್ತದೆ. ಅವಶ್ಯಕತೆಗಿಂತ ಹೆಚ್ಚು ಪರಿಶ್ರಮಪಟ್ಟರೂ ಸಹ ಅವನಿಗೆ ಯಾವುದೇ ರೀತಿಯ ಕೀರ್ತಿ ದೊರೆಯುವುದಿಲ್ಲ. ಇಂತವನು ಯಾರಿಗೇ ಒಳ್ಳೆಯದು ಮಾಡಿದರೂ ಅಥವಾ ಯಾರಿಗೇ ಸಹಾಯ ಮಾಡಿದರೂ ಸಹ ಅವರ ಕಡೆಯಿಂದಲೇ ಅವನಿಗೆ ಕೆಟ್ಟ ಹೆಸರು ಬರುತ್ತದೆ. ಇಂತಹ ವಲಯ ಇರುವುದರಿಂದ ರವಿ ಪರ್ವತಕ್ಕೆ ಸಂಬಂಧಿಸಿದ ಎಲ್ಲಾ ಫಲಗಳು ವಿರುದ್ಧವಾಗಿ ಬದಲಾಗುತ್ತದೆ.

ಇಂತಹ ವ್ಯಕ್ತಿ ತಿಳುವಳಿಕಸ್ತನೂ ಮತ್ತು ಸಚ್ಚರಿತ್ರನಾದರೂ ಸಹ ಅವನಿಗೆ ಕೇವಲ ಅಪಯಶಸ್ಸೇ ದೊರೆಯುತ್ತದೆ ಮತ್ತು ಸಾಮಾಜಿಕ ಜೀವನದಲ್ಲಿ ಕಳಂಕಿತನಾಗಬೇಕಾಗುತ್ತದೆ. ಇಂತಹ ವ್ಯಕ್ತಿಗಳು ತಮ್ಮ ಜೀವನದಿಂದ ನಿರಾಶರಾಗಿಯೇ ಇರುತ್ತಾರೆ.

## 22. ಬುಧವಲಯ

ಒಂದು ವೇಳೆ ಯಾವುದಾದರೂ ರೇಖೆ ಉಂಗುರದ ಬೆರಳು ಮತ್ತು ಕಿರುಬೆರಳಿನ ಮಧ್ಯದಿಂದ ಹೊರಟು ಬುಧ ಪರ್ವತವನ್ನು ಸುತ್ತಿಕೊಂಡು ಅಂಗೈಯಿನ ಅಂಚಿಗೆ ತಲುಪಿದಾಗ ಯಾವ ರೀತಿಯು ವಲಯ ಉಂಟಾಗುತ್ತದೋ ಅದನ್ನು ಬುಧ ವಲಯವೆಂದು ಕರೆಯಲಾಗುತ್ತದೆ.



ಇಂತಹ ಬುಧ ವಲಯ ಬುಧನ ಗುಣಗಳನ್ನು ನಿಶ್ಶಕ್ತವಾಗಿಸುತ್ತದೆ. ಬಾಲ್ಯಾವಸ್ಥೆಯಲ್ಲಿ ಇಂತವನಿಗೆ ಶಿಕ್ಷಣ ಕ್ಷೇತ್ರದಲ್ಲಿ ಬಹಳಷ್ಟು ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಯೌವ್ವನದಲ್ಲಿ ಭೌತಿಕ ಸುಖವನ್ನು ಇವನು ಅನುಭವಿಸಲಾಗುವುದಿಲ್ಲ. ಮತ್ತು ಮುಂದಿನ ಪೂರ್ತಿ ಜೀವನ ದುಃಖಮಯವಾಗಿರುತ್ತದೆ.

# ಅಧ್ಯಾಯ 5
# ಹಸ್ತರೇಖೆಯ ವಿಭಿನ್ನ ಯೋಗಗಳು

## 1. ಶುಭಯೋಗ



ಒಂದು ವೇಳೆ ಬಲಗೈಲಿ ಶನಿ ಪರ್ವತ ವಿಕಸಿತವಾಗಿದ್ದು ಮತ್ತು ಅದರ ಮೇಲೆ ಸ್ಪಷ್ಟವಾಗಿ ಭಾಗ್ಯರೇಖೆ ಉಂಟಾಗಿದ್ದರೆ ಅಂತವನ ಕೈಲಿ ಶುಭಯೋಗ ಉಂಟಾಗುತ್ತದೆ.

ಈ ರೀತಿಯ ಶುಭಯೋಗ ಇರುವ ವ್ಯಕ್ತಿ ಪ್ರಸಿದ್ಧ ಭಾಷಣಕಾರನಾಗುತ್ತಾನೆ. ತಾನು ಬಯಸಿದ್ದನ್ನು ಜನತೆಯಿಂದ ಪಡೆದು ಕೊಳ್ಳುತ್ತಾನೆ. ಇಂತವನ ವ್ಯಕ್ತಿತ್ವ ಆಕರ್ಷಕವೂ ಭವ್ಯವೂ ಆಗಿರುತ್ತದೆ.

## 2. ಗಜಲಕ್ಷ್ಮಿ ಯೋಗ

ಎರಡೂ ಕೈಗಳಲ್ಲಿ ಭಾಗ್ಯರೇಖೆ ಮಣಿಕಟ್ಟಿನಿಂದ ಪ್ರಾರಂಭವಾಗಿ ನೇರವಾಗಿ ಶನಿ ಪರ್ವತದ ಕಡೆಗೆ ಹೋಗುತ್ತಿದ್ದರೆ ಮತ್ತು ಸೂರ್ಯ ಪರ್ವತ ವಿಕಸಿತವಾಗಿರುವುದರ ಜೊತೆಗೆ ಸೂರ್ಯರೇಖೆಯೂ ಸಹ ತೆಳುವಾಗಿ, ಉದ್ದವಾಗಿ, ಕೆಂಪಾಗಿದ್ದರೆ ಮತ್ತು ಮಸ್ತಿಷ್ಕರೇಖೆ, ಆರೋಗ್ಯ ರೇಖೆ ಮತ್ತು ಆಯಸ್ಸು ರೇಖೆ ಪುಷ್ಟವಾಗಿದ್ದರೆ ಅಂತವನ ಕೈಲಿ ಗಜಲಕ್ಷ್ಮಿಯೋಗ ಉಂಟಾಗುತ್ತದೆ.



ಗಜಲಕ್ಷ್ಮಿ ಯೋಗವಿರುವ ವ್ಯಕ್ತಿ ಸಾಧಾರಣ ಮನೆತನದಲ್ಲಿ ಜನಿಸಿದರೂ ಸಹ ಅತ್ಯಂತ ಮೇಲ್ಮಟ್ಟದ ಗೌರವವನ್ನು ಪಡೆದುಕೊಳ್ಳುತ್ತಾನೆ. ಆರ್ಥಿಕ ಮತ್ತು ಭೌತಿಕ ದೃಷ್ಟಿಯಿಂದ ಇಂತಹ ವ್ಯಕ್ತಿಗಳಿಗೆ ಜೀವನ ದಲ್ಲಿ ಕೊರತೆ ಇರುವುದಿಲ್ಲ. ಇಂತವರು ಸ್ವಭಾವದಿಂದ ವಿನಯಶೀಲರು, ಬುದ್ಧಿ ವಂತರು ಮತ್ತು ಗುಣವಂತರಾಗಿರುತ್ತಾರೆ.

ವ್ಯಾಪಾರ ಮತ್ತು ವಿದೇಶಗಳಲ್ಲಿ ಕಾರ್ಯ ಮಾಡುವುದರಿಂದ ಇವರು ಜೀವನದಲ್ಲಿ ಪೂರ್ಣ ಸಫಲತೆಯನ್ನು ಪಡೆಯುತ್ತಾರೆ. ಇವರ ಕೀರ್ತಿ ಅಜರಾಮರವಾಗಿ ಉಳಿಯುತ್ತದೆ.

### 3. ಮರುತಯೋಗ

ಒಂದು ವೇಳೆ ಕೈನಲ್ಲಿ ಶುಕ್ರ ಪರ್ವತ ಪೂರ್ಣ ವಿಕಸಿತವಾಗಿದ್ದರೆ ಮತ್ತು ಅದರ ಮೇಲೆ ಯಾವುದೇ ಪ್ರಕಾರದ ಬಾಧಕ ರೇಖೆಗಳು ಇರದೆ ಹೋದರೆ ಜೊತೆಯಲ್ಲಿ ಗುರುಪರ್ವತ ಸ್ಪಷ್ಟವಾಗಿದ್ದರೆ ಮತ್ತು ಅದರ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ಮತ್ತು ಚಂದ್ರರೇಖೆ ಶಕ್ತಿಯುತವಾಗಿದ್ದರೆ ಹಾಗೂ ನೇರ ಮತ್ತು ಸ್ಪಷ್ಟವಾಗಿದ್ದರೆ ಅಂತಹ ವ್ಯಕ್ತಿಯ ಕೈಲಿ ಮರುತಯೋಗ ಉಂಟಾಗುತ್ತದೆ.



ಮರುತಯೋಗವಿರುವ ವ್ಯಕ್ತಿ ಮಾತುಕತೆಯ ಕಲೆಯಲ್ಲಿ ನಿಪುಣನಾಗಿರುತ್ತಾನೆ ಮತ್ತು ಯೋಗ್ಯನಾಗಿರುತ್ತಾನೆ. ಇಂತಹ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಸಂಪೂರ್ಣ ಸುಖಿಯಾಗಿರುತ್ತಾನೆ. ತಮ್ಮ ಪ್ರಯತ್ನಗಳಿಂದ ಇಂತವರು ವ್ಯಾಪಾರವನ್ನು ಚೆನ್ನಾಗಿ ಅಭಿವೃದ್ಧಿಗೊಳಿಸುತ್ತಾರೆ. ಇವರು ತ್ವರಿತ ನಿರ್ಣಯ ತೆಗೆದುಕೊಳ್ಳುವವರು ಮತ್ತು ಸಮಯವನ್ನು ಚೆನ್ನಾಗಿ ಗುರುತಿಸುವವರೂ ಆಗಿರುತ್ತಾರೆ.

### 4. ದರಿದ್ರಯೋಗ

ಒಂದು ವೇಳೆ ಅಂಗೈನಲ್ಲಿ ಎಲ್ಲಾ ಪರ್ವತಗಳು ದುರ್ಬಲವಾಗಿದ್ದರೆ ಮತ್ತು ಚಂದ್ರಪರ್ವತದ ಮೇಲೆ ಬಿಂದು ಚಿಹ್ನೆ ಇದ್ದರೆ ಜೊತೆಗೆ ಬುಧನ ಬೆರಳಿನ ಮೇಲೆ ನಕ್ಷತ್ರದ ಚಿಹ್ನೆ ಇದ್ದರೆ ಅಂತವನ ಕೈಲಿ ದರಿದ್ರಯೋಗ ಉಂಟಾಗುತ್ತದೆ.



ದರಿದ್ರಯೋಗವಿರುವ ವ್ಯಕ್ತಿ ಕೋಟ್ಯಾಧಿಪತಿಯ ಮನೆಯಲ್ಲಿ ಜನಿಸಿದರೂ ಸಹ ತನ್ನ ದುಷ್ಕರ್ಮಗಳ ಕಾರಣದಿಂದ

ಕೊಡಿಟ್ಟ ಹಣವನ್ನು ಸಮಾಪ್ತಿ ಮಾಡುತ್ತಾನೆ ಮತ್ತು ದರಿದ್ರ ಜೀವನ ನಡೆಸಲು ಬಾಧ್ಯನಾಗುತ್ತಾನೆ.

### 5. ಅಶುಭಯೋಗ

ಒಂದು ವೇಳೆ ಅಂಗೈನಲ್ಲಿ ಸೂರ್ಯರೇಖೆ ಮುರಿದುಹೋಗಿದ್ದರೆ ಮತ್ತು ಸೂರ್ಯ ಪರ್ವತದ ಅಭಾವವಿದ್ದರೆ ಅಂತವನ ಕೈಲಿ ಅಶುಭಯೋಗ ಉಂಟಾಗು ತ್ತದೆ.



ಅಶುಭಯೋಗ ಇರುವ ವ್ಯಕ್ತಿ ಕಾಮಿಯೂ, ಕ್ರೋಧಿಯೂ ಮತ್ತು ಸಾಮಾನ್ಯ ಮಟ್ಟದ ಜೀವನ ನಡೆಸುವಂಥವ ನಾಗುತ್ತಾನೆ. ಇತರರಿಗೆ ಮೋಸ ಮಾಡಿ ಹಣ ಹೊಡೆದುಕೊಳ್ಳುವುದರಲ್ಲಿ ಈತನು ಹೆಚ್ಚು ನಂಬಿಕೆ ಇಟ್ಟುಕೊಳ್ಳುತ್ತಾನೆ. ಇಂತಹ ವ್ಯಕ್ತಿ ಜೀವನದಲ್ಲಿ ಅಸಫಲನಾಗುತ್ತಾನೆ ಮತ್ತು ಹೆಜ್ಜೆ ಹೆಜ್ಜೆಗೂ ಗಂಡಾಂತರವನ್ನು ಎದುರಿಸಬೇಕಾಗಿ ಬರುತ್ತದೆ.

### 6. ವೇಶಿಯೋಗ

ಒಂದು ವೇಳೆ ಅಂಗೈನಲ್ಲಿ ಬುಧ ಮುದ್ರೆ ಮತ್ತು ಶನಿ ಮುದ್ರೆ ಇದ್ದರೆ ಜೊತೆಗೆ ಶುಕ್ರ ಮುದ್ರೆಯೂ ಸಹ ಇದ್ದರೆ ಅಂಥವನ ಕೈಲಿ ವೇಶಿಯೋಗ ಉಂಟಾಗುತ್ತದೆ.



ಯಾವ ವ್ಯಕ್ತಿಯ ಜನ್ಮ ವೇಶಿ ಯೋಗದಲ್ಲಿ ಆಗುತ್ತದೋ ಆ ವ್ಯಕ್ತಿ ಸೌಮ್ಯ ಸ್ವಭಾವದವನು, ಚತುರನು, ಧೀರನು ಮತ್ತು ಗಂಭೀರನು ಆಗುತ್ತಾನೆ. ತನ್ನ ಮಾತಿನ ಮಾಧ್ಯಮದಿಂದ ಇತರರನ್ನು ಪ್ರಭಾವ ಗೊಳಿಸುತ್ತಾನೆ. ಇಂತಹ ವ್ಯಕ್ತಿ ಮುಖಂಡತ್ವ ವಹಿಸಲು ದಕ್ಷನಾಗಿರುತ್ತಾನೆ. ಆದರೂ ಸಹ ಇಂಥವನ ಆರ್ಥಿಕ ಪರಿಸ್ಥಿತಿ ಸರಿ ಇರುವುದಿಲ್ಲ. ಲಕ್ಷ ಸಂಪಾದಿಸಿದರೂ ಅಷ್ಟನ್ನು ಖರ್ಚು ಮಾಡುತ್ತಾನೆ. ಇಂತಹ

ವ್ಯಕ್ತಿಗೆ ಸಮಾಜದಲ್ಲಿ ಗೌರವವಿರುತ್ತದೆ ಮತ್ತು ಅನೇಕರು ಇವನ ಆದರ್ಶಗಳನ್ನೇ ಅನುಕರಣೆ ಮಾಡುತ್ತಾರೆ.

**7. ವಸುಮತಿ ಯೋಗ**



ಒಂದು ವೇಳೆ ಬೆರಳುಗಳು ಗಂಟುಗಳಿಂದ ಕೂಡಿರದೇ ಇದ್ದರೆ ಮತ್ತು ಸ್ವಲ್ಪ ಉದ್ದವಾಗಿ ಇದ್ದರೆ ಜೊತೆಯಲ್ಲಿ ಗುರು, ಸೂರ್ಯ, ಶನಿ ಮತ್ತು ಬುಧ ಪರ್ವತಗಳು ತಮ್ಮ ತಮ್ಮ ಸ್ಥಾನಗಳ ಮೇಲೆ ವಿಕಸಿತವಾಗಿದ್ದರೆ ವಸುಮತಿ ಯೋಗ ಉಂಟಾಗುತ್ತದೆ.

ವಸುಮತಿ ಯೋಗವಿರುವ ವ್ಯಕ್ತಿ ತನ್ನ ಜೀವನದಲ್ಲಿ ಪೂರ್ಣ ಭೌತಿಕ ಸುಖವನ್ನು ಪಡೆದುಕೊಳ್ಳುತ್ತಾನೆ ಮತ್ತು ಇವನ ಜೀವನದಲ್ಲಿ ಹಣಕ್ಕೆ ಯಾವುದೇ ರೀತಿಯ ಕೊರತೆ ಇರುವುದಿಲ್ಲ. ಇಂತಹ ವ್ಯಕ್ತಿಗಳು ಸ್ವಶ್ರಮದಿಂದ ಹಣವನ್ನು ಗಳಿಸಿ ಸಮಾಜದಲ್ಲಿ ಕೀರ್ತಿ ಮತ್ತು ಗೌರವವನ್ನು ಪಡೆದುಕೊಳ್ಳುತ್ತಾರೆ.

**8. ನಪುಂಸಕ ಯೋಗ**

ಒಂದು ವೇಳೆ ಶುಕ್ರ ಪರ್ವತ ಅದುಮಲ್ಪಟ್ಟಿದ್ದರೆ ಮತ್ತು ಅದರ ಮೇಲೆ ಕಲೆಯ ಚಿಹ್ನೆ ಇದ್ದರೆ ನಪುಂಸಕಯೋಗ ಉಂಟಾಗುತ್ತದೆ.



ಇಂತಹ ಯೋಗವಿರುವ ವ್ಯಕ್ತಿಗಳಲ್ಲಿ ಶುಕ್ರಾಣು ಬಹಳ ನಿಶ್ಶಕ್ತವಾಗಿರುತ್ತವೆ ಅಥವಾ ಮೃತಾವಸ್ಥೆಯಲ್ಲಿರುತ್ತವೆ. ಇದರ ಕಾರಣದಿಂದಾಗಿ ಇಂತವರಿಗೆ ಸಂತಾನ ಲಾಭವಿರುವುದಿಲ್ಲ.

**9. ಹಂಸಯೋಗ**

ಒಂದು ವೇಳೆ ಅಂಗೈನಲ್ಲಿ ತೋರು ಬೆರಳು ಉಂಗುರದ ಬೆರಳಿಗಿಂತ ಉದ್ದವಾಗಿದ್ದರೆ, ಗುರು ಪರ್ವತ ಸಂಪೂರ್ಣ ವಿಕಸಿತವಾಗಿದ್ದರೆ ಮತ್ತು



ಕೆಂಪು ಬಣ್ಣದಿಂದ ಕೂಡಿದ್ದರೆ ಹಾಗೂ ಅದರ ಮೇಲೆ ಕ್ರಾಸ್ ಚಿಹ್ನೆಯು ಹೊರತು ಬೇರೆ ಯಾವುದೇ ಚಿಹ್ನೆ ಇಲ್ಲದೆ ಹೋದರೆ ಅವನ ಜೀವನದಲ್ಲಿ ಹಂಸಯೋಗದ ನಿರ್ಮಾಣವಾಗುತ್ತದೆ.

ಹಂಸಯೋಗ ಇರುವ ವ್ಯಕ್ತಿ ಉದ್ದವಾಗಿ ಮತ್ತು ಆಕರ್ಷಕ ಶರೀರದ ಸಂದರ ಪುರುಷನಾಗಿರುತ್ತಾನೆ. ಹಂಸ ಮುಖದ ಮುಖ, ಉನ್ನತ ಲಲಾಟ, ತೀಕ್ಷ್ಣ ಮೂಗು, ವಿಶಾಲ ವಕ್ಷಸ್ಥಳ ಮತ್ತು ಸುಂದರ ವ್ಯಕ್ತಿತ್ವದ ಇಂತಹ ವ್ಯಕ್ತಿ ದೂರದರ್ಶಿಯೂ, ಮಿತ್ರರಿಗೂ ಸಂಬಂಧಿಕರಿಗೂ ಸಹಾಯಕನಾಗಿಯೂ ಇರುತ್ತಾನೆ. ಇಂತವರು ಸಮಾಜದಲ್ಲಿ ಗೌರವವನ್ನೂ ಕೆಲಸದಲ್ಲಿ ಉಚ್ಚಪದವಿಯನ್ನು ಪಡೆಯುತ್ತಾರೆ.

## 10. ಬ್ರಹ್ಮಚರ್ಯ ಯೋಗ



ಒಂದು ವೇಳೆ ಕಿರುಬೆರಳಿನ ಮೊದಲನೇ ಪರ್ವದ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ಬ್ರಹ್ಮಚರ್ಯೆ ಯೋಗ ಉಂಟಾಗುತ್ತದೆ.

ಯಾರ ಕೈಲಿ ಬ್ರಹ್ಮಚರ್ಯ ಯೋಗ ಉಂಟಾಗಿರುತ್ತದೋ ಅಂತಹ ವ್ಯಕ್ತಿ ಜೀವನವಿಡೀ ಸ್ತ್ರೀಯರಿಂದ ದೂರವಿರುತ್ತಾನೆ. ಮದುವೆ ಮಾಡಿಕೊಳ್ಳುವುದಿಲ್ಲ ಮತ್ತು ಸನ್ಯಾಸಿಯಂತೆ ಜೀವನ ಕಳೆಯುವುದರಲ್ಲಿ ಸಫಲನಾಗುತ್ತಾನೆ.

## 11. ರಾಜ್ಯಲಕ್ಷ್ಮಿ ಯೋಗ

ಒಂದು ವೇಳೆ ಅಂಗೈನಲ್ಲಿ ಗುರು, ಶುಕ್ರ, ಬುಧ ಮತ್ತು ಚಂದ್ರನ ಪರ್ವತಗಳು ಪೂರ್ಣ ವಿಕಸಿತವಾಗಿದ್ದರೆ ಮತ್ತು ಕೆಂಪು ಬಣ್ಣದಿಂದ ಕೂಡಿದ್ದರೆ ಅಂತಹ ವ್ಯಕ್ತಿಯ ಕೈಯಲ್ಲಿ ರಾಜ್ಯಲಕ್ಷ್ಮಿಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ತನ್ನ ಜೀವನದಲ್ಲಿ ಸ್ವಪ್ರಯತ್ನದಿಂದ ಉನ್ನತಿ ಗಳಿಸುತ್ತಾನೆ. ಎಲ್ಲಾ ಭೌತಿಕ ಇಚ್ಛೆಗಳು ಸಮಯಕ್ಕೆ ಸರಿಯಾಗಿ ಪೂರ್ಣವಾಗುತ್ತವೆ.



## 12. ವ್ಯಾಪಾರ ಯೋಗ

ಒಂದು ವೇಳೆ ಉಂಗುರದ ಬೆರಳಿನ ತುದಿ ವರ್ಗಾಕಾರವಾಗಿದ್ದರೆ ಮತ್ತು ಬುಧ ಪರ್ವತ ವಿಕಸಿತವಾಗಿದ್ದರೆ ವ್ಯಾಪಾರ ಯೋಗ ಉಂಟಾಗುತ್ತದೆ.

ಯಾರ ಕೈಲಿ ವ್ಯಾಪಾರ ಯೋಗ ಇರುತ್ತದೋ ಅಂತಹ ವ್ಯಕ್ತಿ ಜೀವನದಲ್ಲಿ ಓರ್ವ ಸಫಲ ವ್ಯಾಪಾರಿಯಾಗುತ್ತಾನೆ.



## 13. ಅನ್ವೇಷಣ ಯೋಗ

ಯಾರ ಕೈಲಿ ಮಸ್ತಿಷ್ಕ ರೇಖೆಯ ಮೇಲೆ ಬಿಳಿ ಚಿಹ್ನೆ ಇರುತ್ತದೋ ಅವರಿಗೆ ಅನ್ವೇಷಣ ಯೋಗ ಉಂಟಾಗುತ್ತದೆ.

ಅನ್ವೇಷಣ ಯೋಗವಿರುವ ವ್ಯಕ್ತಿ ಹೊಸ ಹೊಸ ವಸ್ತುಗಳ ಶೋಧ ಮಾಡುವವನು ಮತ್ತು ಸಫಲ ಆವಿಷ್ಕಾರಕನು ಆಗುತ್ತಾನೆ.



**14. ಭಾಗ್ಯಯೋಗ**



ಒಂದು ವೇಳೆ ಅಂಗೈನಲ್ಲಿ ಭಾಗ್ಯರೇಖೆ ಪುಷ್ಟವಾಗಿ ಸೂರ್ಯ ಪರ್ವತದ ಮೇಲೆ ತಲುಪಿದರೆ ಭಾಗ್ಯಯೋಗ ಉಂಟಾಗುತ್ತದೆ.

ಯಾರ ಕೈಲಿ ಭಾಗ್ಯಯೋಗ ಇರುತ್ತದೋ ಅಂತಹವನು ಪ್ರಬಲ ಭಾಗ್ಯಶಾಲಿ ಎಂದು ನಂಬಲಾಗಿದೆ.

**15. ಮಹಾಭಾಗ್ಯ ಯೋಗ**

ಒಂದು ವೇಳೆ ವ್ಯಕ್ತಿಯ ಜನ್ಮದಿನದಲ್ಲಿ ಮತ್ತು ಸೂರ್ಯರೇಖೆ ಪೂರ್ಣ ಉದ್ದವಾಗಿದ್ದರೆ, ಜೊತೆಯಲ್ಲೇ ಸೂರ್ಯಪರ್ವತ ತನ್ನ ಸ್ಥಾನದಲ್ಲಿ ವಿಕಸಿತವಾಗಿದ್ದರೆ ಮತ್ತು ಪುಷ್ಟವಾಗಿದ್ದರೆ ಹಾಗೂ ಚಂದ್ರ ಮತ್ತು ಗುರುಪರ್ವತ ಸದೃಢವಾಗಿದ್ದರೆ ಆವನ ಕೈನಲ್ಲಿ ಮಹಾಭಾಗ್ಯ ಯೋಗ ಉಂಟಾಗುತ್ತದೆ.



ಇಂತಹ ಮಹಾಭಾಗ್ಯಯೋಗವಿರುವ ವ್ಯಕ್ತಿ ಉತ್ತಮ ವಿಚಾರದವನು ಮತ್ತು ಸಮಾಜದ ಮುಖಂಡತ್ವ ವಹಿಸುವವನೂ ಆಗುತ್ತಾನೆ. ಇಂತಹ ವ್ಯಕ್ತಿಯ ಸಂಪರ್ಕದಲ್ಲಿ ಬರುವ ಯಾವುದೇ ವ್ಯಕ್ತಿ ತನ್ನನ್ನು ತಾನು ಸೌಭಾಗ್ಯಶಾಲಿ ಎಂದು ಭಾವಿಸುತ್ತಾನೆ. ಇಂತಹ ವ್ಯಕ್ತಿಗೆ ಹಣದ ಕೊರತೆ ಇರುವುದಿಲ್ಲ. ಮಿತ್ರರು ಸಮಯಕ್ಕೆ ಸರಿಯಾಗಿ ಸಹಕಾರ ನೀಡುತ್ತಾರೆ. ಇಂತಹ ವ್ಯಕ್ತಿಯ ವೃದ್ಧಾಪ್ಯ ಸುಖಮಯವಾಗಿ ಕಳೆಯುತ್ತದೆ.

**16. ಕ್ಷಯರೋಗ ಯೋಗ**

ಒಂದು ವೇಳೆ ಚಂದ್ರ ಪರ್ವತದ ಮೇಲೆ ವೃತ್ತ ಉಂಟಾಗಿದ್ದರೆ ಮತ್ತು

ಆ ವೃತ್ತವನ್ನು ಚಂದ್ರರೇಖೆ ಕತ್ತರಿಸಿದರೆ ಈ ಕ್ಷಯರೋಗ ಯೋಗ ಉಂಟಾಗುತ್ತದೆ.

ಯಾರ ಕೈಲಿ ಈ ಯೋಗವಿರುತ್ತದೋ ಅಂತಹ ವ್ಯಕ್ತಿಯು ಸಾವು ಕ್ಷಯರೋಗದ ಕಾರಣದಿಂದಲೇ ಉಂಟಾಗುತ್ತದೆ.



**17. ಅಂಧಯೋಗ**

ಒಂದು ವೇಳೆ ಅಂಗೈನಲ್ಲಿ ಬುಧ ಮತ್ತು ಚಂದ್ರ ಪರ್ವತದ ಅಭಾವವಿದ್ದರೆ ಅಂಧಯೋಗ ಉಂಟಾಗುತ್ತದೆ.

ಅಂಧಯೋಗದಲ್ಲಿ ಜನಿಸಿದ ವ್ಯಕ್ತಿ ಅಂಧನಾಗುತ್ತಾನೆ.



**18. ವ್ರಣಯೋಗ**

ಒಂದು ವೇಳೆ ಮಂಗಳರೇಖೆಯ ಮೇಲೆ ತ್ರಿಕೋನದ ಚಿಹ್ನೆ ಇದ್ದರೆ ಮತ್ತು ಅದರ ಮಧ್ಯದಲ್ಲಿ ಬಿಳಿಯ ಬಿಂದುವಿದ್ದರೆ ವ್ರಣಯೋಗ ಉಂಟಾಗುತ್ತದೆ.

ವ್ರಣಯೋಗದಲ್ಲಿ ಜನಿಸಿದ ವ್ಯಕ್ತಿಯು ಸಾವು ಗಾಯಗಳು ಕೊಳೆಯುವುದರಿಂದ ಆಗುತ್ತದೆ.



## 19. ಉನ್ಮಾದಯೋಗ

ಒಂದು ವೇಳೆ ಸೂರ್ಯ ಪರ್ವತದ ಮೇಲೆ ತ್ರಿಕೋನದ ಚಿಹ್ನೆ ಇದ್ದರೆ ಮತ್ತು ಸೂರ್ಯ ರೇಖೆ ಆ ತ್ರಿಕೋನವನ್ನು ಕತ್ತರಿಸಿದರೆ ಉನ್ಮಾದಯೋಗ ಉಂಟಾಗುತ್ತದೆ.



ಯಾರ ಕೈಲಿ ಈ ಯೋಗ ಇರುತ್ತದೋ ಆ ವ್ಯಕ್ತಿ ಅವಶ್ಯಕತೆಗಿಂತಲೂ ಹೆಚ್ಚು ಮಾತಾಡುವವನು, ಹರಟೆಕೊಚ್ಚುವವನು ಮತ್ತು ಬೊಗಳೆ ಹೊಡೆಯುವವನಾಗಿರುತ್ತಾನೆ.



## 20. ಲೋಭಯೋಗ

ಒಂದು ವೇಳೆ ಹೃದಯರೇಖೆ ನೇರವಾಗಿ ಸಾಗಿ ಅಂಗೈನ ದಡ ತಲುಪಿದರೆ ಲೋಭಯೋಗ ಉಂಟಾಗುತ್ತದೆ.

ಯಾರ ಕೈಲಿ ಲೋಭಯೋಗ ಇರುತ್ತದೋ ಅಂತಹ ವ್ಯಕ್ತಿ ಅವಶ್ಯಕತೆಗಿಂತ ಹೆಚ್ಚು ಲೋಭಿಯೂ ಮತ್ತು ಜಿಪುಣನೂ ಆಗಿರುತ್ತಾನೆ.



## 21. ಚಾಮರಯೋಗ

ಒಂದು ವೇಳೆ ಕೈನ ಬೆರಳುಗಳು ಉದ್ದವಾಗಿದ್ದು ಮತ್ತು ಅದರ ಮೇಲೆ ಉಗುರು ರಕ್ತದ ಕಾಂತಿ ತೆಗೆದುಕೊಂಡಿದ್ದು ಜೊತೆಯಲ್ಲೇ ಸೂರ್ಯರೇಖೆ ಉದ್ದವಾಗಿ ಪುಷ್ಟವಾಗಿದ್ದು ಮತ್ತು ಅದರ ಉಗಮ ಮಣಿಕಟ್ಟಿನಿಂದ ಆಗಿದ್ದರೆ ಜೊತೆಯಲ್ಲೇ

ಭಾಗ್ಯರೇಖೆಯು ಉಗಮವೂ ಸಹ ಮಣಿಕಟ್ಟಿನಿಂದ ಆಗಿದ್ದರೆ ಮತ್ತು ಎರಡು ರೇಖೆಗಳೂ ಉಗಮ ಸ್ಥಾನದಲ್ಲಿಯೇ ಸೇರಿಕೊಂಡಿದ್ದರೆ ಚಾಮರ ಯೋಗ ಉಂಟಾಗುವುದು.

ಈ ಯೋಗದಲ್ಲಿ ಜನಿಸಿರುವ ವ್ಯಕ್ತಿ ಉಚ್ಚನು, ಪ್ರತಿಷ್ಠಿತನು ಮತ್ತು ವಿದ್ವಾಂಸರಿಂದ ಪೂಜಿಸಲ್ಪಡುವವನು ಮತ್ತು ಸ್ವತಃ ವಿದ್ವಾಂಸನೂ ಆಗಿರುತ್ತಾನೆ. ಆ ವ್ಯಕ್ತಿ ತನ್ನ ವಿದ್ವತ್ತಿನಿಂದಾಗಿಯೇ ದೇಶ ವಿದೇಶಗಳಲ್ಲಿ ಕೀರ್ತಿ ಗಳಿಸುತ್ತಾನೆ.

## 22. ಭಿಕ್ಷುಕ ಯೋಗ

ಒಂದು ವೇಳೆ ಭಾಗ್ಯರೇಖೆಯು ಮೇಲೆ ಕ್ರಾಸ್ ಚಿಹ್ನೆ ಇದ್ದರೆ ಭಿಕ್ಷುಕ ಯೋಗ ಉಂಟಾಗುತ್ತದೆ.



ಈ ಯೋಗದಲ್ಲಿ ಜನಿಸಿರುವ ವ್ಯಕ್ತಿ ಅದೃಷ್ಟಹೀನನು, ಪತ್ನಿ, ಪುತ್ರ ಮತ್ತು ಪರಿವಾರದ ಸುಖದಿಂದ ವಂಚಿತನು, ವಿಪರೀತ ಪರಿಸ್ಥಿತಿಯಲ್ಲಿರುವವನು, ತನ್ನ ಹೊಟ್ಟೆಪಾಡಿಗಾಗಿ ಪ್ರತಿ ಕ್ಷಣ ಚಿಂತಿತನಾಗಿರುವ ಬಡವನಾಗಿರುತ್ತಾನೆ.

## 23. ಬ್ರಹ್ಮಾಂಡ ಯೋಗ

ಆದರ್ಶ ಕೈ ಇದ್ದರೆ ಮತ್ತು ಕೈನಲ್ಲಿ ಚಂದ್ರ ಪರ್ವತ ಮತ್ತು ಶುಕ್ರ ಪರ್ವತದ ಎರಡು ಉದ್ದರೇಖೆಗಳಿಂದ ಪರಸ್ಪರ ಸಂಬಂಧವಾಗಿದ್ದರೆ ಬ್ರಹ್ಮಾಂಡ ಯೋಗ ಉಂಟಾಗುತ್ತದೆ.



ಬ್ರಹ್ಮಾಂಡ ಯೋಗ ಇರುವ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಹೆಚ್ಚು ಸಂಪನ್ನನಾಗಿರುತ್ತಾನೆ ಹಾಗೂ ರಾಜನಂತೆ ಜೀವನ ನಡೆಸುತ್ತಾನೆ.

## 24. ಸರಸ್ವತಿ ಯೋಗ



ಒಂದು ವೇಳೆ ಯಾವುದಾದರೂ ಒಂದು ರೇಖೆ ಬೃಹಸ್ಪತಿ ಪರ್ವತದಿಂದ ಪ್ರಾರಂಭವಾಗಿ ಚಂದ್ರ ಪರ್ವತದವರೆಗೆ ತಲುಪಿದರೆ ಮತ್ತು ಒಂದು ರೇಖೆ ಚಂದ್ರ ಪರ್ವತದಿಂದ ಆರಂಭವಾಗಿ ಗುರುಪರ್ವತದವರೆಗೆ ತಲುಪಿದರೆ ಮತ್ತು ಜೊತೆಯಲ್ಲಿ ಈ ಎರಡೂ ಪೂರ್ಣ ವಿಕಸಿತವಾಗಿದ್ದರೆ ಸರಸ್ವತಿ ಯೋಗ ಉಂಟಾಗುತ್ತದೆ.

ಯಾರ ಕೈಲಿ ಸರಸ್ವತಿ ಯೋಗ ಇರುತ್ತದೋ ಅಂತಹ ವ್ಯಕ್ತಿ ಬಹಳ ಪ್ರಸಿದ್ಧನಾಗುತ್ತಾನೆ ಹಾಗೂ ಅವನ ಮೇಲೆ ಸರಸ್ವತಿಯ ವಿಶೇಷ ಕೃಪೆ ಇರುತ್ತದೆಂದು ನಂಬಲಾಗಿದೆ. ಕಾವ್ಯ, ಸಂಗೀತ ಮತ್ತು ನೃತ್ಯ ಮುಂತಾದ ಕ್ಷೇತ್ರದಲ್ಲಿ ಇಂತಹ ವ್ಯಕ್ತಿ ಪಾರಂಗತನಾಗುತ್ತಾನೆ. ತನ್ನ ಕಲೆಯ ಮಾಧ್ಯಮದಿಂದ ಇಂತಹ ವ್ಯಕ್ತಿ ದೇಶ ವಿದೇಶಗಳಲ್ಲಿ ಪ್ರಖ್ಯಾತನಾಗುತ್ತಾನೆ.

## 25. ದಿವ್ಯಯೋಗ

ಯಾರ ಬಲಗೈನಲ್ಲಿ ಗುರುರೇಖೆ ಶುಕ್ರ ಪರ್ವತದ ಮೇಲೆ ತಲುಪಿದರೆ ಮತ್ತು ಶುಕ್ರ ಪರ್ವತದಿಂದ ಒಂದು ರೇಖೆ ಗುರು ಪರ್ವತದ ಮೇಲೆ ತಲುಪಿದರೆ ಆದರೆ ಸೂರ್ಯ ರೇಖೆ ಮತ್ತು ಬುಧ ರೇಖೆ ತಮ್ಮ ತಮ್ಮಲ್ಲಿ ಶಕ್ತಿಯುತವಾಗಿದ್ದರೆ ದಿವ್ಯಯೋಗ ಉಂಟಾಗುತ್ತದೆ.



ದಿವ್ಯಯೋಗದಲ್ಲಿ ಜನಿಸಿರುವವ್ಯಕ್ತಿ ಪೂರ್ಣ ಆನಂದವನ್ನು ಅನುಭವಿಸುತ್ತಾನೆ. ಇಂತಹ ವ್ಯಕ್ತಿ ತನ್ನ ಪರಿಶ್ರಮದಿಂದ ಹಣವನ್ನು ಒಟ್ಟುಗೂಡಿಸಿದರೂ ಸಹ ಸಮಾಜದಲ್ಲಿ ಅವನಿಗೆ ವಿಶೇಷ ಮರ್ಯಾದೆ ಇರುತ್ತದೆ. ಇಂತಹ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಪೂರ್ಣ ಸಂಪನ್ನನೂ ಮತ್ತು ಸುಖಿಯೂ ಆಗಿರುತ್ತಾನೆ.

## 26. ಗೌರಿಯೋಗ



ಒಂದು ವೇಳೆ ಅಂಗೈನಲ್ಲಿ ಏಳು ಗ್ರಹಗಳ ಪರ್ವತಗಳಲ್ಲಿ ಎರಡು ಗ್ರಹಪರ್ವತಗಳು ಶಕ್ತಿಯುತವಾಗಿ ಮತ್ತು ಪುಷ್ಟವಾಗಿದ್ದರೆ ಹಾಗೂ ಅವುಗಳಿಗೆ ಸಂಬಂಧಪಟ್ಟ ರೇಖೆಗಳು ಸಹ ಸ್ಪಷ್ಟವಾಗಿದ್ದರೆ ಅಂತಹ ಕೈನಲ್ಲಿ ಗೌರೀಯೋಗ ಉಂಟಾಗುತ್ತದೆ.

ಗೌರೀ ಯೋಗವಿರುವ ವ್ಯಕ್ತಿ ಭೂಮಿಯ ಒಡೆಯನಾಗಿರುತ್ತಾನೆ. ವ್ಯವಸಾಯದ ಕಾರ್ಯಗಳಲ್ಲಿ ಈತನಿಗೆ ವಿಶೇಷ ಆಸಕ್ತಿ ಇರುತ್ತದೆ. ಕುಟುಂಬದ ಎಲ್ಲರೊಡನೆ ಇವನು ಹೆಚ್ಚು ಸ್ನೇಹ ಪ್ರೀತಿ ಇಟ್ಟುಕೊಂಡಿರುತ್ತಾನೆ. ಇಂತಹ ವ್ಯಕ್ತಿ ದೇವರನ್ನು ಭಕ್ತಿಯಿಂದ ಪೂಜಿಸುವನಾಗಿರುತ್ತಾನೆ. ಈತನ ಮಕ್ಕಳು ಸಹ ಯೋಗ್ಯರು, ಗುಣವಂತರು ಆಗಿರುತ್ತಾರೆ.

## 27. ಮಹೇಂದ್ರಯೋಗ



ಎರಡೂ ಕೈಗಳಲ್ಲಿ ಭಾಗ್ಯರೇಖೆ ಮತ್ತು ಸೂರ್ಯರೇಖೆಯ ಆರಂಭ ಮಣಿಕಟ್ಟಿನಿಂದ ಆಗಿರುವಂತೆ ಕಂಡರೆ ಮತ್ತು ಚಂದ್ರ ಪರ್ವತ ಪೂರ್ಣ ವಿಕಸಿತಗೊಂಡಿದ್ದರೆ ಮಹೇಂದ್ರ ಯೋಗ ಉಂಟಾಗುತ್ತದೆ.

ಮಹೇಂದ್ರಯೋಗವಿರುವ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಸಂಪನ್ನನಾಗಿರುತ್ತಾನೆ. ರಾಜನಂತೆ ವೈಭವ ಜೀವನ ನಡೆಸುತ್ತಾನೆ. ತನ್ನ ಜೀವಿತ ಕಾಲದಲ್ಲಿ ಅವನ ಸಮಸ್ತ ಆಸೆಗಳು ಈಡೇರುತ್ತವೆ.

## 28. ಗಜಪತಿ ಯೋಗ

ಒಂದು ವೇಳೆ ಕೈನಲ್ಲಿ ಏಳು ಗ್ರಹಗಳ ಪರ್ವತಗಳಲ್ಲಿ ಮೂರು ಪರ್ವತಗಳು ಅತ್ಯಂತ ಅದುಮಲ್ಪಟ್ಟಿದ್ದರೆ, ನಿಶ್ಶಕ್ತವಾಗಿದ್ದರೆ ಅಥವಾ



ಅದೃಶ್ಯವಾಗಿದ್ದರೆ ಮತ್ತು ಇದಕ್ಕೆ ಸಂಬಂಧಪಟ್ಟ ರೇಖೆಗಳೂ ಸಹ ಅದೃಶ್ಯವಾಗಿದ್ದರೆ ಅಥವಾ ಛಿದ್ರ ಛಿದ್ರವಾಗಿದ್ದರೆ ಗಜಪತಿ ಯೋಗ ಉಂಟಾಗುತ್ತದೆ.

ಗಜಪತಿಯೋಗ ಇರುವ ವ್ಯಕ್ತಿ ಪರಿಶ್ರಮಿಯು ಮತ್ತು ಯಾವಾಗಲೂ ಉನ್ನತಿಯ ಕಡೆಗೆ ಅಗ್ರಸರನಾಗುವವಂಥವನಾಗುತ್ತಾನೆ. ಜೀವನದಲ್ಲಿ ಈತ ಏನಾದರೂ ಸಾಧಿಸಿ ತೋರಿಸಬೇಕೆಂದು ಬಯಸುತ್ತಾನೆ. ಜೀವನದ 32ನೇ ವರ್ಷದಿಂದ ಅವನ ಭಾಗ್ಯೋದಯವಾಗುತ್ತದೆ ಮತ್ತು ಅದರ ನಂತರ ಜೀವನ ಪರ್ಯಂತ ಎಲ್ಲಾ ರೀತಿಯಿಂದ ಪೂರ್ಣ ಸುಖವನ್ನು ಅನುಭವಿಸುತ್ತಾನೆ.

## 29. ಕರ್ಮಯೋಗ

ಒಂದು ವೇಳೆ ಅಂಗೈನಲ್ಲಿ ಸೂರ್ಯರೇಖೆ ಸ್ಪಷ್ಟವಾಗಿ ಚಂದ್ರ ಪರ್ವತದಿಂದ ಸಾಗುತ್ತಾ ಜೀವನರೇಖೆಯ ಮಧ್ಯೆ ಸಂಧಿಸಿದರೆ ಹಾಗೂ ಭಾಗ್ಯರೇಖೆ ಶಕ್ತಿಯುತವಾಗಿದ್ದರೆ ಕೂರ್ಮಯೋಗ ಉಂಟಾಗುತ್ತದೆ.



ಕೂರ್ಮಯೋಗದಲ್ಲಿ ಜನಿಸಿರುವ ವ್ಯಕ್ತಿ ತನ್ನ ಕಾರ್ಯಗಳಿಂದ ಪ್ರಖ್ಯಾತನೂ ಮತ್ತು ಕೀರ್ತಿವಂತನೂ ಆಗುತ್ತಾನೆ. ಇಂತಹ ವ್ಯಕ್ತಿ ವಿಪತ್ತಿನ ಸಮಯದಲ್ಲಿ ಧೈರ್ಯವನ್ನು ತಾಳುವವನು, ಭಾಷಣ ಕಲೆಯಲ್ಲಿ ನಿಪುಣನು, ಬೇರೆಯವರನ್ನು ಪ್ರಭಾವಿತಗೊಳಿಸುವವನೂ ದೊರೆಯಂತೆ ಜೀವನ ಮಾಡುವವನು ಆಗುತ್ತಾನೆ.

## 30. ಭೂಮಿಯೋಗ

ಒಂದು ವೇಳೆ ಮಂಗಳ ಮತ್ತು ಶುಕ್ರ ಪರ್ವತಗಳ ಮಧ್ಯೆ ಪರಸ್ಪರ

ರೇಖಾ ಸಂಬಂಧವಾದರೆ ಮತ್ತು ಶುಕ್ರ ಪರ್ವತದ ಮೇಲೆ ಭಾಗ್ಯರೇಖೆಯು ಯಾವುದಾದರೂ ಸಹಾಯಕ ರೇಖೆ ಬಂದು ಸೇರಿದರೆ ಭೂಮಿಯೋಗ ಉಂಟಾಗುತ್ತದೆ.



ಯಾರ ಕೈನಲ್ಲಿ ಈ ಯೋಗ ಇರುತ್ತದೋ ಆ ವ್ಯಕ್ತಿ ಭೂಮಿ ಸಂಬಂಧದ ಕಾರ್ಯಗಳಿಂದ ವಿಶೇಷ ಲಾಭವನ್ನು ಪಡೆದುಕೊಳ್ಳುತ್ತಾನೆ ಮತ್ತು ತನ್ನೊಳಗೇ ಭೂಮಿಪತಿ ಆಗುತ್ತಾನೆ.

## 31. ವಿಷಯೋಗ

ಒಂದು ವೇಳೆ ಕೈನಲ್ಲಿ ಬುಧರೇಖೆಯು ಕೆಳಗೆ ಅನೇಕ ಕಪ್ಪು ಬಿಂದುಗಳಿದ್ದರೆ ವಿಷಯೋಗ ಉಂಟಾಗುತ್ತದೆ.



ಯಾವ ವ್ಯಕ್ತಿಯ ಕೈಯಲ್ಲಿ ಈ ಯೋಗವಿರುತ್ತದೋ ಅವನಿಗೆ ಮೋಸದಿಂದ ಅಥವಾ ವಿಶ್ವಾಸಘಾತದಿಂದ ವಿಷ ಕೊಡಲಾಗುತ್ತದೆ. ಇದರಿಂದ ಅವನ ಮೃತ್ಯುವಾಗುತ್ತದೆ.

## 32. ಹರ್ಷಯೋಗ

ಒಂದು ವೇಳೆ ಅಂಗೈನ ಮಧ್ಯದಲ್ಲಿ ಚಂದ್ರ ಪರ್ವತ ಮತ್ತು ಜೀವನ ರೇಖೆಯು ಮಧ್ಯದಲ್ಲಿ ಎಳ್ಳಿನ ಚಿಹ್ನೆ ಇದ್ದರೆ ಹರ್ಷಯೋಗ ಉಂಟಾಗುತ್ತದೆ.



ಈ ಯೋಗವುಳ್ಳ ವ್ಯಕ್ತಿ ಭಾಗ್ಯವಂತನೂ, ಗುಣಿಯೂ, ಚತುರನೂ, ದೃಢನೂ ಮತ್ತು ಪ್ರಸಿದ್ಧನೂ ಆಗುತ್ತಾನೆ.



**33. ಕೇದಾರ ಯೋಗ**

ಒಂದು ವೇಳೆ ಸೂರ್ಯರೇಖೆ ಶನಿ ಪರ್ವತದ ಕಡೆಗೆ ಬಾಗಿದ್ದರೆ ಮತ್ತು ಆರೋಗ್ಯ ರೇಖೆಯೊಂದಿಗೆ ಸಂಬಂಧ ಸ್ಥಾಪಿಸಿದರೆ ಕೈನಲ್ಲಿ ಕೇದಾರ ಯೋಗ ಉಂಟಾಗುತ್ತದೆ.

ಯಾರ ಕೈನಲ್ಲಿ ಈ ಯೋಗ ಇರುತ್ತದೋ ಆ ವ್ಯಕ್ತಿ ಸೋಮಾರಿಯೂ ಬಂಧುಗಳಿಗೆ ಸಹಾಯ ಮಾಡುವವನೂ ಕಾಮಿಯೂ ಮತ್ತು ಕೃಷಿಕಾರ್ಯದಲ್ಲಿ ನಿಪುಣನೂ ಆಗುತ್ತಾನೆ.



**34. ಶಾರದಾಯೋಗ**

ಒಂದು ವೇಳೆ ಬುಧ ಪರ್ವತದ ಕೆಳಗೆ ಅಥವಾ ಅದರ ಎಡಗಡೆ ಕಪ್ಪು ಎಳ್ಳಿನ ಚಿಹ್ನೆ ಇದ್ದರೆ ಶಾರದಾಯೋಗ ಉಂಟಾಗುತ್ತದೆ.

ಯಾರ ಕೈನಲ್ಲಿ ಈ ಯೋಗ ಇರುವುದೋ ಆವ್ಯಕ್ತಿ ಸ್ತ್ರೀ, ಪುರುಷ, ಬಂಧು ಮುಂತಾದವರಿಂದ ಸಂಪನ್ನನೂ ಉನ್ನತ ಶೀಲನೂ ಆಗುತ್ತಾನೆ. ದೇವತೆಗಳನ್ನು ಪೂಜಿಸುವವನೂ ಮತ್ತು ವಿದ್ವಾಂಸನೂ, ಚತುರನು ಮತ್ತು ಧಾರ್ಮಿಕ ಪುರುಷನಾಗಿರುತ್ತಾನೆ.



**35. ಛತ್ರಯೋಗ**

ಒಂದು ವೇಳೆ ಶುಕ್ರರೇಖೆಯು ಹತ್ತಿರದಲ್ಲಿ ಅಥವಾ ಅದರ ಕೆಳಗೆ ಕೆಂಪು ಎಳ್ಳು ಅಥವಾ ಕಪ್ಪು ಎಳ್ಳಿನ ಚಿಹ್ನೆ ಇದ್ದರೆ ಛತ್ರಯೋಗ ಉಂಟಾಗುತ್ತದೆ.

ಛತ್ರ ಯೋಗ ಇರುವ ವ್ಯಕ್ತಿಗಳು ಸಾಹಸಿಗಳು, ರಸಿಕರು, ಗೃಹಸ್ಥ ಸುಖವನ್ನು

ಭೋಗಿಸುವವರು ಮತ್ತು ಆನಂದಪೂರ್ಣ ಜೀವನ ನಡೆಸುವವರಾಗಿರುತ್ತಾರೆ.

**36. ಚಂಡಿಕಾಯೋಗ**

ಒಂದು ವೇಳೆ ಅಂಗೈ ಅಗಲಕ್ಕಿಂತ ಸ್ವಲ್ಪ ಉದ್ದವಾಗಿದ್ದರೆ ಮತ್ತು ಕೈನ ಬೆರಳುಗಳು ಗಂಟುಗಳಿಂದ ಕೂಡಿಲ್ಲದೆ ಹೋದರೆ ಹಾಗೂ ಕೈನಲ್ಲಿ ಜೀವನ ರೇಖೆಯ ಪ್ರಾರಂಭದಿಂದ ಒಂದು ರೇಖೆ ಹೊರಟು ಸೂರ್ಯ ಪರ್ವತ ಅಥವಾ ಬುಧ ಪರ್ವತದವರೆಗೆ ಹೋದರೆ ಚಂಡಿಕಾಯೋಗ ಉಂಟಾಗುತ್ತದೆ.



ಯಾವ ವ್ಯಕ್ತಿಯು ಕೈನಲ್ಲಿ ಚಂಡಿಕಾಯೋಗವಿರುತ್ತದೋ ಆ ವ್ಯಕ್ತಿ ಚರಿತ್ರವಾನನು, ಧನಪತಿಯು, ಇತರರಿಗೆ ಒಳ್ಳೆಯದನ್ನು ಮಾಡುವವನಾಗಿಯೂ, ನಿರಂತರ ಉನ್ನತಿಯ ಕಡೆಗೆ ಅಗ್ರಸರನಾಗುವವನು ಮತ್ತು ಮಂತ್ರಿಯಂತೆ ಜೀವನ ಕಳೆಯುವವನಾಗಿರುತ್ತಾನೆ.

**37. ವಿಷ್ಣುಯೋಗ**

ಒಂದು ವೇಳೆ ಅಂಗೈನಲ್ಲಿ ಎಲ್ಲಿಯಾದರೂ ಕಮಲದಂತಹ ಚಿಹ್ನೆ ಇದ್ದರೆ ವಿಷ್ಣುಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಸಮಸ್ತ ಐಶ್ವರ್ಯದ ಒಡೆಯನು, ಆರ್ಥಿಕ ದೃಷ್ಟಿಯಲ್ಲಿ ಸಂಪನ್ನನು, ಮಹಾ ಭಾಗ್ಯಶಾಲಿಯೂ, ಇತರರ ಮೇಲೆ ಪ್ರಭಾವ ಬೀರುವವನೂ ಮತ್ತು ಎಲ್ಲಾ ರೀತಿಯ ಸುಖಜೀವನವನ್ನು ಸಾಗಿಸುವವನಾಗಿರುತ್ತಾನೆ.

**38. ಬ್ರಹ್ಮಯೋಗ**

ಯಾರ ಕೈನಲ್ಲಿ ಮಣಿಕಟ್ಟಿನ ಹತ್ತಿರ ಶುಕ್ರ ಪರ್ವತದ ಮೇಲೆ ಆನೆಯ ಚಿಹ್ನೆ ಇದ್ದರೆ ಆವನ ಕೈಲಿ ಬ್ರಹ್ಮಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ತೇಜಸ್ವಿಯು ಮತ್ತು ಪ್ರಖರ ಬುದ್ಧಿಯುಳ್ಳವನೂ ಆಗಿರುತ್ತಾನೆ. ಇಂತಹ ವ್ಯಕ್ತಿ ಧೀರನೂ, ಗಂಭೀರನೂ, ಸಮಾಜ ಸುಧಾರಕನೂ ಮತ್ತು ಆತ್ಮವಿಶ್ವಾಸಿಯೂ ಆಗಿರುತ್ತಾನೆ.



**39. ಗರ್ಭಪಾತ ಯೋಗ**

ಯಾರ ಕೈಲಿ ಶುಕ್ರ ಪರ್ವತದ ಮೇಲೆ ರೇಖೆಗಳಿಂದ ಪರ್ವತದ ಚಿಹ್ನೆ ಮೂಡಿರುತ್ತದೋ ಅಂತವರಿಗೆ ಗರ್ಭಪಾತ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ಸ್ತ್ರೀ ಕೆಲವು ವಿಶೇಷ ಕಾರಣಗಳಿಂದ ಗರ್ಭಪಾತ ಮಾಡಿಸಿಕೊಳ್ಳುತ್ತಾಳೆ.



**40. ಶಕ್ತಿಯೋಗ**

ಕೈನಲ್ಲಿ ಎಲ್ಲಿಯಾದರೂ ಧನುಸ್ಸಿನ ಚಿಹ್ನೆ ಇದ್ದರೆ ಅಂತವನ ಕೈಲಿ ಶಕ್ತಿಯೋಗ ಉಂಟಾಗುತ್ತದೆ.

ಶಕ್ತಿಯೋಗ ಇರುವ ವ್ಯಕ್ತಿ ಸ್ವಾರ್ಥಿಯೂ, ಲೋಭಿಯೂ, ಸೋಮಾರಿಯೂ ಮತ್ತು ಇತರರಿಂದ ಅಪಮಾನಿತನಾಗುವವನೂ ಆಗಿರುತ್ತಾನೆ.

ಇಂತವನು ತನ್ನ ಬಳಿ ಇರುವ ಹಣವನ್ನು ಮೂರ್ಖತನದಿಂದ ವೆಚ್ಚ ಮಾಡುತ್ತಾನೆ. ಸಮಾಜದಲ್ಲಿ ಇಂತವನಿಗೆ ಗೌರವವಿರುವುದಿಲ್ಲ.

### 41. ಋಷಿಯೋಗ



ಕೈನಲ್ಲಿ ಎಲ್ಲಿಯಾದರೂ ಕುಂಡಲದ ಚಿಹ್ನೆ ಇದ್ದರೆ ಅಂತವನಿಗೆ ಋಷಿಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಪರೋಪಕಾರಿಯೂ, ಈಶ್ವರನ ಮೇಲೆ ನಂಬಿಕೆ ಇಟ್ಟಿರುವವನೂ, ಸತ್ಯವನ್ನೇ ನುಡಿಯುವವನೂ ಹಾಗೂ ಧಾರ್ಮಿಕನೂ ಆಗಿರುತ್ತಾನೆ.

### 42. ಗರುಡಯೋಗ



ಒಂದು ವೇಳೆ ಕೈನಲ್ಲಿ ಎಲ್ಲಿಯಾದರೂ ಹವನ ಕುಂಡದ ಚಿಹ್ನೆ ಇದ್ದರೆ ಗರುಡಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಸುಂದರನು, ಸುಶೀಲನು, ಸುಶಿಕ್ಷಿತನು ಮತ್ತು ಆಕರ್ಷಕ ವ್ಯಕ್ತಿತ್ವದವನೂ ಆಗಿರುತ್ತಾನೆ. ಆದರೆ ಇಂತವನ ಮೃತ್ಯು ವಿಷಸೇವನೆಯಿಂದ ಆಗುತ್ತದೆ.

### 43. ನಳಯೋಗ



ಯಾರ ಕೈನಲ್ಲಿ ರಥದ ಚಿಹ್ನೆ ಇರುವುದೋ ಅಂತಹ ವ್ಯಕ್ತಿಗೆ ನಳಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ದೂರದರ್ಶಿಯೂ ಮತ್ತು ದೃಢ ನಿಶ್ಚಯಿಯೂ ಆಗಿರುತ್ತಾನೆ. ಇವನು ಹಠ ಸ್ವಭಾವದವನಾಗಿರುತ್ತಾನೆ. ಜೀವನದಲ್ಲಿ ಹಣಕ್ಕೆ ಕೊರತೆ ಇರುವುದಿಲ್ಲ. ಆದರೆ 34ನೇ

ವರ್ಷದಲ್ಲಿ ಅಂಗಭಂಗವಾಗುತ್ತದೆ.



**44. ಪದ್ಮಯೋಗ**

ಯಾರ ಕೈನಲ್ಲಿ ಎಲ್ಲಿಯಾದರೂ ಪದ್ಮದ ಚಿಹ್ನೆ ಇದ್ದರೆ ಅಂತಹ ವ್ಯಕ್ತಿಯು ಜೀವನದಲ್ಲಿ ಪದ್ಮಯೋಗ ಉಂಟಾಗುತ್ತದೆ.

ಪದ್ಮಯೋಗದಿಂದ ಕೂಡಿರುವ ವ್ಯಕ್ತಿ ಸುಖಿಯೂ, ಧನವಂತನೂ, ಸಫಲತೆಯನ್ನು ಪಡೆಯುವವನೂ ಮತ್ತು ಗೌರವವನ್ನು ಗಳಿಸುವವನೂ ಆಗಿರುತ್ತಾನೆ.



**45. ಚಂದ್ರಯೋಗ**

ಯಾರ ಕೈನಲ್ಲಿ ಎಲ್ಲಿಯಾದರೂ ಸಹ ಚಂದ್ರನ ಚಿಹ್ನೆ ಕಾಣಿಸಿದರೆ ಅಂತಹ ವ್ಯಕ್ತಿಗೆ ಚಂದ್ರಯೋಗ ಉಂಟಾಗುತ್ತದೆ.

ಚಂದ್ರ ಯೋಗ ಇರುವ ವ್ಯಕ್ತಿ ಮುಖಂಡನಾಗುತ್ತಾನೆ. ಜೀವನದಲ್ಲಿ ಇವನು ಎಲ್ಲಾ ರೀತಿಯ ಸುಖವನ್ನು ಭೋಗಿಸುತ್ತಾನೆ. ಆರ್ಥಿಕ ದೃಷ್ಟಿಯಿಂದ ಯಾವುದೇ ರೀತಿಯ ಕೊರತೆ ಇವನಿಗೆ ಇರುವುದಿಲ್ಲ. ಈ ವ್ಯಕ್ತಿ ಸಾಹಸಿಯೂ, ಚತುರನೂ ಮತ್ತು ಪ್ರತಿಯೊಂದು ಕಾರ್ಯದಲ್ಲಿ ದಕ್ಷನೂ ಆಗಿರುತ್ತಾನೆ.



**46. ಸಾರ್ವಭೌಮ ಯೋಗ**

ಕೈನಲ್ಲಿ ಎಲ್ಲಿಯಾದರೂ ಬಾಣದ ಚಿಹ್ನೆ ಇದ್ದರೆ ಅಂತವನಿಗೆ ಸಾರ್ವಭೌಮ ಯೋಗ ಉಂಟಾಗುತ್ತದೆ.

ಈ ಯೋಗವಿರುವ ವ್ಯಕ್ತಿ ಬಾಲ್ಯದಲ್ಲಿ ಬಡವನಾಗಿದ್ದರೂ ಸಹ ಯೌವ್ವನಾವಸ್ಥೆಯಲ್ಲಿ ಸಂಪೂರ್ಣ ಸುಖಿಯೂ ಮತ್ತು

ಸಂಪನ್ನನೂ ಆಗಿರುತ್ತಾನೆ. ಈತನ ಎಲ್ಲಾ ಭೌತಿಕ ಇಚ್ಛೆಗಳು ನೆರವೇರುತ್ತವೆ.

**47. ಭಾಗ್ಯವಂತಯೋಗ**



ಯಾರ ಕೈಲಿ ಎಲ್ಲಿಯಾದರೂ ಛತ್ರಿಯ ಚಿಹ್ನೆ ಕಾಣಿಸಿದರೆ ಅಲ್ಲಿ ಭಾಗ್ಯವಂತ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿಪ್ರಸಿದ್ಧಿ ಯನ್ನು ಪಡೆಯುವವನೂ, ಚತುರನೂ, ಬಂಧುಗಳಿಗೆ ಸಹಾಯ ಮಾಡುವವನೂ ಆಗಿರುತ್ತಾನೆ. ಇವನು ಸಂಪೂರ್ಣ ಭಾಗ್ಯಶಾಲಿಯಾಗಿರುತ್ತಾನೆ.

**48. ಕಮಲಯೋಗ**



ಕೈನ ಹತ್ತು ಬೆರಳುಗಳ ಮೇಲೂ ಚಕ್ರದ ಚಿಹ್ನೆ ಇದ್ದರೆ ಕಮಲಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಖ್ಯಾತಿವಂತನೂ, ಸಮಾಜದಲ್ಲಿ ಗೌರವ ಪಡೆಯುವವನೂ, ಸುಶಿಕ್ಷಿತನು, ಮಾತನಾಡುವುದರಲ್ಲಿ ಚತುರನು, ದೀರ್ಘಾಯುವೂ, ಆರೋಗ್ಯವಂತನು ಮತ್ತು ಯೋಗ್ಯನೂ ಆಗಿರುತ್ತಾನೆ.

**49. ವಾಯುಯೋಗ**



ಬಲಗೈನ ನಾಲ್ಕು ಬೆರಳುಗಳ ಮೇಲೆ ಚಕ್ರದ ಚಿಹ್ನೆ ಇದ್ದರೆ ವಾಯುಯೋಗ ಉಂಟಾಗುತ್ತದೆ.

ಈ ಯೋಗವಿರುವ ವ್ಯಕ್ತಿ ಧಾರ್ಮಿಕ ಕಾರ್ಯಗಳನ್ನು, ಶುಭಕಾರ್ಯಗಳನ್ನೂ ಮಾಡುವುದರಲ್ಲಿ ಆಸಕ್ತಿ ವಹಿಸಿ

ಸಮಾಜದಲ್ಲಿ ಗೌರವ ಕೀರ್ತಿ ಗಳಿಸುತ್ತಾನೆ. ಇವನು ನಿರಂತರ ಏಳ್ಗೆ ಹೊಂದುತ್ತಿರುತ್ತಾನೆ.

### 50. ಗಜಯೋಗ



ಯಾರ ಎರಡೂ ಕೈಗಳಲ್ಲಿ ಐದು ಶಂಖ ಮತ್ತು ಮೂರು ಚಕ್ರದ ಚಿಹ್ನೆ ಇರುತ್ತದೋ ಅಂತವನಿಗೆ ಗಜಯೋಗ ಉಂಟಾಗುತ್ತದೆ.

ಈ ಯೋಗವಿರುವ ವ್ಯಕ್ತಿ ಪಶುಪಾಲಕನಾಗಿರುತ್ತಾನೆ. ಪಶುಗಳ ಕ್ರಯ ವಿಕ್ರಯ ಅಥವಾ ವ್ಯವಸಾಯದ ಕಾರ್ಯಗಳಿಂದ ಸಂಪನ್ನನಾಗಿರುತ್ತಾನೆ ಹಾಗೂ ಆನಂದಪೂರ್ಣ ಜೀವನವನ್ನು ಕಳೆಯುತ್ತಾನೆ.

### 51. ಅಮಲಾಯೋಗ

ಕೈನಲ್ಲಿ ಚಂದ್ರ ಪರ್ವತ ವಿಕಸಿತವಾಗಿದ್ದರೆ ಮತ್ತು ಅದರ ಜೊತೆಯಲ್ಲೇ ಸೂರ್ಯ ಪರ್ವತ ಮತ್ತು ಶುಕ್ರ ಪರ್ವತವೂ ಸಹ ತಮ್ಮ ಪೂರ್ಣ ಉಬ್ಬುವಿಕೆಯಿಂದ ಕೂಡಿದ್ದರೆ ಹಾಗೂ ಚಂದ್ರರೇಖೆ ಬುಧ ಪರ್ವತದ ಕಡೆಗೆ ಹೋಗುತ್ತಿದ್ದರೆ ಅಂತವನ ಕೈಯಲ್ಲಿ ಅಮಲಾಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಬುದ್ಧಿವಂತನು, ಚತುರನೂ, ಖ್ಯಾತಿ ಹೊಂದುವವನೂ ಆಗಿರುತ್ತಾನೆ. ಇವನ ಆರ್ಥಿಕ ಸ್ಥಿತಿ ಮತ್ತು ಭೌತಿಕ ಸ್ಥಿತಿ ಸಫಲತೆಯಿಂದ ಕೂಡಿರುತ್ತದೆ. ಇವನು ವ್ಯಾಪಾರದ ನಿಮಿತ್ತ ಅನೇಕ ಬಾರಿ ವಿದೇಶ ಯಾತ್ರೆಯನ್ನು ಮಾಡುತ್ತಾನೆ. ಈತನು ಪತ್ನಿಯಲ್ಲದೆ ಬೇರೆ ಸ್ತ್ರೀಯರೊಂದಿಗೆ ಸಂಬಂಧವನ್ನಿರಿಸಿಕೊಂಡರೂ ಸಹ ಜೀವನದಲ್ಲಿ ಕೆಟ್ಟ ಹೆಸರು ಬರುವುದಿಲ್ಲ.



## 52. ಬುಧಯೋಗ

ಒಂದು ವೇಳೆ ಬಲಗೈಲಿ ಬುಧ ಪರ್ವತ ತನ್ನಲ್ಲಿಯೇ ವಿಕಸಿತಗೊಂಡಿದ್ದರೆ ಮತ್ತು ಚಂದ್ರ ಪರ್ವತದಿಂದ ಧನುಸ್ಸು ಆಕಾರದ ರೇಖೆ ಬುಧ ಪರ್ವತದ ಮೇಲೆ ತಲುಪಿದರೆ ಮತ್ತು ಆ ರೇಖೆ ಮಾರ್ಗದಲ್ಲಿ ಎಲ್ಲಿಯಾದರೂ ಮುರಿದುಹೋಗಿದ್ದರೆ ಅಥವಾ ಬಲಹೀನವಾಗಿದ್ದರೆ ಅಥವಾ ಸರಪಳಿಯಂತಿದ್ದರೆ ಮತ್ತು ಹೆಚ್ಚು ದಪ್ಪ ಇಲ್ಲದೇ ಹೋದರೆ ಅಂತಹ ವ್ಯಕ್ತಿಯ ಕೈಲಿ ಬುಧಯೋಗ ಉಂಟಾಗುತ್ತದೆ.



ಬುಧಯೋಗ ಇರುವ ವ್ಯಕ್ತಿ ವ್ಯಾಪಾರದಲ್ಲಿ ಪೂರ್ಣ ಸಫಲತೆಯನ್ನು ಪಡೆಯುತ್ತಾನೆ. ಇಂತಹ ವ್ಯಕ್ತಿ ಹಣ ಮತ್ತು ಕೀರ್ತಿಯನ್ನು ಅಪಾರವಾಗಿ ಪಡೆಯುತ್ತಾನೆ. ಇವನು ಆರೋಗ್ಯವಂತನೂ, ಶತ್ರುಗಳನ್ನು ನಾಶಪಡಿಸುವ ಬುದ್ಧಿವಂತನೂ, ಚತುರನೂ ಆಗಿರುತ್ತಾನೆ.

## 53. ಲಗ್ನಾಧಿಯೋಗ

ಅಂಗೈನಲ್ಲಿ ಭಾಗ್ಯರೇಖೆ ಪೂರ್ಣ ವಿಕಸಿತವಾಗಿದ್ದರೆ ಮತ್ತು ಸಂಪೂರ್ಣ ಅಂಗೈನಲ್ಲಿ ಎಲ್ಲಾ ಪರ್ವತಗಳು ತಮ್ಮಲ್ಲೇ ವಿಕಸಿತಗೊಂಡಿದ್ದರೆ ಮತ್ತು ಬುಧರೇಖೆ ಪೂರ್ಣ ಉದ್ದವಾಗಿದ್ದರೆ ಅಂತಹ ವ್ಯಕ್ತಿಯ ಕೈಲಿ ಲಗ್ನಾಧಿಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ವಿದ್ವಾಂಸನು ಮತ್ತು ವಾಕ್ಚಾತುರ್ಯ ಉಳ್ಳವನೂ ಆಗಿರುತ್ತಾನೆ. ಶಾರೀರಿಕ ರೂಪದಲ್ಲಿ ಈ ವ್ಯಕ್ತಿ ಆರೋಗ್ಯವಂತನೂ, ಶಕ್ತಿಶಾಲಿಯೂ, ಸುಂದರನೂ ಆಗಿರುತ್ತಾನೆ. ಇವನು ತನ್ನ ಕಾರ್ಯದಿಂದ ಪ್ರಸಿದ್ಧಿಪಡೆಯುತ್ತಾನೆ.

**54. ಶಕಟಯೋಗ**

ಅಂಗೈನಲ್ಲಿ ಶನಿ ಪರ್ವತ ಮತ್ತು ಚಂದ್ರ ಪರ್ವತ ಅದುಮಲ್ಪಟ್ಟಿದ್ದರೆ, ಶುಕ್ರಪರ್ವತದ ಮೇಲೆ ಅವಶ್ಯಕತೆಗಿಂತ ಹೆಚ್ಚು ಅಡ್ಡ ವಕ್ರರೇಖೆಗಳಿದ್ದರೆ ಮತ್ತು ಭಾಗ್ಯರೇಖೆ ಅತ್ಯಂತ ನಿಶ್ಯಕ್ತವಾಗಿದ್ದರೆ ಅಂತಹವನ ಕೈಲಿ ಶಕಟಯೋಗ ಉಂಟಾಗುತ್ತದೆ.



ಶಕಟ ಯೋಗದಲ್ಲಿ ಜನಿಸಿದ ವ್ಯಕ್ತಿ ಜೀವನಪೂರ್ತಿ ದುರದೃಷ್ಟಶಾಲಿಯಾಗಿರುತ್ತಾನೆ. ಸಮಾಜದಲ್ಲಿ ಈತನಿಗೆ ಯಾವುದೇ ರೀತಿಯ ಗೌರವ ದೊರೆಯುವುದಿಲ್ಲ.

**55. ದುರಧರಾಯೋಗ**

ಅಂಗೈನಲ್ಲಿ ಶುಕ್ರ ಪರ್ವತ, ಸೂರ್ಯ ಪರ್ವತ ಮತ್ತು ಶನಿ ಪರ್ವತ ಹೂತು ಹೋಗಿದ್ದರೆ ಮತ್ತು ಸೂರ್ಯ ರೇಖೆ ಮುರಿದುಹೋಗಿದ್ದರೆ ದುರಧರಾ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿಯು ಪ್ರಾರಂಭಿಕ ಜೀವನ ಅತ್ಯಂತ ಕಷ್ಟದಿಂದ ಕಳೆಯುತ್ತದೆ. ಆದರೆ ಇವನ 36 ನೇ ವಯಸ್ಸಿನಿಂದ ಭಾಗ್ಯೋದಯ ಪ್ರಾರಂಭವಾಗುತ್ತದೆ ಮತ್ತು ಈತನು ಆಶ್ಚರ್ಯಕರ ರೀತಿಯಲ್ಲಿ ಪ್ರಗತಿಯನ್ನು ಹೊಂದುತ್ತಾನೆ.



**56. ಅನಘಾಯೋಗ**

ಯಾರ ಕೈಲಿ ಶುಕ್ರ ಕ್ಷೇತ್ರ ವಿಸ್ತಾರವಾಗಿ ಪ್ರಭಾವಪೂರ್ಣವಾಗಿದ್ದರೆ ಮತ್ತು ಜೊತೆಯಲ್ಲಿಯೇ ಸೂರ್ಯರೇಖೆ ಮತ್ತು ಭಾಗ್ಯರೇಖೆಗಳು ಮುಂದಕ್ಕೆ ಸಾಗಿ ಸಂಬಂಧವನ್ನುಂಟು ಮಾಡಿದ್ದರೆ ಅಂಗೈಲಿ ಅನಘಾಯೋಗ

ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಅತ್ಯಂತ ಪ್ರಭಾವವುಳ್ಳವನಾಗಿರುತ್ತಾನೆ ಮತ್ತು ಸಮಾಜದಲ್ಲಿ ತನ್ನ ಕಾರ್ಯಗಳಿಂದ ವಿಶೇಷ ಗೌರವ ಗಳಿಸುತ್ತಾನೆ. ಇಂತಹ ವ್ಯಕ್ತಿ ದೃಢ ವಿಚಾರದವನು, ಸದ್ಗುಣಶಾಲಿಯೂ, ಬುದ್ಧಿವಂತನೂ ಆಗಿರುತ್ತಾನೆ.



*ಸೂಚನೆ:* ಈ ಯೋಗ ಶುಕ್ರ, ಸೂರ್ಯ ಮತ್ತು ಶನಿಯಿಂದ ಸೇರಿಕೊಂಡು ಉಂಟಾಗುತ್ತದೆ. ಆದ್ದರಿಂದ ಬೇರೆ ಬೇರೆ ಗ್ರಹಗಳ ಪ್ರಭಾವದಿಂದ ಅದರ ಫಲಾದೇಶದಲ್ಲೂ ಸಹ ವ್ಯತ್ಯಾಸ ಉಂಟಾಗುತ್ತದೆ. ಒಂದು ವೇಳೆ ಒಂದಕ್ಕಿಂತ ಹೆಚ್ಚು ಗ್ರಹಗಳ ಫಲಸಮ್ಮಿಲತವಾಗಿದ್ದರೆ ಅಲ್ಲಿ ಮಿಶ್ರಿತ ಫಲವೆಂದು ಅರಿತುಕೊಳ್ಳಬೇಕು.

## 57. ಸುನಫಾ ಯೋಗ

ಒಂದು ವೇಳೆ ಅಂಗೈಯಲ್ಲಿ ಸೂರ್ಯ, ಶನಿ ಮತ್ತು ಬುಧ ಪರ್ವತದ ವಿಕಸಿತವಾಗಿದ್ದರೆ ಮತ್ತು ಈ ಮೂರು ರೇಖೆಗಳೀ ಸ್ಪಷ್ಟವಾಗಿ ಮತ್ತು ಕತ್ತರಿಸುವಿಕೆಯಿಲ್ಲದೆ ಇದ್ದರೆ ಅಂತವನ ಕೈಲಿ ಸುನಫಾಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಪರಿಶ್ರಮದಿಂದ ಹಣ ಸಂಪಾದಿಸುತ್ತಾನೆ ಮತ್ತು ಸಮಾಜದಲ್ಲಿ ಗೌರವಾನ್ವಿತ ಸ್ಥಾನ ಪಡೆಯುತ್ತಾನೆ. ಇವನ ಪ್ರತಿಯೊಂದು ಕಾರ್ಯದಲ್ಲೂ ಎಚ್ಚರಿಕೆ ಮತ್ತು ಬುದ್ಧಿವಂತಿಕೆ ಇರುತ್ತದೆ. ಸದಾಸರಿಯಾದ ನಿರ್ಣಯ ತೆಗೆದುಕೊಳ್ಳುವ ಈ ವ್ಯಕ್ತಿ ಸುಖಮಯ ಜೀವನವನ್ನು ಕಳೆಯುತ್ತಾನೆ.

## 58. ಪರ್ವತ ಯೋಗ

ಅಂಗೈನಲ್ಲಿ ಭಾಗ್ಯರೇಖೆ ಮಣಿಕಟ್ಟಿನಿಂದ ಪ್ರಾರಂಭವಾಗಿ ನೇರವಾಗಿ ಶನಿಪರ್ವತದವರೆಗೆ ತಲುಪಿದರೆ ಮತ್ತು ಈ ರೇಖೆ ತೆಳುವಾಗಿ, ಆಳವಾಗಿ,



ಸ್ಪಷ್ಟವಾಗಿ ಮತ್ತು ಹರಿದು ಮುರಿದುಹೋಗದೇ ಇದ್ದರೆ ಹಾಗೂ ತನ್ನ ಉಗಮಸ್ಥಾನದಲ್ಲಿ ಮೀನಿನ ಆಕಾರವಾದರೆ ಅಂತಹವನ ಕೈಲಿ ಪರ್ವತಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ತನ್ನ ಭಾಗ್ಯವನ್ನು ತಾನೇ ಸೃಷ್ಟಿಸಿಕೊಳ್ಳುತ್ತಾನೆ. ಈತನಿಗೆ ಪ್ರತಿಯೊಂದು ಕಾರ್ಯದಲ್ಲೂ ಭಾಗ್ಯ ಜೊತೆಗೂಡಿ ಸಫಲತೆ ದೊರಕುವಂತೆ ಮಾಡುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಈತನಿಗೆ ಪೂರ್ಣ ಸಫಲತೆ ದೊರಕುತ್ತದೆ. ಬಡವರ ಬಂಧುವಾದ ಇವನು ಸುಖಮಯ ಜೀವನ ಕಳೆಯುತ್ತಾ ಎಲ್ಲರ ಪ್ರಶಂಸೆಗೆ ಪಾತ್ರನಾಗುತ್ತಾನೆ.

## 59. ಭಾಸ್ಕರಯೋಗ



ಅಂಗೈನಲ್ಲಿ ಸೂರ್ಯರೇಖೆಯ ಸಂಬಂಧ ಬುಧರೇಖೆಯೊಂದಿಗಿದ್ದರೆ ಮತ್ತು ಬುಧ ರೇಖೆಯ ಸಂಬಂಧ ಚಂದ್ರರೇಖೆಯೊಂದಿಗೆ ಇದ್ದರೆ ಮತ್ತು ಗುರುಪರ್ವತ ಹಾಗೂ ಗುರುರೇಖೆ ತಮ್ಮಲ್ಲೇ ಸ್ಪಷ್ಟವಾಗಿ ದೀರ್ಘವಾಗಿ, ಪುಷ್ಟವಾಗಿದ್ದರೆ ಭಾಸ್ಕರಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಸಂಪನ್ನನಾಗಿರುತ್ತಾನೆ. ಈತನು ಒಂದಕ್ಕಿಂತ ಹೆಚ್ಚು ಕಲೆಯನ್ನು ತಿಳಿದವನಾದ್ದರಿಂದ ಆದಾಯ ಬರುವ ದಾರಿ ಬಹಳಷ್ಟಿರುತ್ತವೆ. ಇವನು ಆರೋಗ್ಯವಂತನೂ, ಪ್ರಭಾವಶಾಲಿಯೂ ಆಗಿರುತ್ತಾನೆ. ಸಾಹಿತ್ಯ, ಕಲೆ, ಸಂಗೀತ ಮುಂತಾದವುಗಳಲ್ಲಿ ಇವನಿಗೆ ವಿಶೇಷ ಆಸಕ್ತಿ ಇರುತ್ತದೆ. ಈತನಿಗೆ ಶತ್ರುಗಳು ಸಹ ಮಿತ್ರರಾಗುತ್ತಾರೆ.

## 60. ಚತುಸ್ಸಾಗರ ಯೋಗ



ಅಂಗೈನಲ್ಲಿನ ಎಲ್ಲಾ ಪರ್ವತಗಳು ವಿಕಸಿತವಾಗಿದ್ದರೆ ಮತ್ತು ಎಲ್ಲಾ ರೇಖೆಗಳು ಪುಷ್ಟವಾಗಿ ನೇರವಾಗಿ ಸರಳವಾಗಿ ಮತ್ತು ಸ್ಪಷ್ಟವಾಗಿದ್ದರೆ ಅಂತಹ ವ್ಯಕ್ತಿಯ ಕೈಯಲ್ಲಿ ಚತುಸ್ಸಾಗರ ಯೋಗ ಉಂಟಾಗುತ್ತದೆ.

ಯಾರ ಕೈಲಿ ಈ ಯೋಗ ಇರುತ್ತದೋ ಅಂಥವರು ತಮ್ಮ ಕಾರ್ಯದಿಂದ ಪ್ರಸಿದ್ಧ ರಾಗುತ್ತಾರೆ ಮತ್ತು ತಮ್ಮ ಪ್ರಯತ್ನಗಳಿಂದ ಸಮಾಜದ ಅಥವಾ ದೇಶದ ಮುಖಂಡತ್ವ ವಹಿಸಿಕೊಳ್ಳುವುದರಲ್ಲಿ ಸಫಲರಾಗುತ್ತಾರೆ. ಇವರು ಆರ್ಥಿಕ ದೃಷ್ಟಿಯಿಂದ ಸಂಪನ್ನರು, ಒಳ್ಳೆಯ ಭಾಷಣಕಾರರು, ರಾಜಕೀಯ ಧುರೀಣರು, ಸುಖಿಗಳು, ವಿದೇಶ ಯಾತ್ರೆ ಮಾಡಿ ಕೀರ್ತಿ ಗಳಿಸುವವರೂ ಆಗಿರುತ್ತಾರೆ.

## 61. ಚಂದ್ರಮಂಗಳ ಯೋಗ

ಅಂಗೈನಲ್ಲಿ ಚಂದ್ರರೇಖೆ ಉಬ್ಬಿಕೊಂಡು ಮಂಗಳದೊಡನೆ ಸೇರಿದರೆ ಅಥವಾ ಭಾಗ್ಯರೇಖೆ ಮತ್ತು ಚಂದ್ರರೇಖೆ ನಿರ್ದೋಷವಾಗಿ ಸೇರಿದರೆ ಅಂತಹವನ ಕೈಲಿ ಚಂದ್ರ ಮಂಗಳ ಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಸಂಪನ್ನನೂ ಸುಖಿಯೂ ಆಗಿರುತ್ತಾನೆ. ಈತನಿಗೆ ಜೀವನದಲ್ಲಿ ಅನೇಕ ಸ್ತ್ರೀಯರ ಸಂಪರ್ಕವಿರುತ್ತದೆ.

## 62. ಅಖಂಡ ಸಾಮ್ರಾಜ್ಯ ಪತಿಯೋಗ

ಒಂದು ವೇಳೆ ಎರಡೂ ಕೈಗಳಲ್ಲಿ ಭಾಗ್ಯರೇಖೆ ಮಣಿಕಟ್ಟಿನ ಮೇಲೆ ಮತ್ಸ್ಯಾಕಾರ ವಾಗಿ ಶನಿ ಪರ್ವತದೊಂದಿಗೆ ಸೇರಿಕೊಂಡರೆ ಮತ್ತು ಸೂರ್ಯರೇಖೆ ಉದ್ದವಾಗಿ, ತೆಳುವಾಗಿ ಸ್ಪಷ್ಟವಾಗಿದ್ದರೆ ಹಾಗೂ ಚಂದ್ರಪರ್ವತದಿಂದ ತೆಳು ರೇಖೆ ಹೊರಟು ಬುಧಪರ್ವತವನ್ನು ಸ್ಪರ್ಶಿಸಿದರೆ ಮತ್ತು ಸೂರ್ಯ, ಶನಿಹಾಗೂ ಶುಕ್ರ



ಪರ್ವತ ಪೂರ್ಣ ವಿಕಸಿತವಾಗಿದ್ದರೆ ಅಂತವರ ಕೈಲಿ ಅಖಂಡ ಸಾಮ್ರಾಜ್ಯ ಪತಿಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ತನ್ನ ಜೀವನದಲ್ಲಿ ಎಲ್ಲಾ ರೀತಿಯ ಐಶ್ವರ್ಯ ಮತ್ತು ಭೋಗಗಳನ್ನು ಅನುಭವಿಸುತ್ತಾನೆ. ಇವನು ತನ್ನ ಕಾರ್ಯದಿಂದ ವಿಶ್ವವಿಖ್ಯಾತನಾಗುತ್ತಾನೆ. ಇಂತಹ ವ್ಯಕ್ತಿಪರಿಶ್ರಮಿಯೂ, ಸಾಹಸಿಯೂ, ಸಮಾಜ ಸುಧಾರಕನೂ, ದೇಶದ ನಾಯಕನು, ವಿಶೇಷ ಕ್ಷೇತ್ರದಲ್ಲಿ ವಿಶೇಷಜ್ಞನೂ ಆಗಿರುತ್ತಾನೆ.

## 63. ಮಾಲವ್ಯಯೋಗ

ಅಂಗೈನಲ್ಲಿ ಶುಕ್ರಪರ್ವತ ಹೂತುಹೋಗಿಲ್ಲದಿದ್ದರೆ ಮತ್ತು ಹೆಚ್ಚು ವಿಕಸಿತವಾಗದಿದ್ದರೆ ಆದರೆ ಸಾಮಾನ್ಯ ರೀತಿಯಲ್ಲಿ ವಿಕಸಿತವಾಗಿ ಹೊಳಪಿನಿಂದ ಕೂಡಿದ್ದರೆ ಮತ್ತು ಸ್ವಸ್ಥವಾಗಿದ್ದರೆ ಜೊತೆಯಲ್ಲಿ ಜೀವನರೇಖೆ ಮಣಿಕಟ್ಟಿನ ಕಡೆಗೆ ಬರುತ್ತಾ ಶುಕ್ರ ಪರ್ವತಕ್ಕೆ ಪೂರ್ಣ ವಿಸ್ತಾರ ಕೊಟ್ಟಿದ್ದರೆ ಮತ್ತು ಹೆಬ್ಬೆರಳು ಉದ್ದವಾಗಿದ್ದು ಮತ್ತು ಸ್ವಲ್ಪ ಹಿಂಬದಿಯ ಕಡೆಗೆ ಬಾಗಿದ್ದರೆ ಹಾಗೂ ಶುಕ್ರ ಪರ್ವತದ ಮೇಲೆ ಯಾವುದೇ ಪ್ರಕಾರದ ಬಿಂದು ಅಥವಾ ಜಾಲ ಅಥವಾ ಬಾಧಕ ರೇಖೆಗಳ ಚಿಹ್ನೆ ಇಲ್ಲದೇ ಹೋದರೆ ಅಂತಹವನ ಕೈಲಿ ಮಾಲವ್ಯಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಅತ್ಯಂತ ಸುಂದರನೂ ಆಕರ್ಷಕನೂ ಆಗಿರುತ್ತಾನೆ. ಈ ವ್ಯಕ್ತಿ ಬುದ್ಧಿವಂತನೂ, ಚತುರನೂ ಆಗಿರುತ್ತಾನೆ. ಇವನು ಜೀವನದಲ್ಲಿ ಎಲ್ಲಾ ರೀತಿಯ ಸುಖವನ್ನು ಅನುಭವಿಸುತ್ತಾನೆ. ಇವನು ತನ್ನ ಕಾರ್ಯದಿಂದ ದೇಶ ಮತ್ತು ವಿದೇಶಗಳಲ್ಲಿ ಖ್ಯಾತಿ ಗಳಿಸುತ್ತಾನೆ.

## 64. ರೂಚಕ ಯೋಗ



ಒಂದು ವೇಳೆ ಅಂಗೈನಲ್ಲಿ ಮಂಗಳ ಪರ್ವತ ಪೂರ್ಣ ವಿಕಸಿತವಾಗಿದ್ದರೆ ಸ್ಪಷ್ಟವಾಗಿ ಮತ್ತು ಕೆಂಪು ವರ್ಣದಿಂದ ಕೂಡಿದ್ದರೆ ಮತ್ತು ಮಂಗಳರೇಖೆ ನೇರವಾಗಿ, ತೆಳುವಾಗಿ ಸುಂದರವಾಗಿ ಇದ್ದರೆ ಅಂತಹ ವ್ಯಕ್ತಿಯ ಕೈಲಿ ರೂಚಕಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಶಾರೀರಿಕ ದೃಷ್ಟಿಯಿಂದ ಶಕ್ತಿಯುತನಾಗಿರುತ್ತಾನೆ. ಇವನ ಜೀವನ ರಾಜನಂತೆ ಕಳೆಯುತ್ತದೆ. ಇಂತಹ ವ್ಯಕ್ತಿ ಮುಖಂಡನೂ, ದೀರ್ಘಾಯುವೂ ಆಗಿರುತ್ತಾನೆ.

## 65. ವಿವಾಹ ಯೋಗ



ಒಂದು ವೇಳೆ ಶುಕ್ರ ಪರ್ವತ ಮತ್ತು ಗುರು ಪರ್ವತ ವಿಕಸಿತವಾಗಿದ್ದರೆ ವಿವಾಹ ಯೋಗ ಉಂಟಾಗುತ್ತದೆ.

ಒಂದು ವೇಳೆ ಭಾಗ್ಯರೇಖೆ ಹೃದಯ ರೇಖೆಯ ಮೇಲೆ ಸಮಾಪ್ತಿಗೊಂಡರೆ ವ್ಯಕ್ತಿಗೆ ಸುಖೀ ವಿವಾಹವಾಗುತ್ತದೆ.

ಒಂದು ವೇಳೆ ಶುಕ್ರ ಪರ್ವತದ ಮೇಲೆ ಕೆಂಪು ಬಣ್ಣದ ನಕ್ಷತ್ರ ಚಿಹ್ನೆ ಇದ್ದರೆ ಸುಖಹೀನ ವಿವಾಹವಾಗುತ್ತದೆ.

ಒಂದು ವೇಳೆ ಭಾಗ್ಯರೇಖೆಯ ಮೇಲೆ ದ್ವೀಪ ಚಿಹ್ನೆ ಇದ್ದರೆ ವ್ಯಕ್ತಿಗೆ ವಿವಾಹ ವಿಚ್ಛೇದನವಾಗುತ್ತದೆ.

## 66. ಮಾತೃತ್ಯಕ್ತ ಯೋಗ

ಒಂದು ವೇಳೆ ಮಂಗಳ, ಸೂರ್ಯ ಮತ್ತು ಚಂದ್ರರೇಖೆಗಳು ಪರಸ್ಪರ



ಸಂಧಿಸಿದರೆ ಮತ್ತು ಸೂರ್ಯ ಪರ್ವತ ತನ್ನೊಳಗೇ ಬಲಹೀನವಾಗಿದ್ದರೆ ಮತ್ತು ಹೂತುಹೋಗಿದ್ದರೆ ಮಾತೃತ್ಯಕ್ತ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಜನಿಸಿದ ನಂತರ ಅವನ ತಾಯಿ ಯಾವುದೋ ಕಾರಣದಿಂದ ಆ ಬಾಲಕನನ್ನು ತ್ಯಜಿಸುತ್ತಾಳೆ ಮತ್ತು ಅವನ ಜೀವನ ಅನಾಥನ ರೀತಿ ಕಳೆಯುತ್ತದೆ.

## 67. ಕಲಾಯೋಗ

ಒಂದು ವೇಳೆ ಅಂಗೈನಲ್ಲಿ ಮಸ್ತಿಷ್ಕ ರೇಖೆಯಿಂದ ಯಾವುದಾದರೂ ನೇರ ರೇಖೆ ಉಂಗುರದ ಬೆರಳಿನ ಮೂಲದವರೆಗೆ ತಲುಪಿದ್ದರೆ ಅಥವಾ ಎರಡೂ ಕೈಗಳಲ್ಲಿ ಸೂರ್ಯ ರೇಖೆ ಜೀವನರೇಖೆಯಿಂದ ಪ್ರಾರಂಭವಾಗಿದ್ದರೆ ಕಲಾಯೋಗ ಉಂಟಾಗುತ್ತದೆ.



ಕಲಾಯೋಗ ಇರುವ ವ್ಯಕ್ತಿ ಕಲೆಯ ಮಾಧ್ಯಮದಿಂದ ಜೀವನ ಸಾಗಿಸುತ್ತಾನೆ ಮತ್ತು ಸಫಲತೆಯನ್ನು ಪಡೆಯುತ್ತಾನೆ.

## 68. ಧಾರ್ಮಿಕ ಯೋಗ

ಮಣಿಕಟ್ಟಿನಿಂದ ಯಾವುದಾದರೂ ರೇಖೆ ಗುರುಪರ್ವತದವರೆಗೆ ಹೋದರೆ ಮತ್ತು ಬೆರಳುಗಳ ತುದಿ ಚೂಪಾಗಿದ್ದರೆ ಧಾರ್ಮಿಕ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಧಾರ್ಮಿಕ ಕ್ಷೇತ್ರದಲ್ಲಿ ಉಚ್ಚ ಪದವಿಯನ್ನು ಪಡೆಯುತ್ತಾನೆ ಹಾಗೂ ಧಾರ್ಮಿಕ ಗ್ರಂಥವನ್ನು ಬರೆದು ಖ್ಯಾತಿಯನ್ನೂ ಗೌರವವನ್ನೂ ಸಂಪಾದಿಸುತ್ತಾನೆ.



## 69. ಕಾನೂನುಯೋಗ

ಒಂದು ವೇಳೆ ಶನಿರೇಖೆ ಮತ್ತು ಗುರುರೇಖೆ ವಿಕಸಿತವಾಗಿದ್ದರೆ ಅಥವಾ ಮಣಿಕಟ್ಟಿನಿಂದ ಗುರುಪರ್ವತದವರೆಗೆ ಯಾವುದಾದರೂ, ರೇಖೆ ತಲುಪಿದರೆ ಕಾನೂನು ಯೋಗ ಉಂಟಾಗುತ್ತದೆ.



ಯಾರ ಕೈಲಿ ಈ ಯೋಗ ಇರುತ್ತದೋ ಆ ವ್ಯಕ್ತಿ ಕಾನೂನನ್ನು ಚೆನ್ನಾಗಿ ಅರಿತಿರುವ ಸಫಲ ವಕೀಲನು ಅಥವಾ ಶ್ರೇಷ್ಠ ನ್ಯಾಯಾಧೀಶನೂ ಆಗುತ್ತಾನೆ.

## 70. ಸಾಹಿತ್ಯಿಕ ಯೋಗ

ಒಂದು ವೇಳೆ ಗುರುಪರ್ವತ, ಚಂದ್ರ ಪರ್ವತ ಮತ್ತು ಸೂರ್ಯಪರ್ವತ ವಿಕಸಿತವಾಗಿದ್ದರೆ ಮತ್ತು ಚಂದ್ರರೇಖೆ ಬುಧಪರ್ವತದವರೆಗೆ ಹೋದರೆ ಸಾಹಿತ್ಯಿಕ ಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಸಫಲ ಸಾಹಿತ್ಯಕಾರನಾಗುತ್ತಾನೆ.

## 71. ಭಾಗ್ಯೋದಯ ಯೋಗ



ಒಂದು ವೇಳೆ ಮಣಿಕಟ್ಟಿನಿಂದ ಭಾಗ್ಯರೇಖೆ ಪ್ರಾರಂಭವಾಗಿ ಮಧ್ಯದ ಬೆರಳಿನ ಎರಡನೇ ಭಾಗದವರೆಗೆ ಹೋದರೆ ಭಾಗ್ಯೋದಯ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿಯು ಭಾಗ್ಯದ ಬಲದಿಂದ ಜೀವನದಲ್ಲಿ ಎಲ್ಲಾ ರೀತಿಯಿಂದ ಸಫಲತೆ ಪಡೆದುಕೊಳ್ಳುತ್ತಾನೆ.

## 72. ಶತಾಧಿಕ ಆಯುಯೋಗ



ಯಾರ ಎರಡೂ ಕೈಗಳಲ್ಲಿ ಜೀವನರೇಖೆ ತನ್ನ ಉಗಮಸ್ಥಾನದಿಂದ ಪ್ರಾರಂಭವಾಗಿ ಶುಕ್ರಕ್ಷೇತ್ರಕ್ಕೆ ಪೂರ್ಣ ವಿಸ್ತಾರ ನೀಡುತ್ತಾ ಮಣಿಕಟ್ಟಿನವರೆಗೆ ತಲುಪಿದರೆ ಶತಾಧಿಕ ಆಯುಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ನೂರು ವರ್ಷಕ್ಕಿಂತಲೂ ಹೆಚ್ಚು ವರ್ಷ ಜೀವಿಸುತ್ತಾನೆ ಹಾಗೂ ಅವನ ಜೀವನ ಆನಂದಮಯವಾಗಿರುತ್ತದೆ.

## 73. ಮೋಕ್ಷಪ್ರಾಪ್ತಿ ಯೋಗ



ಒಂದು ವೇಳೆ ಗುರುಪರ್ವತ ವಿಕಸಿತವಾಗಿದ್ದರೆ ಮತ್ತು ಗುರುರೇಖೆ ತನ್ನ ಪರ್ವತದಿಂದ ಪ್ರಾರಂಭವಾಗಿ ಸೂರ್ಯ ಪರ್ವತದವರೆಗೆ ಹೋದರೆ ಮೋಕ್ಷ ಪ್ರಾಪ್ತಿಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಮೃತ್ಯುವಿನ ನಂತರ ಸದ್ಗತಿಯನ್ನು ಪಡೆಯುತ್ತಾನೆ.

## 74. ದುರ್ಮರಣ ಯೋಗ



ಒಂದು ವೇಳೆ ರಾಹುಕ್ಷೇತ್ರದ ಮೇಲೆ ತ್ರಿಕೋನದ ಚಿಹ್ನೆ ಇದ್ದರೆ ಮತ್ತು ಸೂರ್ಯ ಪರ್ವತ ವಿಕಸಿತವಾಗಿಲ್ಲದಿದ್ದರೆ ದುರ್ಮರಣ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿಯ ಸಾವು ಅಸ್ವಾಭಾವಿಕ ರೂಪದಿಂದ ಆಗುತ್ತದೆ.

## 75. ಏಕಪಾದಯೋಗ



ಯಾವ ವ್ಯಕ್ತಿಯ ಕೈನ ಆರೋಗ್ಯ ರೇಖೆಯ ಮೇಲೆ ತ್ರಿಕೋನವಿರುವುದೋ ಮತ್ತು ಆ ತ್ರಿಕೋನದಿಂದ ಯಾವುದಾದರೂ ರೇಖೆ ಪ್ರಾರಂಭವಾಗಿ ಚಂದ್ರ ಪರ್ವತದವರೆಗೆ ತಲುಪಿದರೆ ಆ ವ್ಯಕ್ತಿಗೆ ಏಕಪಾದಯೋಗ ಉಂಟಾಗುತ್ತದೆ.

ಈ ಯೋಗದಲ್ಲಿ ಜನಿಸುವ ವ್ಯಕ್ತಿ ಒಂದು ಕಾಲಿರುವ ಕುಂಟನಾಗಿರುತ್ತಾನೆ.

## 76. ಸರ್ಪಭಯ ಯೋಗ



ಒಂದು ವೇಳೆ ಕೈನಲ್ಲಿ ರಾಹುರೇಖೆ ಸರಪಳಿಯಂತಿದ್ದರೆ ಆಗ ಸರ್ಪಭಯ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿಗೆ ಜೀವಿತ ಕಾಲದಲ್ಲಿ ಸರ್ಪ ಕಡಿಯುತ್ತದೆ. ಒಂದು ವೇಳೆ ರೇಖೆ ದೃಢವಾಗಿದ್ದರೆ ಸರ್ಪ ಕಚ್ಚುವುದರಿಂದ ವ್ಯಕ್ತಿಯ ಮೃತ್ಯುವೂ ಸಹ ಉಂಟಾಗುತ್ತದೆ.

## 77. ಮುನಿಯೋಗ



ಒಂದು ವೇಳೆ ಕೈನಲ್ಲಿ ತೋರುಬೆರಳು ಉಂಗುರದ ಬೆರಳಿಗಿಂತ ಉದ್ದವಾಗಿದ್ದರೆ ಮತ್ತು ಗುರು ಪರ್ವತ ತನ್ನ ಸ್ಥಾನದಲ್ಲಿ ಅರಳಿಕೊಂಡಿದ್ದರೆ ಮತ್ತು ಅದರ ಮೇಲೆ ಸ್ವಸ್ತಿಕ ಚಿಹ್ನೆ ಇದ್ದರೆ ಮುನಿಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಸಾಂಸಾರಿಕ ಜೀವನದಿಂದ ಬೇರೆಯಾಗಿ ಸಾಧುವಿನಂತೆ ಜೀವನ ಕಳೆಯುತ್ತಾನೆ ಮತ್ತು ಹೆಚ್ಚು ಸಮಯ ಮೌನವಾಗಿಯೇ ಇರುತ್ತಾನೆ.

## 78. ದಿವಾಳಿಯೋಗ

ಒಂದು ವೇಳೆ ಭಾಗ್ಯರೇಖೆ ಚಿಕ್ಕದಾಗಿದ್ದು ಮತ್ತು ಹಲವು ಸ್ಥಾನಗಳಲ್ಲಿ ಕತ್ತರಿಸಿಹೋಗಿದ್ದರೆ ಮತ್ತು ಆರೋಗ್ಯ ರೇಖೆಯ ಮೇಲೆ ದ್ವೀಪದ ಚಿಹ್ನೆ ಇದ್ದರೆ ಅಂಥವನ ಕೈಲಿ ದಿವಾಳಿಯ ಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಸದಾ ಆರ್ಥಿಕ ದೃಷ್ಟಿಯಿಂದ ಚಿಂತಿತನಾಗಿರುತ್ತಾನೆ ಮತ್ತು ಕೊನೆಗೆ ದಿವಾಳಿಯಾಗುತ್ತಾನೆ.

## 79. ಮೃದಂಗ ಯೋಗ



ಒಂದು ವೇಳೆ ಅಂಗೈನಲ್ಲಿ ಶನಿ ಪರ್ವತ ಪೂರ್ಣ ವಿಕಸಿತವಾಗಿದ್ದರೆ ಮತ್ತು ಶನಿರೇಖೆ ಚಿಕ್ಕ ಚಿಕ್ಕ ರೇಖೆಗಳಿಂದ ನಿರ್ಮಿತವಾಗಿ ಮುಂದುವರೆದಿದ್ದರೆ ಮೃದಂಗ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ತನ್ನ ಭಾಗ್ಯದ ಬಲದಿಂದ ಜೀವನದಲ್ಲಿ ಏಳ್ಗೆ

ಹೊಂದುತ್ತಾನೆ. ಇಂತಹ ವ್ಯಕ್ತಿಗಳ ಪ್ರಭಾವ ಇತರೇ ವ್ಯಕ್ತಿಗಳ ಮೇಲೆ ಹೆಚ್ಚು ಉಂಟಾಗುತ್ತದೆ.

### 80. ಪುಷ್ಕಳ ಯೋಗ

ಒಂದು ವೇಳೆ ಶನಿ ಪರ್ವತ ಮತ್ತು ಶುಕ್ರ ಪರ್ವತ ಬಹಳ ಅಧಿಕ ಪುಷ್ಟವಾಗಿ ಮತ್ತು ಕೆಂಪಾಗಿದ್ದರೆ ಮತ್ತು ಭಾಗ್ಯರೇಖೆಯು ಪ್ರಾರಂಭ ಶುಕ್ರ ಪರ್ವತದಿಂದ ಆಗಿ ಶನಿ ಪರ್ವತದ ಮಧ್ಯ ಬಿಂದುವರೆಗೆ ತಲುಪಿದರೆ ಅಂತಹವನ ಕೈಲಿ ಪುಷ್ಕಳ ಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಅತ್ಯಂತ ಸುಂದರನೂ, ಆಕರ್ಷಕನೂ ಆಗಿರುತ್ತಾನೆ. ಇವನು ತನ್ನ ಸಂಪರ್ಕಕ್ಕೆ ಒಳಪಟ್ಟವರಿಗೆ ಜೀವನವಿಡೀ ಸಹಾಯ ಮಾಡುತ್ತಾನೆ. ಆರ್ಥಿಕ ಪರಿಸ್ಥಿತಿ ಚೆನ್ನಾಗಿರುತ್ತದೆ. ಕೆಲಸದಲ್ಲಿ ಈ ವ್ಯಕ್ತಿ ತನ್ನ ಪ್ರಯತ್ನಗಳಿಂದ ಮೇಲ್ಮಟ್ಟಕ್ಕೆ ಏರುತ್ತಾನೆ.

### 81. ವೀರ ಯೋಗ

ಒಂದು ವೇಳೆ ಮಂಗಳಪರ್ವತ ಪುಷ್ಟವಾಗಿ, ದೃಢವಾಗಿದ್ದರೆ ಮತ್ತು ಅದರ ಮೇಲೆ ವೃತ್ತದ ಚಿಹ್ನೆ ಇದ್ದರೆ ವೀರಯೋಗ ಉಂಟಾಗುತ್ತದೆ.



ಈ ಯೋಗದಲ್ಲಿ ಜನಿಸುವ ವ್ಯಕ್ತಿ ಸೇನೆ ಅಥವಾ ದೇಶ ರಕ್ಷಣೆಯ ಕಾರ್ಯಗಳಲ್ಲಿ ಅಗ್ರಣಿಯಾಗುತ್ತಾನೆ ಮತ್ತು ಅತ್ಯಂತ ಉಚ್ಚ ಪದವಿಯನ್ನು ತಲುಪುತ್ತಾನೆ.

### 82. ರಾಜರಾಜೇಶ್ವರ ಯೋಗ

ಒಂದು ವೇಳೆ ಅಂಗೈನಲ್ಲಿ ಸೂರ್ಯ ಪರ್ವತ ವಿಕಸಿತವಾಗಿದ್ದರೆ



ಮತ್ತು ಸೂರ್ಯರೇಖೆ ಅಂಗೈನ ಮಧ್ಯದಲ್ಲಿ ಬಂದು ಶುಕ್ರ ಪರ್ವತದ ಕಡೆಗೆ ಹೋದರೆ ಮತ್ತು ರೇಖೆಯ ಮೇಲೆ ಯಾವುದೇ ರೀತಿಯ ಅಡಚಣೆ ಉಂಟಾಗದಿದ್ದರೆ ರಾಜರಾಜೇಶ್ವರ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಪೂರ್ಣ ಸುಖಿಯೂ, ಸಫಲನೂ, ಧನವಂತನೂ ಮತ್ತು ವಿವಿಧ ಐಶ್ವರ್ಯದ ಭೋಗ ಮಾಡುವವನೂ ಆಗಿರುತ್ತಾನೆ.

## 83. ಲಕ್ಷ್ಮೀಯೋಗ



ಒಂದು ವೇಳೆ ಶನಿವಲಯ ಮತ್ತು ಬುಧವಲಯವಿದ್ದರೆ ಮತ್ತು ಯಾವುದಾದರೂ ಒಂದು ರೇಖೆಯಿಂದ ಈ ಎರಡು ವಲಯಗಳಿಗೂ ಪರಸ್ಪರ ಸಂಬಂಧ ಉಂಟಾದರೆ ಲಕ್ಷ್ಮೀಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಸಂಪನ್ನನೂ ಮತ್ತು ಸಮಾಜದ ಪ್ರಶಂಸೆಗೆ ಪಾತ್ರನಾಗುವವನೂ ಆಗುತ್ತಾನೆ. ಇವನು ತನ್ನ ಅದ್ಭುತ ಭಾಷಣ ಕಲೆಯಿಂದ ಜನರನ್ನು ತನ್ನತ್ತ ಒಲಿಸಿಕೊಳ್ಳುತ್ತಾನೆ. ಇವನು ಸದ್ಗುಣಿಯೂ, ಚತುರನೂ ಆಗಿರುತ್ತಾನೆ.



## 84. ಕೈಲಾಶಯೋಗ

ಕೈನಲ್ಲಿ ಬುಧಪರ್ವತ ಮತ್ತು ಸೂರ್ಯ ಪರ್ವತದಿಂದ ರೇಖೆಗಳು ಹೊರಟು ಆರೋಗ್ಯ ರೇಖೆಯಿಂದ ಕೆಳಗೆ ಹೋಗಿ ಪರಸ್ಪರ ಸಂಧಿಸಿದರೆ ಮತ್ತು ಈ ರೀತಿಯಿಂದ ಒಂದು ತ್ರಿಕೋನದ ಚಿಹ್ನೆ

ನಿರ್ಮಿತವಾದರೆ ಕೈಲಾಶಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ರಾಜನಂತೆ ಜೀವನ ಸಾಗಿಸುತ್ತಾನೆ. ಇವನು ಭೌತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಯಿಂದ ಜೀವನದಲ್ಲಿ ಪೂರ್ಣ ಆನಂದದ ಲಾಭ ಪಡೆದು ಕೊಳ್ಳುವುದರಲ್ಲಿ ಸಮರ್ಥನಾಗಿರುತ್ತಾನೆ.

## 85. ದೇವಾಂಶ ಯೋಗ



ಒಂದು ವೇಳೆ ಕೈನಲ್ಲಿನ ಏಳು ಪರ್ವತಗಳಲ್ಲಿ ಐದು ಪರ್ವತಗಳು ವಿಕಸಿತವಾಗಿದ್ದರೆ ಮತ್ತು ಪುಷ್ಟವಾಗಿದ್ದರೆ ಮತ್ತು ಅವುಗಳಿಗೆ ಸಂಬಂಧಿಸಿದ ರೇಖೆಗಳು ಸಹ ಸ್ಪಷ್ಟವಾಗಿದ್ದರೆ ಮತ್ತು ನಿರ್ದೋಷವಾಗಿದ್ದರೆ ದೇವಾಂಶಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ರಾಜನಂತೆ ಜೀವನ ಕಳೆಯುತ್ತಾನೆ. ಇವನ ಜೀವನದಲ್ಲಿ ಸಕಲ ರೀತಿಯ ಐಶ್ವರ್ಯ ಮತ್ತು ಸುಖ ಇರುತ್ತದೆ.

## 86. ರಾಜಯೋಗ

ಒಂದು ವೇಳೆ ಅಂಗೈನಲ್ಲಿನ ಏಳು ಗ್ರಹಗಳಲ್ಲಿ ಯಾವುದಾದರೂ ಒಂದು ಗ್ರಹದ ಪರ್ವತ ಶಕ್ತಿಯುತವಾಗಿ, ಪುಷ್ಟವಾಗಿ ಮತ್ತು ಕೆಂಪು ಬಣ್ಣದಿಂದ ಕೂಡಿದ್ದರೆ ಹಾಗೂ ಆದಕ್ಕೆ ಸಂಬಂಧಪಟ್ಟ ರೇಖೆಯೂ ಸಹ ನೇರವಾಗಿ ಸರಳವಾಗಿ ಮತ್ತು ಸ್ಪಷ್ಟವಾಗಿದ್ದರೆ ರಾಜಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ತನ್ನ ಪರಿಶ್ರಮದಿಂದ ಮೇಲ್ಮಟ್ಟಕ್ಕೆ ತಲುಪಿ ತನ್ನ ಜೀವನವನ್ನು ಸುಖಮಯವನ್ನಾಗಿ ಮಾಡಿಕೊಳ್ಳುತ್ತಾನೆ. ಈತನಿಗೆ ಅನ್ನರೇಖೆಗಳು ಚೆನ್ನಾಗಿದ್ದರೆ ಉನ್ನತ ಅಧಿಕಾರಿಯಾಗುತ್ತಾನೆ. ಪರಿಶ್ರಮದಿಂದ ಸಂಪಾದಿಸಿದ ಹಣದಿಂದ ಇವನು ಪೂರ್ಣ ಆನಂದವನ್ನು ಅನುಭವಿಸುತ್ತಾನೆ.

## 87. ರುದ್ರಯೋಗ



ಅಂಗೈನಲ್ಲಿ ಗುರುಮುದ್ರೆ ಮತ್ತು ಶನಿಮುದ್ರೆ ಇದ್ದರೆ ಜೊತೆಯಲ್ಲಿ ಸೂರ್ಯನಿಂದ ಯಾವುದಾದರೂ ರೇಖೆ ಹೊರಟು ಈ ಎರಡು ಮುದ್ರೆಗಳನ್ನೂ ಸ್ಪರ್ಶಿಸಿದರೆ ರುದ್ರಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಒಳ್ಳೆಯ ಆರೋಗ್ಯವನ್ನು ಹೊಂದಿರುತ್ತಾನೆ. ಈ ವ್ಯಕ್ತಿ ಹಣವನ್ನು ಸಾಕಷ್ಟು ಸಂಪಾದಿಸಿದರೂ ಸಹ ಧಾರಾಳವಾಗಿ ಖರ್ಚು ಮಾಡುತ್ತಾನೆ. ವೈಭವ ಪ್ರದರ್ಶನ ಮಾಡುವುದರಲ್ಲಿ ಈತನಿಗೆ ಹೆಚ್ಚು ನಂಬಿಕೆ ಇರುತ್ತದೆ.

## 88. ದೇವಯೋಗ



ಅಂಗೈನಲ್ಲಿನ ಏಳು ಗ್ರಹಗಳ ಪರ್ವತಗಳಲ್ಲಿ ಆರು ಪರ್ವತಗಳು ಹೂತು ಹೋಗಿದ್ದರೆ ಅಥವಾ ಅದೃಶ್ಯವಾಗಿದ್ದರೆ ಮತ್ತು ಇವುಗಳಿಗೆ ಸಂಬಂಧಪಟ್ಟ ರೇಖೆಗಳೂ ಸಹ ಅದೃಶ್ಯವಾಗಿದ್ದರೆ ಅಥವಾ ಮುರಿದು ಹೋಗಿದ್ದರೆ ಅಂತಹವನ ಕೈಯಲ್ಲಿ ದೇವಯೋಗ ಉಂಟಾಗುತ್ತದೆ.

ಈ ಯೋಗದಲ್ಲಿ ಜನಿಸಿರುವ ವ್ಯಕ್ತಿ ಎಲ್ಲಾ ರೀತಿಯ ಸುಖಗಳನ್ನು ಭೋಗಿಸುತ್ತಾನೆ. ಇಂತಹವನ ಜೀವನ ಶಾಂತವಾಗಿ ಮತ್ತು ಸರಳವಾಗಿರುತ್ತದೆ. ಈ ವ್ಯಕ್ತಿ ತನ್ನ ವಿಶೇಷ ಕ್ಷೇತ್ರದಲ್ಲಿ ಪ್ರಸಿದ್ಧಿಯನ್ನು ಪಡೆದುಕೊಳ್ಳುತ್ತಾನೆ.

## 89. ಹರಿಹರ ಬ್ರಹ್ಮಯೋಗ

ಒಂದು ವೇಳೆ ಬಲಗೈಲಿ ಗುರು, ಚಂದ್ರ, ಶುಕ್ರ ಮತ್ತು ಸೂರ್ಯ ಪರ್ವತಗಳ ಪರಸ್ಪರ ಸಂಬಂಧ ರೇಖೆಗಳ ಮೂಲಕ ಆಗಿದ್ದರೆ ಮತ್ತು ಈ ರೇಖೆಗಳ ತಮ್ಮಲ್ಲೇ ಎಲ್ಲಿಯೂ ಸಹ ಕತ್ತರಿಸದೆ ಹೋದರೆ ಹರಿಹರ ಬ್ರಹ್ಮಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಸಾಂಸ್ಕೃತಿಕ ಜೀವನವನ್ನು ಕಳೆಯುವವನು ಮತ್ತು ಸತ್ಯ ನುಡಿಯುವವನು, ವೇದ ಮತ್ತು ಸಂಸ್ಕೃತಿಯನ್ನು ತಿಳಿದಿರುವವನು ಮತ್ತು ದೈವ ಆರಾಧಕನೂ ಆಗಿರುತ್ತಾನೆ. ಸಮಾಜದಲ್ಲಿ ಇಂತಹ ವ್ಯಕ್ತಿಗೆ ವಿಶೇಷ ಗೌರವ ದೊರೆಯುತ್ತದೆ.





## 90. ಮತ್ಸ್ಯಯೋಗ

ಶುಕ್ರಪರ್ವತ ವಿಕಸಿತವಾಗಿದ್ದರೆ ಮತ್ತು ಹೆಬ್ಬೆರಳು ತೆಳುವಾಗಿ, ಉದ್ದವಾಗಿ ಮತ್ತು ಸ್ವಲ್ಪ ಹಿಂದಕ್ಕೆ ಬಾಗಿಕೊಂಡಿದ್ದರೆ ಹಾಗೂ ಸೂರ್ಯರೇಖೆ ಮೆಟ್ಟಿಲು ಮೆಟ್ಟಿಲಾಗಿದ್ದರೆ ಮತ್ಸ್ಯಯೋಗ ಉಂಟಾಗುತ್ತದೆ.

ಈ ಯೋಗವಿರುವ ವ್ಯಕ್ತಿ ಸರಿಯಾಗಿ ಭವಿಷ್ಯ ನುಡಿಯುವವನು, ಸದ್ಗುಣ ಸಂಪನ್ನನೂ, ಸಮಯದ ಬೆಲೆ ಅರಿತಿರುವವನೂ ಆಗಿರುತ್ತಾನೆ.

## 91. ಅಷ್ಟಲಕ್ಷ್ಮಿಯೋಗ

ಯಾರ ಕೈಲಿ ಜೀವನ ರೇಖೆ, ಆರೋಗ್ಯ ರೇಖೆ, ಭಾಗ್ಯರೇಖೆ ಮತ್ತು ಸೂರ್ಯರೇಖೆ ಸ್ಪಷ್ಟವಾಗಿ ಮತ್ತು ದೃಢವಾಗಿ ಇದ್ದರೆ ಅಷ್ಟಲಕ್ಷ್ಮಿಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಮಹಾನ್ ಸಂಪತ್ತನ್ನು ಹೊಂದಿರುತ್ತಾನೆ. ಇವನ ಎಲ್ಲಾ ಇಚ್ಛೆಗಳು ನೆರವೇರುತ್ತವೆ ಮತ್ತು ದೇಶ ವಿದೇಶಗಳಲ್ಲಿ ಗೌರವ ಪಡೆಯುತ್ತಾನೆ.





## 92. ಪಾರಿಜಾತ ಯೋಗ

ಯಾರ ಬಲಗೈ ಬೆರಳುಗಳಲ್ಲಿ ಮೂರು ಬೆರಳುಗಳ ಮೇಲೆ ಶಂಖದ ಚಿಹ್ನೆ ಇರುವುದೋ ಅಂತವನ ಕೈಲಿ ಪಾರಿಜಾತ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ತನ್ನ ಜೀವನದ ಮಧ್ಯಕಾಲದಲ್ಲಿ ಮತ್ತು ವೃದ್ಧಾಪ್ಯ ದಲ್ಲಿ ವಿಶೇಷ ಸುಖವನ್ನು ಪಡೆಯುತ್ತಾನೆ. ಸಮಾಜದ ರೀತಿ ನೀತಿಗಳನ್ನು ಕಟ್ಟುನಿಟ್ಟಾಗಿ ಪಾಲಿಸುವ ಈ ವ್ಯಕ್ತಿ ಉಚ್ಚಪದವಿಯನ್ನು ಪಡೆಯುತ್ತಾನೆ.

## 93. ಕುಸುಮ ಯೋಗ



ಒಂದು ವೇಳೆ ಅಂಗೈನಲ್ಲಿ ಸೂರ್ಯ ಪರ್ವತ ತನ್ನ ಸ್ಥಾನದಿಂದ ಜಾರಿ ಶನಿಪರ್ವತ ದಲ್ಲಿ ಸೇರಿಕೊಂಡಿದ್ದರೆ ಕುಸುಮಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ವಿದ್ವಾಂಸನೂ, ಭಾಗ್ಯಶಾಲಿಯೂ ಮತ್ತು ಉಚ್ಚಪದವಿಯನ್ನು ತಲುಪವವನೂ ಆಗಿರುತ್ತಾನೆ. ಇಂತಹ ವ್ಯಕ್ತಿ ಜೀವನದಲ್ಲಿ ಆಕಸ್ಮಿಕ ರೀತಿಯಲ್ಲಿ ಶೀಘ್ರ ಉನ್ನತಿಯನ್ನು ಪಡೆಯುತ್ತಾನೆ.

## 94. ದೇವೇಂದ್ರ ಯೋಗ

ಯಾರ ಕೈಲಿ ಕಮಲದ ಚಿಹ್ನೆ ಇರುತ್ತದೋ ಮತ್ತು ವಿಶೇಷವಾಗಿ ಇಂತಹ ಚಿಹ್ನೆ ಜೀವನರೇಖೆಯ ಹತ್ತಿರದಲ್ಲಿ ಚಂದ್ರ ಪರ್ವತದಿಂದ ಸ್ವಲ್ಪ ಸರಿದುಕೊಂಡಿದ್ದರೆ ಆದರೆ ಇದರಿಂದ ಯಾವುದೇ ಪ್ರಸಿದ್ಧ ರೇಖೆ ಕತ್ತರಿಸಲ್ಪಡದಿದ್ದರೆ ದೇವೇಂದ್ರ ಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ತಿಳುವಳಿಕೆ ಉಳ್ಳವನು ಮತ್ತು

ಚತುರತೆಯಿಂದ ಕೆಲಸ ಮಾಡುವವ ನಾಗಿರುತ್ತಾನೆ. ಈತನು ಆಕರ್ಷಕ ವ್ಯಕ್ತಿತ್ವ ಉಳ್ಳವನಾಗಿ ಎಲ್ಲರನ್ನೂ, ಪ್ರಭಾವಿತ ಗೊಳಿಸುವವನಾಗಿ, ದೀರ್ಘಾಯುವಾಗಿ, ಶಾಸನ ಪ್ರಿಯನಾಗಿ, ಕುಶಲನಾಗಿ, ದಕ್ಷನಾಗಿ ಇರುತ್ತಾನೆ.



## 95. ನವಲಕ್ಷ್ಮಿಯೋಗ

ಒಂದು ವೇಳೆ ಅಂಗೈನಲ್ಲಿ ಭಾಗ್ಯರೇಖೆ, ಸೂರ್ಯರೇಖೆ ಮತ್ತು ಬುಧರೇಖೆ ಮೂರೂ ಸಹ ಮಣಿಕಟ್ಟಿನಿಂದ ಹೊರಟಿದ್ದರೆ ಮತ್ತು ನೇರವಾಗಿ, ಸರಳವಾಗಿ, ಸ್ಪಷ್ಟವಾಗಿ ಇದ್ದರೆ ನವಲಕ್ಷ್ಮಿಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಅತುಲ ಸಂಪತ್ತಿನ ಒಡೆಯನೂ, ಅತ್ಯಂತ ಪ್ರಸಿದ್ಧಿ ಪಡೆಯುವವನೂ ಆಗುತ್ತಾನೆ.



## 96. ಕೋಟೀಶ ಯೋಗ

ಒಂದು ವೇಳೆ ಕೈನಲ್ಲಿ ಶನಿವಲಯ ವಿದ್ದರೆ ಮತ್ತು ವಲಯ ರೇಖೆಯಿಂದ ಚಿಕ್ಕ ಚಿಕ್ಕ ರೇಖೆಗಳು ಮೇಲ್ಭಾಗದ ಕಡೆಗೆ ಏಳುತ್ತಿದ್ದರೆ ಜೊತೆಯಲ್ಲೇ ಭಾಗ್ಯರೇಖೆ ಮಣಿಕಟ್ಟಿನಿಂದ ಹೊರಟು ಶನಿಬಿಂದುವರೆಗೆ ಹೋದರೆ ಕೋಟೀಶ ಯೋಗ ಉಂಟಾಗುತ್ತದೆ.

ಯಾವ ವ್ಯಕ್ತಿಯ ಕೈಯಲ್ಲಿ ಈ ಯೋಗ ಇರುವುದೋ ಆ ವ್ಯಕ್ತಿ ನಿಶ್ಚಯವಾಗಿ ಕೋಟ್ಯಾಧಿಪತಿಯಾಗುತ್ತಾನೆ.





### 97. ವಿಮಲಯೋಗ

ಒಂದು ವೇಳೆ ಎರಡು ಮಣಿಕಟ್ಟುಗಳ ಮಧ್ಯದಲ್ಲಿ ಬಳಿಯ ಬಿಂದು ಇದ್ದರೆ ವಿಮಲಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಸರ್ವಗುಣಸಂಪನ್ನನೂ ಮತ್ತು ಎಲ್ಲಾ ರೀತಿಯ ಐಶ್ವರ್ಯವನ್ನು ಭೋಗಿಸುವವನು, ದಯಾಳುವೂ ಮತ್ತು ಪರೋಪಕಾರಿಯೂ ಆಗುತ್ತಾನೆ.

### 98. ಶುಕ್ರಯೋಗ



ಒಂದು ವೇಳೆ ಶುಕ್ರ ಪರ್ವತ ಶಕ್ತಿಯುತವಾಗಿ, ಪುಷ್ಪವಾಗಿ, ಮೇಲೆದ್ದಿರುವಂತೆ ಮತ್ತು ಸುಂದರವಾಗಿ ಹಾಗೂ ಅದರ ಮೇಲೆ ಬಾಧಕ ರೇಖೆಗಳ ಜಾಲ ಇಲ್ಲದೇ ಹೋದರೆ ಶುಕ್ರಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಹಣವಂತನೂ, ವಿದ್ಯಾವಂತನೂ, ಕೀರ್ತಿವಂತನೂ, ದೀರ್ಘಾಯುವೂ, ಸುಖಿಯೂ ಆಗುತ್ತಾನೆ.



### 99. ಮುಕುಟಯೋಗ

ಒಂದು ವೇಳೆ ಬಲಗೈನಲ್ಲಿ ಮಂಗಳ ಪರ್ವತ ವಿಕಸಿತವಾಗಿದ್ದರೆ ಮತ್ತು ಅಲ್ಲಿಂದ ಒಂದು ರೇಖೆ ಸೂರ್ಯ ಪರ್ವತದ ಕಡೆಗೆ ಹೋದರೆ ಮತ್ತು ಅದರ ಮೇಲೆ ಸ್ವಸ್ತಿಕ ಚಿಹ್ನೆ ಇದ್ದರೆ ಮುಕುಟಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ತನ್ನ ಜೀವನದಲ್ಲಿ ಶ್ರೇಷ್ಠ ಕ್ರೀಡಾಪಟು ಆಗುತ್ತಾನೆ ಮತ್ತು ಪ್ರಸಿದ್ಧಿ ಪಡೆಯುತ್ತಾನೆ. ಇಂತಹ

ವ್ಯಕ್ತಿಯಲ್ಲಿ ವೈರಭಾವನೆ ಅತ್ಯಂತ ಪ್ರಬಲವಾಗಿರುತ್ತದೆ. ಇಂತಹ ವ್ಯಕ್ತಿ ತನ್ನ ಗುರಿಯನ್ನು ಸರಿಯಾಗಿ ಗುರುತಿಸುವ ಶಿಕಾರಿಯಾಗುತ್ತಾನೆ.

### 100. ಅರ್ಧ ಚಂದ್ರಯೋಗ

ಒಂದು ವೇಳೆ ಚಂದ್ರರೇಖೆಯ ಕೆಳಗೆ ಅಥವಾ ಬಲಗಡೆ ಕಪ್ಪು ಎಳ್ಳಿನ ಅಥವಾ ಕೆಂಪು ಎಳ್ಳಿನ ಚಿಹ್ನೆ ಇದ್ದರೆ ಅರ್ಧಚಂದ್ರ ಯೋಗ ಉಂಟಾಗುತ್ತದೆ.



ಈ ಯೋಗವಿರುವ ವ್ಯಕ್ತಿ ಜೀವನವಿಡೀ ಪ್ರಸನ್ನಚಿತ್ತನೂ, ಆರ್ಥಿಕ ದೃಷ್ಟಿಯಿಂದ ಸಂಪನ್ನನೂ, ಸಹೃದಯನೂ, ಸುಂದರ ಆಕರ್ಷಕ ವ್ಯಕ್ತಿತ್ವದವನೂ ಮತ್ತು ನಿರಂತರ ಉನ್ನತಿ ಹೊಂದುವವನೂ ಆಗುತ್ತಾನೆ.

### 101. ಶಿವಯೋಗ

ಒಂದು ವೇಳೆ ಕೈನ ಮಧ್ಯದಲ್ಲಿ ಯಾವುದಾದರೂ ಚಿಕ್ಕದಾದ ಅಲೆಯಂತೆ ಹೊಯ್ದಾಡುತ್ತಿರುವ ರೇಖೆ ಇದ್ದರೆ ಶಿವಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಉಚ್ಚ ಕೋಟಿಯ ವ್ಯಾಪಾರಿಯಾಗುತ್ತಾನೆ ಅಥವಾ ಸೇನೆಯಲ್ಲಿ ಉಚ್ಚ ಪದವಿಯನ್ನು ಪಡೆದು ಕೊಳ್ಳುವುದರಲ್ಲಿ ಸಫಲನಾಗುತ್ತಾನೆ.

### 102. ಬ್ರಹ್ಮಯೋಗ

ಒಂದು ವೇಳೆ ಅಂಗೈನಲ್ಲಿ ಎಲ್ಲಿ ಯಾದರೂ ಸಹ ಧ್ವಜದ ಚಿಹ್ನೆ ಇದ್ದರೆ ಅವನ ಕೈಲಿ ಬ್ರಹ್ಮಯೋಗ ಉಂಟಾಗುವುದೆಂದು ವಿದ್ವಾಂಸರು ಹೇಳುತ್ತಾರೆ.




ಬ್ರಹ್ಮಯೋಗದಲ್ಲಿ ಜನಿಸುವ ವ್ಯಕ್ತಿ ಸಮೃದ್ಧ ಜೀವನ ಕಳೆಯುವವನಾಗಿರುತ್ತಾನೆ. ಇಂತಹ ವ್ಯಕ್ತಿ ದೇವರನ್ನೂ, ಬ್ರಾಹ್ಮಣರನ್ನೂ, ಸನ್ಯಾಸಿಗಳನ್ನು ಪೂರ್ಣವಾಗಿ ನಂಬುತ್ತಾನೆ ಮತ್ತು ಚರಿತ್ರವಾನನೂ ಹಾಗೂ ಸಮಾಜ ದಲ್ಲಿ ಶುಭಕಾರ್ಯ ಮಾಡುವವನೂ ಆಗುತ್ತಾನೆ.

**103. ಹರಿಯೋಗ**

ಯಾರ ಕೈಲಿ ಅಶ್ವದ ಚಿಹ್ನೆ ಇರುತ್ತದೋ ಅಂತವನಿಗೆ ಹರಿಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಸುಖ ವೈಭೋಗ ಜೀವನ ನಡೆಸುವವನೂ, ವಿದ್ಯಾ ವಂತನೂ, ಚತುರನೂ, ಮಾತುಕತೆಯಲ್ಲಿ ಬುದ್ಧಿವಂತನೂ, ಆರ್ಥಿಕ ದೃಷ್ಟಿಯಿಂದ ಸಂಪನ್ನನೂ ಆಗುತ್ತಾನೆ.



**104. ಹರಯೋಗ**

ಒಂದು ವೇಳೆ ಜೀವನ ರೇಖೆಯು ಪತ್ತಿರ ತ್ರಿಶೂಲದ ಚಿಹ್ನೆ ಇದ್ದರೆ, ಆದರೆ ಅದರಿಂದ ಜೀವನ ರೇಖೆ ಕತ್ತರಿಸಲ್ಪಡದಿದ್ದರೆ ಹರಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ನಿರಂತರ ಉನ್ನತಿ ಹೊಂದುವವನೂ, ಧಾರ್ಮಿಕ

ಕಾರ್ಯಗಳಲ್ಲಿ ಆಸಕ್ತಿ ಉಳ್ಳವನೂ, ಪರೋಪಕಾರಿಯೂ, ದಯಾಳುವೂ, ಸತ್ಯವಂತನೂ ಆಗುತ್ತಾನೆ.

## 105. ರವಿಯೋಗ

ಯಾರ ಕೈಲಿ ಸೂರ್ಯನ ಚಿಹ್ನೆ ಕಾಣಿಸುತ್ತದೋ ಅವರ ಕೈಲಿ ರವಿಯೋಗ ಉಂಟಾಗುತ್ತದೆ.



ಈ ಯೋಗವಿರುವ ವ್ಯಕ್ತಿ ವಿಜ್ಞಾನದ ಅನುಸಂಧಾನ ಕಾರ್ಯಗಳಲ್ಲಿ ಆಸಕ್ತಿ ಇರುವವನೂ ಮತ್ತು ತೀವ್ರ ಮಸ್ತಿಷ್ಕದ ಒಡೆಯನೂ ಆಗುತ್ತಾನೆ. ಇಂತಹ ವ್ಯಕ್ತಿಗಳು ಸರಳ ಜೀವನದವರು ಮತ್ತು ಉಚ್ಚ ವಿಚಾರದವರು ಆಗಿರುತ್ತಾರೆ. ಇವರು ತಮ್ಮ ಜೀವನದಲ್ಲಿ ಸಂಪೂರ್ಣ ಯಶಸ್ಸು ಮತ್ತು ಗೌರವ ಪಡೆಯುತ್ತಾರೆ.

## 106. ಯೂಪಯೋಗ



ಒಂದು ವೇಳೆ ಅಂಗೈನಲ್ಲಿ ಎಲ್ಲಿಯಾದರೂ ವೃಕ್ಷದ ಚಿಹ್ನೆ ಇದ್ದರೆ ಯೂಪಯೋಗ ಉಂಟಾಗುತ್ತದೆ.

ಈ ಯೋಗ ಇರುವ ವ್ಯಕ್ತಿ ಆತ್ಮ ಕೇಂದ್ರಿತನೂ, ನಿಸ್ವಾರ್ಥ ಭಾವದವನೂ, ಅಲ್ಪದರಲ್ಲೇ ತೃಪ್ತಿಪಟ್ಟುಕೊಳ್ಳುವವನೂ ಮತ್ತು ನಿಶ್ಯಕ್ತ ಚಾರಿತ್ರ್ಯದವನೂ ಆಗುತ್ತಾನೆ.

## 107. ನವಯೋಗ

ಯಾರ ಕೈಲಿ ಎಲ್ಲಿಯಾದರೂ ಸ್ತಂಭದ ಚಿಹ್ನೆ ಇದ್ದರೆ ನವಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಜೀವನದಲ್ಲಿ ಸುಖಿಯೂ, ಸಫಲನೂ, ಗೃಹಸ್ಥ ಜೀವನದಲ್ಲಿ ಪೂರ್ಣ ರೀತಿಯಲ್ಲಿ ಸಂತುಷ್ಟನೂ ಆಗಿರುತ್ತಾನೆ.

## 108. ಶ್ರೀ ಮಹಾಲಕ್ಷ್ಮಿಯೋಗ

ಯಾರ ಕೈಲಿ ಎಲ್ಲಿಯಾದರೂ ತಕ್ಕಡಿಯ ಚಿಹ್ನೆ ಕಾಣಿಸಿದರೆ ಅಲ್ಲಿ ಶ್ರೀ ಮಹಾಲಕ್ಷ್ಮಿ ಯೋಗ ಉಂಟಾಗುತ್ತದೆ.



ಈ ಯೋಗ ಇರುವ ವ್ಯಕ್ತಿ ಲಕ್ಷಾಂತರ ರೂಪಾಯಿಗಳೊಡನೆ ಆಟ ಆಡುವವನೂ ಮತ್ತು ಧರ್ಮಾತ್ಮನೂ ಆಗಿರುತ್ತಾನೆ. ಇಂತಹವನ ಪ್ರಸಿದ್ಧಿ ದೂರ ದೂರದವರೆಗೆ ಹರಡಿಕೊಂಡಿರುತ್ತದೆ. ಜೀವನದಲ್ಲಿ ಈ ವ್ಯಕ್ತಿ ಎಲ್ಲಾ ದೃಷ್ಟಿಗಳಿಂದಲೂ ಸುಖೀಸಂಪನ್ನನೂ ಮತ್ತು ಸಂತುಷ್ಟನೂ ಆಗಿರುತ್ತಾನೆ.

# ಅಧ್ಯಾಯ 6
# ಕೈನ ಭಿನ್ನ ಭಿನ್ನ ಚಿಹ್ನೆಗಳು

**1. ಶಂಖ**

**ಶಂಖದಲ್ಲಿ ಎರಡು ಪ್ರಕಾರಗಳಿವೆ.**

**i) ಬಲಮುರಿ ಶಂಖ**

**ii) ಎಡಮುರಿ ಶಂಖ**

i. **ಬಲಮುರಿ ಶಂಖ:** ಬೆರಳುಗಳ ಅಗ್ರಭಾಗದ ಮೇಲೆ ಶಂಖಾಕೃತಿ ಒಂದು ವೇಳೆ ಬಲಗಡೆಗೆ ಮುಖ ಮಾಡಿಕೊಂಡಿದ್ದರೆ ಅದನ್ನು ಬಲಮುರಿ ಶಂಖ ಎಂದು ಕರೆಯುತ್ತಾರೆ. ಈ ಚಿಹ್ನೆ ಹೆಬ್ಬೆರಳಿನ ಅಗ್ರಭಾಗದಲ್ಲೂ ಸಹ ಇರಬಹುದು.

ii. **ಎಡಮುರಿ ಶಂಖ:** ಹೆಬ್ಬೆರಳು ಅಥವಾ ಬೆರಳುಗಳ ಅಗ್ರಭಾಗದ ಮೇಲೆ ಶಂಖಾಕೃತಿ ಒಂದು ವೇಳೆ ಎಡಗಡೆಗೆ ಮುಖ ಮಾಡಿಕೊಂಡಿದ್ದರೆ ಅದನ್ನು ಎಡಮುರಿ ಶಂಖ ಎಂದು ಕರೆಯುತ್ತಾರೆ.

ಇದು ಅತ್ಯಂತ ಶುಭ ಚಿಹ್ನೆಯಾಗಿದೆ. ಈ ಚಿಹ್ನೆಯಿಂದ ಕೂಡಿರುವ ವ್ಯಕ್ತಿಗಳು ವಿದೇಶಕ್ಕೆ ಹೋಗಿ ಹೆಚ್ಚು ಹಣವನ್ನು ಸಂಪಾದಿಸುತ್ತಾರೆ. ವಿದೇಶ ಯಾತ್ರೆ ಮಾಡುವ ಅವಕಾಶ ಇಂಥವರಿಗೆ ಆಗಾಗ್ಗೆ ಉಂಟಾಗುತ್ತದೆ. ಧರ್ಮ ಮತ್ತು ಧಾರ್ಮಿಕ ಕಾರ್ಯಗಳ ಬಗ್ಗೆ ಇವರಿಗೆ ವಿಶೇಷ ಆಸಕ್ತಿ ಇರುತ್ತದೆ. ಇವರು ದೇವಸ್ಥಾನ, ಮಸೀದಿ, ಚರ್ಚ್, ಧರ್ಮಶಾಲೆ, ಬಾವಿ, ಕೊಳ, ಸರೋವರ ಮುಂತಾದವುಗಳನ್ನು ನಿರ್ಮಿಸುವ ಇಚ್ಛೆ ಉಳ್ಳವರಾಗಿರುತ್ತಾರೆ. ಸಾಧು ಸಮ್ಮೇಳನ, ಧರ್ಮ ಸಭೆ, ಸಾಧುಸಂತರ ಜೊತೆ ಭಾಗವಹಿಸಲು ಇವರು ವಿಶೇಷವಾಗಿ ಬಯಸುತ್ತಾರೆ. ಮಹಿಳೆಯರ ಕೈಯಲ್ಲಿ ಈ ಚಿಹ್ನೆ ಇದ್ದರೆ ಅವರು ಮಹಾರಾಣಿಯಂತೆ ಸುಖ ಭೋಗಿಸುತ್ತಾರೆ.

**2. ಚಕ್ರ**

ಹೆಬ್ಬೆರಳು ಅಥವಾ ಬೆರಳುಗಳ ಅಗ್ರಭಾಗಗಲ್ಲಿ ಯಾವ ಗೋಲಚಕ್ರದಂತೆ ಕುಂಡಲಾಕೃತಿ ಚಿಹ್ನೆ ಇರುತ್ತದೋ ಅದನ್ನೇ ಚಕ್ರವೆಂದು ಕರೆಯುತ್ತಾರೆ. ಈ ಚಿಹ್ನೆಯೂ ಸಹ ಧಾರ್ಮಿಕತೆಯ ಪ್ರತೀಕವಾಗಿದೆ. ಈ ಚಿಹ್ನೆ ವ್ಯಕ್ತಿಗೆ ಮಹಾನ್ ವೈಭವ, ಐಶ್ವರ್ಯ, ವಾಹನ, ಭೂಮಿ, ಭವನ, ಶಯ್ಯಾಸುಖ ಮತ್ತು ಆನಂದವನ್ನು ಕೊಡುತ್ತದೆ. ರಾಜನ ರೀತಿಯಲ್ಲಿ ಈ

ವ್ಯಕ್ತಿ ಆನಂದವನ್ನು ಭೋಗಿಸುತ್ತಾನೆ. ಸಂಪನ್ನತೆಯಲ್ಲಿಯೂ ಸಹ ಕೊರತೆ ಇರುವುದಿಲ್ಲ.








### 3. ಗದೆ

ಹನುಮಂತ ಅಥವಾ ಭೀಮನ ಪ್ರಧಾನ ಅಸ್ತ್ರ ಗದೆ ಶಕ್ತಿ–ಸಾಮರ್ಥ್ಯ ಮತ್ತು ಬಲದ ಪ್ರತೀಕವಾಗಿದೆ. ಈ ಚಿಹ್ನೆ ಇರುವ ವ್ಯಕ್ತಿ ಅದ್ಭುತ ಶಕ್ತಿವಂತನು ಮತ್ತು ಬಲವಂತನೂ ಆಗಿರುತ್ತಾನೆ. ಅಸ್ತ್ರ ಶಸ್ತ್ರ



ಚಲಾಯಿಸುವುದರಲ್ಲಿ ದಕ್ಷನೂ, ಪ್ರಭಾವಶಾಲಿ ವ್ಯಕ್ತಿತ್ವ ಉಳ್ಳವನು, ಆಡಳಿತ ಕಾರ್ಯದಲ್ಲಿ ದಕ್ಷನೂ, ಅನುಶಾಸನ ಪ್ರಿಯನು ಮತ್ತು ಅಧಿಕಾರ ಪ್ರದರ್ಶನ ಮಾಡುವ ಭಾವನೆ ಉಳ್ಳವನು ಈ ವ್ಯಕ್ತಿ ಆಗಿರುತ್ತಾನೆ. ಇಂತಹ ವ್ಯಕ್ತಿ ಶಕ್ತಿ ಮತ್ತು ಹನುಮಂತನ ಉಪಾಸಕನಾಗಿರುತ್ತಾನೆ. ಮಹಿಳೆಯರ ಕೈಲೂ ಸಹ ಈ ಚಿಹ್ನೆ ವೀರತ್ವ ಭಾವವನ್ನು ಉತ್ಪನ್ನ ಮಾಡುತ್ತದೆ.

### 4. ಪದ್ಮ

ಇದು ಬೆರಳುಗಳ ಮೇಲಿದ್ದರೆ ಶುಭ ಸೂಚಕವಾಗಿರುತ್ತದೆ. ಈ ಚಿಹ್ನೆ ಕಮಲದಂತೆ ಮೇಲ್ಭಾಗದಲ್ಲಿ ಚಿಕ್ಕದಾದ ವರ್ತುಲ ಮತ್ತು ತತ್ಸಂಬಂಧದ

ಹೂವಿನ ದಳವನ್ನು ಹೊಂದಿರುತ್ತದೆ. ಇದು ಪದ್ಮ ಅಥವಾ ಕಮಲದ ಪೂರ್ಣ ಚಿಹ್ನೆಯಾಗಿದೆ. ಇದನ್ನು ಗುರುತಿಸಲು ಎರಡು ಮಾತುಗಳನ್ನು ಗಮನದಲ್ಲಿಟ್ಟುಕೊಳ್ಳಬೇಕು.

i. ಮೇಲೆ ಪೂರ್ಣ ಗೋಲಾಕಾರದ ವೃತ್ತ ಇರದೆ ವರ್ತುಲಾಕಾರವಾಗಿ ಇರುತ್ತದೆ.

ii. ಕೆಳಗೆ ಎಲೆಯಂತೆ ಚಿಹ್ನೆ ಇದ್ದರೆ, ಇದು ಅದರಿಂದ ಸಂಬಂಧಿಸಿದ್ದರೆ ಅಂತಹ ಪದ್ಮ ಕಳಂಕವಾದುದಲ್ಲ.

ಪದ್ಮ ಎರಡು ಪ್ರಕಾರವಿರುತ್ತವೆ.

1. ಊರ್ಧ್ವ

2. ಅಧಃ

**ಎಡ ಅಥವಾ ದಕ್ಷಿಣಃ** ಇದಕ್ಕೆ ಮೇಲಿನ ಅಂಚು ಯಾವ ಕಡೆಗೆ ಇರುತ್ತದೋ ಅದರಿಂದ ಸಂಬಂಧಿಸಿದ ಪದ್ಮ ಎಂದು ತಿಳಿದುಕೊಳ್ಳಬೇಕು.

ಈ ಚಿಹ್ನೆ ಮನುಷ್ಯನ ಉದಾರ ಹೃದಯದ ಪರಿಚಯ ನೀಡುತ್ತದೆ. ಈ ಚಿಹ್ನೆ ಇರುವ ವ್ಯಕ್ತಿ ಅನ್ಯಾಯ, ನ್ಯಾಯ ಜನರೂ ಸಹ ಶಿಷ್ಟತೆಯಿಂದ ಮಧುರತೆಯಿಂದ ತನ್ನೊಡನೆ ವ್ಯವಹರಿಸಬೇಕೆಂದು ಬಯಸುತ್ತಾನೆ. ಇಂತಹ ವ್ಯಕ್ತಿ ಸ್ವತಃ ಧಾರ್ಮಿಕ ಮತ್ತು ಧಾರ್ಮಿಕ ಕಾರ್ಯಗಳ ಬಗ್ಗೆ ಆಸಕ್ತಿ ವಹಿಸುತ್ತಾನೆ. ಇದು ಧನ-ಧಾನ್ಯ, ಐಶ್ವರ್ಯ ನೀಡುವ ಉತ್ತಮ ಚಿಹ್ನೆಯಾಗಿದೆ. ಸ್ತ್ರೀಯ ಕೈನಲ್ಲೂ ಸಹ ಈ ಚಿಹ್ನೆ ಉತ್ತಮ, ಧನ-ಧಾನ್ಯ-ಶ್ರೀವೃದ್ಧಿ ಮತ್ತು ಕೋಮಲತೆಯನ್ನು ನೀಡುತ್ತದೆ. ಈ ಚಿಹ್ನೆ ವ್ಯಕ್ತಿಗೆ ಲಕ್ಷ್ಮೀಸುಖ ಮತ್ತು ವೈಭವವನ್ನು ನೀಡುತ್ತದೆ. ಈ ಚಿಹ್ನೆ ಪ್ರಾಯಃ ಬೆರಳು ಅಥವಾ ಹೆಬ್ಬೆರಳಿನ ಮೇಲೆ ಇರುತ್ತದೆ. ಇಂತಹ ವ್ಯಕ್ತಿ ಯಾವುದೇ ಕಾರ್ಯಕ್ಕೆ ಕೈ ಹಾಕಿದರೂ ಸಫಲತೆ ದೊರಕುತ್ತದೆ. ಇಂತಹ ಚಿಹ್ನೆ ಇರುವ ವ್ಯಕ್ತಿ ಮಹಾಭಾಗ್ಯವಂತರೂ, ಗೌರವ ಪಡೆಯುವವರೂ, ಕುಲೀನರು ಮತ್ತು ಪ್ರಪಂಚದಲ್ಲಿ ಗೌರವ ಕೀರ್ತಿ ಪಡೆಯುವವರೂ ಆಗಿರುತ್ತಾರೆ. ಇಂತಹ ವ್ಯಕ್ತಿ ಮಾನಸಿಕ ರೂಪದಲ್ಲಿ ಸದೃಢರಾಗಿರುತ್ತಾರೆ. ಆದರೆ ಶರೀರ ಶ್ರಮದಲ್ಲಿ ಇವರ ಆಸಕ್ತಿ ಪ್ರಾಯಃ ಇರುವುದಿಲ್ಲ. ಇವರು ಒಳ್ಳೆಯ ಗಣಿತಜ್ಞರು, ಕುಶಲ ಆಡಳಿತಗಾರರು ಮತ್ತು ಯೋಜನೆಕಾರರಾಗಿರುತ್ತಾರೆ. ಕೋಮಲಕಾಂತರಾದ ಇವರು ಆರೋಗ್ಯವಂತರೂ, ತೇಜಸ್ವೀ ಪ್ರಭಾವಶಾಲಿಗಳೂ, ಗೌರವಶಾಲಿಗಳು ಮಧ್ಯಮಕಾಯರೂ, ನಿರಭಿಮಾನಿಗಳು, ಸ್ಪಷ್ಟ ವ್ಯಕ್ತಿತ್ವದವರು, ಆಕರ್ಷಕರು, ನಿಷ್ಕಪಟರೂ,

ಸರಳರೂ ಆಗಿರುತ್ತಾರೆ.

ಈ ಜಾತಕದವರು ಮೃದುಭಾಷಿಗಳು, ಸ್ಪಷ್ಟ ಮಾತಾಡುವವರು, ಗುರು, ದೇವ, ಅತಿಥಿಗಳನ್ನು ಆದರಿಸುವವರು ಆಗಿರುತ್ತಾರೆ. ಇಂತವರ ಸಜ್ಜನತೆಯು ಕಾರಣದಿಂದಾಗಿ ಶತ್ರುಗಳೂ ಸಹ ಮಿತ್ರರಾಗಿಬಿಡುತ್ತಾರೆ. ಇವರು ಅಪರಿಮಿತ ಮಿತ್ರ ಸಮುದಾಯದವರು ಮತ್ತು ಮಿತ್ರ ಹಿತೈಷಿಗಳು, ದೃಢ ನಿಶ್ಚಯಿಗಳು ಮತ್ತು ಕಷ್ಟದ ಸಮಯದಲ್ಲಿ ಸಹಾಯ ಮಾಡುವವರೂ ಆಗಿರುತ್ತಾರೆ. ಇವರು ತಮ್ಮ ಸಿದ್ಧಾಂತಗಳನ್ನು ಅಲ್ಲಾಡಿಸಲು ಅವಕಾಶ ಕೊಡುವುದಿಲ್ಲ. ಇವರಿಗೆ ಸಮಯದ ಲಾಭ ಪಡೆಯಲು ತಿಳಿದಿರುವುದಿಲ್ಲ. ಇವರ ಎಲ್ಲಾ ಮಾತುಗಳು ಅಥವಾ ತರ್ಕಗಳು ಪ್ರಮಾಣಪೂರ್ವಕವಾಗಿರುತ್ತವೆ. ಇವರು ಆರ್ಥಿಕ ದೃಷ್ಟಿಯಿಂದ ಸಫಲರು ಮತ್ತು ವ್ಯವಹಾರ ದೃಷ್ಟಿಯಿಂದ ಅಸಫಲರೂ ಆಗಿರುತ್ತಾರೆ.

## 5. ಮುತ್ತಿನ ಚಿಪ್ಪು (ಸಿಂಪು)

ಹೆಬ್ಬೆರಳು ಅಥವಾ ಬೆರಳುಗಳ ಅಗ್ರಭಾಗದ ಮೇಲೆ ಶಂಖ ಮತ್ತು ಚಕ್ರದ ಆಕೃತಿಗೆ ಭಿನ್ನವಾಗಿ ಹರಡಿಕೊಂಡಿರುವ ಅಂತಹದೇ ಬೇರೆ ಚಿಹ್ನೆ ಮುತ್ತಿನ ಚಿಪ್ಪು (ಸಿಂಪು) ನೋಡಲು ದೊರೆಯುತ್ತದೆ.

**ವ್ಯತ್ಯಾಸ:** ಶಂಖ ಮತ್ತು ಚಿಪ್ಪಿನಲ್ಲಿ ವ್ಯತ್ಯಾಸವೇನೆಂದರೆ ಶಂಖದ ರೇಖೆಗಳ ಕೆಳಭಾಗದ ಕಡೆಗೆ ಎಲ್ಲಿ ಒಟ್ಟುಗೂಡಿದಂತೆ ಕಾಣುವುದೋ ಅಲ್ಲಿ ಚಿಪ್ಪಿನ ರೇಖೆಗಳು ಪೂರ್ಣವಾಗಿ ಮತ್ತು ಹರಡಿಕೊಂಡಿರುವಂತೆ ಕಾಣಿಸುತ್ತದೆ. ಆದ್ದರಿಂದ ಶಂಖ ಮತ್ತು ಸಿಂಪಿನ ನಿರ್ಧಾರ ಮಾಡುವ ಸಮಯದಲ್ಲಿ ಬಹಳ ಎಚ್ಚರಿಕೆ ಇರಬೇಕು.

ಮನುಷ್ಯನ ಎರಡೂ ಕೈಗಳಲ್ಲಿನ ಎಂಟು ಬೆರಳುಗಳು ಮತ್ತು ಎರಡು ಹೆಬ್ಬೆರಳುಗಳ ಮೇಲೆ ಶಂಖ, ಚಕ್ರ ಅಥವಾ ಚಿಪ್ಪುಗಳಲ್ಲಿ ಯಾವುದಾದರೂ ಚಿಹ್ನೆ ಅವಶ್ಯವಾಗಿರುತ್ತದೆ. ಈ ಚಿಹ್ನೆ ಪ್ರಥಮ ಪರ್ವದಲ್ಲೇ ಇರುತ್ತದೆ. ಒಂದು ಬೆರಳು ಅಥವಾ ಹೆಬ್ಬೆರಳಿನ ಮೇಲೆ ಈ ಚಿಹ್ನೆ ಒಂದಕ್ಕಿಂತ ಹೆಚ್ಚಾಗಿ ಎಂದಿಗೂ ಇರುವುದಿಲ್ಲ ಮತ್ತು ಪ್ರಥಮ ಪರ್ವವನ್ನು ಬಿಟ್ಟು ಬೇರೆಲ್ಲಿಯೂ ಇರುವುದಿಲ್ಲ.

ಒಂದು ವೇಳೆ ಹೆಬ್ಬೆರಳಿನ ಅಗ್ರಭಾಗದ ಮೇಲೆ ಚಕ್ರ ಮತ್ತು ಗೋಧಿಯ ಚಿಹ್ನೆ ಪೂರ್ಣವಾಗಿದ್ದರೆ ವ್ಯಕ್ತಿ ಪಿತ್ರಾರ್ಜಿತ ಸಂಪತ್ತನ್ನು ಅನುಭವಿಸುತ್ತಾನೆ ಮತ್ತು ಅದನ್ನು ವೃದ್ಧಿಪಡಿಸುತ್ತಾನೆ.

ಹೆಬ್ಬೆರಳಿನ ಅಗ್ರಭಾಗದ ಮೇಲೆ ಶಂಖ ಚಿಹ್ನೆ ಪಿತ್ರಾರ್ಜಿತ ಧನ

ಸಂಪತ್ತಿನ ಸುಖವನ್ನು ಪಡೆದುಕೊಳ್ಳುವುದಕ್ಕೆ ಅವಕಾಶ ಕೊಡುವುದಿಲ್ಲ.

ತೋರು ಬೆರಳಿನ ಅಗ್ರಭಾಗದಲ್ಲಿ ಚಕ್ರದ ಚಿಹ್ನೆ ಇದ್ದರೆ ಮಿತ್ರ ಮಿತ್ರರಿಂದ ಅಥವಾ ಅವರ ಸಹಾಯದಿಂದ ವ್ಯಕ್ತಿ ಧನಲಾಭ ಪಡೆಯುತ್ತಾನೆ.

ತೋರು ಬೆರಳಿನ ಅಗ್ರಭಾಗದಲ್ಲಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಮಿತ್ರರಿಂದ ಧನ, ಮಾನ, ವೈಭವ ನಷ್ಟ ಮಾಡಿಕೊಳ್ಳುತ್ತಾನೆ.

ಮಧ್ಯದ ಬೆರಳಿನ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇದ್ದರೆ ದೇವಪೂಜೆ, ಕಥಾ ಸಾಧು ಸಂಗತಿ, ಜಪ-ತಪ-ದೇವಾರ್ಚನೆ, ಯಂತ್ರ, ಮಂತ್ರ, ತಂತ್ರ, ದೇವಾಲಯ ಮುಂತಾದವುಗಳಿಂದ ಅಥವಾ ಈಶ್ವರನ ಕೃಪೆಯಿಂದ ಹಣ ಪ್ರಾಪ್ತಿ ಮಾಡಿಕೊಳ್ಳುತ್ತಾರೆ.

ಒಂದು ವೇಳೆ ಮಧ್ಯದ ಬೆರಳಿನ ಅಗ್ರಭಾಗದ ಮೇಲೆ ಶಂಖದ ಚಿಹ್ನೆ ಇದ್ದರೆ ದೇವತೆ ಅಥವಾ ದೇವ ಸಂಬಂಧದಿಂದ ಧನ ಹಾನಿ ಉಂಟಾಗುತ್ತದೆ.

ಉಂಗುರದ ಬೆರಳಿನ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇದ್ದರೆ ವ್ಯಕ್ತಿ ಎಲ್ಲಾ ಪ್ರಕಾರದ ವ್ಯವಹಾರ ಮತ್ತು ಉದ್ಯೋಗದ ಮೂಲಕ ಹಣ ಸಂಪಾದನೆ ಮಾಡುತ್ತಾನೆ.

ಉಂಗುರದ ಬೆರಳಿನ ಅಗ್ರಭಾಗದ ಮೇಲೆ ಶಂಖದ ಚಿಹ್ನೆ ಇದ್ದರೆ ಲೋಕ ವ್ಯವಹಾರ ಮತ್ತು ಉದ್ಯೋಗದಿಂದ ಧನದ ಹಾನಿಯಾಗುತ್ತದೆ. ದುಂದುವೆಚ್ಚ ಅಧಿಕವಾಗಿ ಮಾಡುವುದರಿಂದ ಈ ವ್ಯಕ್ತಿ ಸಾಲಗಳಿಂದ ಅದುಮಲ್ಪಟ್ಟಿರುತ್ತಾನೆ.

ಒಂದು ವೇಳೆ ಕಿರುಬೆರಳಿನ ಮೇಲೆ ಚಕ್ರದ ಚಿಹ್ನೆ ಇದ್ದರೆ ವ್ಯಕ್ತಿಗೆ ಉದ್ಯಮದಿಂದ ಧನಲಾಭವಾಗುತ್ತದೆ.

ಆದರೆ ಕಿರುಬೆರಳಿನ ಅಗ್ರಭಾಗದ ಮೇಲ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಉದ್ಯಮದಿಂದ ಹಾನಿ ಮಾಡಿಕೊಳ್ಳುತ್ತಾನೆ.

ಹೆಬ್ಬೆರಳಿನ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇದ್ದರೆ ವ್ಯಕ್ತಿ ಐಶ್ವರ್ಯ, ಪ್ರಭಾವ, ಕೀರ್ತಿ, ಗೌರವ, ಬುದ್ಧಿ ಚಾತುರ್ಯ, ಸತತ ಕ್ರಿಯಾಶೀಲತೆ, ಸದ್ಗುಣ, ಸುಖ, ವೈಭವ ಪಡೆಯುತ್ತಾನೆ. ಆದರೆ ಅರ್ಧಚಕ್ರ ಪೂರ್ಣ ಸಫಲತೆ ಕೊಡುವುದಿಲ್ಲ.

ಒಂದು ವೇಳೆ ಯಾವುದಾದರೂ ಸ್ತ್ರೀಯ ಹೆಬ್ಬೆರಳಿನ ಮೇಲೆ ಚಕ್ರದ ಚಿಹ್ನೆ ಇದ್ದರೆ ಮತ್ತು ಹೆಬ್ಬೆರಳಿನ ಮಧ್ಯಭಾಗ ದಪ್ಪವಾಗಿದ್ದರೆ ಅವಳು ದುಷ್ಟಳೂ, ಕುಲಕ್ಷಣೆಯೂ, ವ್ಯಭಿಚಾರಿಣಿಯೂ, ಅಪಕೀರ್ತಿ

ಕೊಡುವವಳು ಕುಟುಂಬ ದ್ವೇಷಿಯೂ ಆಗುತ್ತಾಳೆ.

ಒಂದು ವೇಳೆ ಹೆಬ್ಬೆರಳಿನ ಮೇಲೆ ಬಲಮುರಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಅತ್ಯಂತ ಸೌಭಾಗ್ಯಶಾಲಿಯೂ, ಸಂಪನ್ನನೂ, ಸಫಲನೂ ಆಗುತ್ತಾನೆ.

ಹೆಬ್ಬೆರಳಿನ ಮೇಲೆ ಎಡಮುರಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಎಲ್ಲಾ ರೀತಿಯಿಂದ ಹಾನಿಯನ್ನು ಮಾಡಿಕೊಳ್ಳುತ್ತಾನೆ.

ಹೆಬ್ಬೆರಳು ಮತ್ತು ತೋರುಬೆರಳು ಎರಡರ ಮೇಲೆ ಚಕ್ರ ಚಿಹ್ನೆ ಇದ್ದರೆ ಮತ್ತು ಬೆರಳುಗಳ ಮಧ್ಯಭಾಗದಲ್ಲಿ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿಯ ಎಲ್ಲಾ ಮನೋಕಾಮನೆಗಳು ಪೂರ್ಣವಾಗುತ್ತವೆ. ಎಲ್ಲಾ ಕಡೆ ಜಯ, ಗೌರವ, ಆದರ ದೊರೆಯುತ್ತದೆ. ಕೀರ್ತಿ, ಸುಖ, ಆನಂದ, ಐಶ್ವರ್ಯ ದೊರೆಯುತ್ತದೆ.

ಒಂದು ವೇಳೆ ಹೆಬ್ಬೆರಳಿನ ಅಗ್ರಭಾಗದ ಮೇಲೆ ಚಿಪ್ಪಿನ (ಸಿಂಪು) ಚಿಹ್ನೆ ಇದ್ದರೆ ವ್ಯಕ್ತಿಯ ಸಂಪೂರ್ಣ ಜೀವನ ಕಷ್ಟ, ದುಃಖ, ವಿಪತ್ತಿನಿಂದ ಕಳೆಯುತ್ತದೆ. ಈ ಚಿಹ್ನೆ ಅಸಫಲತೆಯ ಸೂಚಕವಾಗಿದೆ.

ತೋರು ಬೆರಳಿನ ಅಗ್ರಭಾಗದ ಮೇಲೆ ಚಕ್ರ ಚಿಹ್ನೆ ಇದ್ದರೆ ವ್ಯಕ್ತಿ ತನ್ನ ತಂದೆ ತಾಯಿ, ಅಣ್ಣಾ ತಮ್ಮ ಮಿತ್ರರಿಂದ ಧನ ಪಡೆದುಕೊಂಡು ವೈಭವ ಜೀವನ ನಡೆಸುತ್ತಾನೆ. ಇಂತಹ ವ್ಯಕ್ತಿ ಮಹತ್ವಾಕಾಂಕ್ಷಿಯು, ಈಶ್ವರಭಕ್ತನು, ಧನದ ಲೋಭಿಯೂ, ಜಿಪುಣನೂ, ಸಾಂಸಾರಿಕ ಸುಖಗಳನ್ನು ಅನುಭವಿಸುವವನೂ, ಕುಶಲ ಉದ್ಯಮಿಯೂ, ಯೋಗ್ಯ ಚಿಕಿತ್ಸಕನೂ, ಜನನಾಯನೂ, ವಕೀಲನೂ, ಜನಸಮಾಜದ ವಿಶ್ವಾಸಪಾತ್ರನೂ ಆಗುತ್ತಾನೆ.

ತೋರು ಬೆರಳಿನ ಅಗ್ರಭಾಗದ ಮೇಲೆ ಚಕ್ರ ಮತ್ತು ಸಂಧಿ ಪರ್ವದ ಮೇಲೆ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ಕೀರ್ತಿ, ಐಶ್ವರ್ಯ, ಸುಖ, ಆನಂದ ಪಡೆದುಕೊಳ್ಳುತ್ತಾನೆ. ಆದರೆ ಅರ್ಧ ಚಕ್ರ ವಿರುದ್ಧ ಫಲವನ್ನು ನೀಡುತ್ತದೆ.

ಒಂದು ವೇಳೆ ಹೆಬ್ಬೆರಳು ಮತ್ತು ತೋರುಬೆರಳು ಈ ಎರಡರ ಅಗ್ರಭಾಗದ ಮೇಲೆ ಚಕ್ರವಿದ್ದರೆ ಮತ್ತು ಇದರ ಮಧ್ಯಭಾಗ ಅರ್ಥಾತ್ ಸಂಧಿಯಲ್ಲಿ ಗೋಧಿಯ ಚಿಹ್ನೆ ಇದ್ದರೆ ಈ ಚಿಹ್ನೆ ಸರ್ವಸಿದ್ಧಿದಾಯಕವೆಂದು ತಿಳಿಯಬೇಕು.

ಒಂದು ವೇಳೆ ಹೆಬ್ಬೆರಳು ಮತ್ತು ತೋರು ಬೆರಳು ಈ ಎರಡರ ಅಗ್ರಭಾಗದ ಮೇಲೆ ಶಂಖ ಅಥವಾ ಸಿಂಪಿನ (ಚಿಪ್ಪು) ಚಿಹ್ನೆ ಇದ್ದರೆ ವ್ಯಕ್ತಿ ಜೀವನಪರ್ಯಂತ ದುಃಖಿಯೂ, ಹೀನನೂ, ನಿರಾಶೆಯಿಂದ

ಕೂಡಿರುವವನೂ, ನಿರ್ಧನನೂ, ಬೇಸರದಿಂದ ಕೂಡಿರುವವನೂ ಮತ್ತು ಅವಮಾನಿತನೂ ಆಗುತ್ತಾನೆ.

ಒಂದು ವೇಳೆ ತೋರು ಬೆರಳಿನ ಅಗ್ರಭಾಗದ ಮೇಲೆ ಬಲಮುರಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಯಾವಾಗಲೂ ಒಂದೇ ತರಹದ ಜೀವನ ಸಾಗಿಸುತ್ತಾನೆ. ಇಂತಹ ವ್ಯಕ್ತಿ ಪ್ರಾಯಃ ಅಸ್ಥಿರನು, ಉದ್ಯೋಗರಹಿತನು, ಅಶ್ರಮಶೀಲನೂ, ನಿರಾಶನೂ, ಅಪವಾದಿಯೂ ಮತ್ತು ದುಂದುವೆಚ್ಚ ಮಾಡುವವನೂ ಆಗಿರುತ್ತಾನೆ. ಆದರೆ ಎಡಮುರಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ತನ್ನ ಮಿತ್ರರಿಂದ ಹಾಗೂ ಪರಿಚಿತರಿಂದ ಮೋಸಹೋಗುತ್ತಾನೆ ಮತ್ತು ನಷ್ಟ ಹೊಂದುತ್ತಾನೆ.

ಮಧ್ಯದ ಬೆರಳಿನ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇದ್ದರೆ ವ್ಯಕ್ತಿ ದೇವರು ಅಥವಾ ದೇವ ಸಂಬಂಧಿತ ಯಾವುದಾದರೂ ಕಾರ್ಯದ ಮೂಲಕ ಹಣ ಗಳಿಸುತ್ತಾನೆ ಮತ್ತು ಬಲ, ಬುದ್ಧಿ ಮತ್ತು ಯೋಜನೆಯಿಂದ ಐಶ್ವರ್ಯವಂತನಾಗುತ್ತಾನೆ. ಅಪೂರ್ಣ ಚಕ್ರ ಪೂರ್ಣ ಕೆಲಸ ನೀಡುವುದಿಲ್ಲ.

ಮಧ್ಯದ ಬೆರಳಿನ ಅಗ್ರಭಾಗದ ಮೇಲೆ ಸಿಂಪಿನ (ಚಿಪ್ಪು) ಚಿಹ್ನೆ ಇದ್ದರೆ ದೈವಕೋಪ ಅಥವಾ ಬುದ್ಧಿಹೀನತೆಯಿಂದ ಗಳಿಸಿದ ಹಣವನ್ನು ಕಳೆದುಕೊಂಡು ತೊಂದರೆಯಲ್ಲಿ ಸಿಲುಕಿಕೊಳ್ಳುತ್ತಾನೆ.

ಒಂದು ವೇಳೆ ಮಧ್ಯದ ಬೆರಳಿನ ಅಗ್ರಭಾಗದ ಮೇಲೆ ಬಲಮುರಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಧನವಂತನೂ, ವಿದ್ವಾಂಸನೂ, ನ್ಯಾಯಪ್ರಿಯನು, ಯಶಸ್ವಿಯೂ, ಶಾಸ್ತ್ರ ಪ್ರೇಮಿಯೂ, ಧಾರ್ಮಿಕನೂ ಆಗುತ್ತಾನೆ. ಆದರೆ ಎಡಮುರಿ ಶಂಖದ ಚಿಹ್ನೆ ಇದ್ದರೆ ಅಂತಹ ವ್ಯಕ್ತಿಯ ದಾನವನ್ನು ತೆಗೆದುಕೊಳ್ಳಬಾರದು. ಏಕೆಂದರೆ ದಾನ ತೆಗೆದುಕೊಂಡ ವ್ಯಕ್ತಿಯ ಕೂಡಿಸಿರುವ ಹಣ ಮತ್ತು ಪುಣ್ಯ ನಷ್ಟವಾಗುತ್ತದೆ.

ಉಂಗುರದ ಬೆರಳಿನ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇದ್ದರೆ ಮಿತ್ರನಿಂದ ಅಥವಾ ಭಿನ್ನ ಭಿನ್ನ ಉಪಾಯಗಳಿಂದ ಇಂತಹ ವ್ಯಕ್ತಿ ಹಣವನ್ನು ಸಂಪಾದಿಸುತ್ತಾನೆ. ಸಮಾಜದಲ್ಲಿ ಮಾನ, ಮರ್ಯಾದೆ, ಪ್ರತಿಷ್ಠೆ, ಕೀರ್ತಿ, ಐಶ್ವರ್ಯ, ಆನಂದ ಮತ್ತು ಸುಖವನ್ನು ಪಡೆಯುತ್ತಾನೆ. ಅಪೂರ್ಣ ಚಕ್ರ ಸಂಪೂರ್ಣ ಲಾಭವನ್ನು ನೀಡುವುದಿಲ್ಲ.

ಒಂದು ವೇಳೆ ಉಂಗುರದ ಬೆರಳಿನ ಅಗ್ರಭಾಗದ ಮೇಲೆ ಬಲಮುರಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿಯ ಧನ ಅನೇಕ ರೀತಿಯಲ್ಲಿ ಖರ್ಚಾಗುತ್ತದೆ

ಮತ್ತು ನಷ್ಟವಾಗುತ್ತದೆ. ಲಾಭ–ನಷ್ಟ ಸರಿಸಮಾನವಾಗಿರುತ್ತದೆ. ಆದರೆ ಒಂದು ವೇಳೆ ಎಡಮುರಿ ಶಂಖದ ಚಿಹ್ನೆ ಇದ್ದರೆ ಅತ್ಯಂತ ಹಾನಿಕಾರಕವೂ ಮತ್ತು ದುರ್ಭಾಗ್ಯ ಸೂಚಕವಾಗಿರುತ್ತದೆ.

ಒಂದು ವೇಳೆ ಕಿರುಬೆರಳಿನ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇದ್ದರೆ ವ್ಯಕ್ತಿ ಉದ್ಯಮದ ಮೂಲಕ ಧನಸಂಪಾದನೆ ಮಾಡುತ್ತಾನೆ. ಇಂತಹ ವ್ಯಕ್ತಿ ಶಾಸ್ತ್ರಜ್ಞನೂ ಮತ್ತು ಗ್ರಂಥ ಲೇಖನ ಮಾಡುವವನೂ ಆಗಿರುತ್ತಾನೆ.

ಒಂದು ವೇಳೆ ಕಿರುಬೆರಳಿನ ಅಗ್ರಭಾಗದ ಮೇಲೆ ಬಲಮುರಿ ಶಂಖದ ಚಿಹ್ನೆ ಇದ್ದರೆ ವ್ಯಕ್ತಿಗೆ ಉದ್ಯಮದ ಲಾಭವಾಗುತ್ತದೆ. ಆದರೆ ಒಂದು ವೇಳೆ ಎಡಮುರಿ ಶಂಖದ ಚಿಹ್ನೆ ಇದ್ದರೆ ದೊಡ್ಡ ಹಾನಿಯೇ ಉಂಟಾಗುತ್ತದೆ.

ಒಂದು ವೇಳೆ ಎಲ್ಲಾ ಬೆರಳುಗಳ ಮೇಲೆ ಮತ್ತು ಹೆಬ್ಬೆರಳುಗಳ ಮೇಲೆ ಬಲಮುರಿಗಳ ಶಂಖದ ಚಿಹ್ನೆ ಇದ್ದರೆ ವ್ಯಕ್ತಿಗೆ ಅತ್ಯಂತ ಶುಭಫಲವೂ ಮತ್ತು ಸೌಭಾಗ್ಯವೂ ಉಂಟಾಗುತ್ತದೆ.

ಒಂದು ವೇಳೆ ನಾಲ್ಕು ಬೆರಳುಗಳ ಮೂಲದಲ್ಲಿ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಜೀವನಪರ್ಯಂತ ಸುಖ ಐಶ್ವರ್ಯ ಭೋಗಿಸುವವನೂ ಮತ್ತು ಅಕಸ್ಮಾತ್ ಲಾಭವ ಪಡೆಯುವವನೂ ಆಗಿರುತ್ತಾನೆ.

ಎಲ್ಲಾ ಬೆರಳುಗಳ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇರುವುದು ಅತ್ಯಂತ ಸೌಭಾಗ್ಯದ ಲಕ್ಷಣವಾಗಿದೆ. ಇಂತಹ ಚಿಹ್ನೆ ಇರುವ ವ್ಯಕ್ತಿ ಅತ್ಯಂತ ಶಕ್ತಿವಂತನೂ, ಯಶಸ್ವಿಯೂ, ಹಣವಂತನೂ, ಸರ್ವಗುಣಸಂಪನ್ನನೂ, ಐಶ್ವರ್ಯವಂತನೂ ಆಗುತ್ತಾನೆ.

ಒಂದು ವೇಳೆ ಎಲ್ಲಾ ಹತ್ತು ಬೆರಳುಗಳ ಅಗ್ರಭಾಗದ ಮೇಲೆ (8 ಬೆರಳು ಮತ್ತು 2ಹೆಬ್ಬೆರಳು) ಶಂಖದ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ರಾಜ ಅಥವಾ ಸನ್ಯಾಸಿಯಾಗುತ್ತಾನೆ.

ಒಂದು ವೇಳೆ ಯಾವುದಾದರೂ ಸ್ತ್ರೀಯ ಕೈಲಿ ಹೆಬ್ಬೆರಳಿನ ಜಡದಿಂದ ಮಧ್ಯಭಾಗದವರೆಗೆ ದಪ್ಪವಾದ ಚಕ್ರ ಇದ್ದರೆ ಅವಳು ದುಷ್ಟ ಪ್ರಕೃತಿಯವಳು, ವ್ಯಭಿಚಾರಿಣಿಯು, ಕುಲಟೆಯೂ, ನಿರ್ಲಜ್ಜಳೂ, ದಯಾಹೀನಳು, ಸ್ವತಂತ್ರಳು ಮತ್ತು ರತಿಕರ್ಮದಲ್ಲಿ ಪ್ರಚಂಡ ವೇಗದವಳೂ ಆಗುತ್ತಾಳೆ.

ಉಂಗುರದ ಬೆರಳು ಮತ್ತು ತೋರು ಬೆರಳು ಎರಡರ ಮೇಲೆ ಚಕ್ರದ ಚಿಹ್ನೆ ಇದ್ದರೆ ಇಂತಹ ವ್ಯಕ್ತಿ ಗೆಳೆತನ ಮಾಡಿಕೊಳ್ಳುವುದರಲ್ಲಿ ಚತುರನು, ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸುವವನು, ಸ್ವಕಾರ್ಯ

ದಕ್ಷನೂ, ವಕೀಲನೂ, ಡಾಕ್ಟರನೂ ಆಗುತ್ತಾನೆ.

ಒಂದು ವೇಳೆ ಹೆಬ್ಬೆರಳು ಮತ್ತು ಉಂಗುರದ ಬೆರಳು ಎರಡರ ಮೇಲೆ ಚಕ್ರ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಪಿತ್ರಾರ್ಜಿತ ಉದ್ಯಮ ಮತ್ತು ಸಂಪತ್ತನ್ನು ರಕ್ಷಿಸುವವನಾಗಿರುತ್ತಾನೆ. ಉದ್ಯಮದಲ್ಲಿ ಕುಶಲನಾಗಿರುತ್ತಾನೆ.

ಒಂದು ವೇಳೆ ಹೆಬ್ಬೆರಳಿನ ಚಕ್ರ ರೇಖೆಗಳಿಂದ ಕತ್ತರಿಸಿಹೋಗಿದ್ದರೆ ಅಂತಹ ವ್ಯಕ್ತಿ ಬೇರೆಯವರ ಸಂಪತ್ತನ್ನು ರಕ್ಷಿಸುವುದರಲ್ಲಿ ಕುಶಲನಾಗಿರುತ್ತಾನೆ.

ಒಂದು ವೇಳೆ ಉಂಗುರದ ಬೆರಳು ಮತ್ತು ಮಧ್ಯದ ಬೆರಳಿನ ಅಗ್ರಭಾಗದ ಮೇಲೆ ಚಕ್ರದ ಚಿಹ್ನೆ ಇದ್ದರೆ ವ್ಯಕ್ತಿ ದಾನ, ಧರ್ಮ, ಯಜ್ಞ, ಸಾಧುಗಳ ಸಹವಾಸ ಮತ್ತು ದೇವತಾರ್ಚನೆ ಮಾಡುವವನಾಗಿರುತ್ತಾನೆ.

ಒಂದು ವೇಳೆ ಉಂಗುರದ ಬೆರಳು ಮತ್ತು ಕಿರುಬೆರಳಿನ ಮೇಲೆ ವ್ಯಕ್ತಿ ಸಫಲ ಉದ್ಯಮಿಯಾಗುತ್ತಾನೆ.

1. ಒಂದು ಬೆರಳಿನ ಮೇಲೆ ಚಕ್ರವಿದ್ದರೆ ವ್ಯಕ್ತಿ ಚತುರನು, ವಾಚಾಳಿಯು ಮತ್ತು ಸುಖಿಯೂ ಆಗಿರುತ್ತಾನೆ.
2. ಎರಡು ಬೆರಳಿನ ಮೇಲೆ ಚಕ್ರವಿದ್ದರೆ ವ್ಯಕ್ತಿ ಸುಂದರನು, ಗುಣಿಯೂ ಮತ್ತು ಆಡಳಿತ ಕಾರ್ಯದಲ್ಲಿ ದಕ್ಷನೂ ಆಗಿರುತ್ತಾನೆ.
3. ಮೂರು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ಧನವಂತ ಉದ್ಯಮಿಯೂ ವಿಲಾಸಿಯೂ ಆಗುತ್ತಾನೆ.
4. ನಾಲ್ಕು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ದರಿದ್ರನಾಗಿರುತ್ತಾನೆ.
5. ಐದು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ಜ್ಞಾನಿಯೂ ವಿಲಾಸಿಯೂ ಆಗಿರುತ್ತಾನೆ.
6. ಆರು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ವ್ಯರ್ಥ ಅಲೆದಾಡುವವನಾಗಿರುತ್ತಾನೆ.
7. ಏಳು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ಪುಣ್ಯಾತ್ಮನೂ, ಸುಖಿಯೂ, ಸಂತುಷ್ಟನೂ ಆಗಿರುತ್ತಾನೆ.
8. ಎಂಟು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ರೋಗಿಯೂ, ವಿದ್ವಾಂಸನೂ, ಚತುರನೂ ಆಗಿರುತ್ತಾನೆ.
9. ಒಂಬತ್ತು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ರಾಜನಂತೆ ಸುಖಪಡುವವನಾಗಿರುತ್ತಾನೆ.
10. ಹತ್ತು ಬೆರಳಿನ ಮೇಲೆ ಚಕ್ರವಿರುವ ವ್ಯಕ್ತಿ ಯೋಗಿಯೂ,

ಶ್ರೀಮಂತನೂ, ಅಲ್ಪಾಯುವೂ ಆಗಿರುತ್ತಾನೆ.

1. ಒಂದು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಅಧ್ಯಯನಶೀಲನೂ, ವೀರನೂ, ಗೌರವ ಪಡೆಯುವವನೂ ಆಗಿರುತ್ತಾನೆ.
2. ಎರಡು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ದರಿದ್ರನೂ ಅಥವಾ ಸನ್ಯಾಸಿಯೂ ಆಗಿರುತ್ತಾನೆ.
3. ಮೂರು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಸ್ತ್ರೀನಾಶಕನು, ವ್ಯರ್ಥ ಭ್ರಮಣ ಮಾಡುವವನೂ, ದರಿದ್ರನೂ ಆಗಿರುತ್ತಾನೆ.
4. ನಾಲ್ಕು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಪ್ರತಾಪಿಯೂ, ಸುಖಿಯೂ ಆಗಿರುತ್ತಾನೆ.
5. ಐದು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ವಿದೇಶ ವಾಸ ಮಾಡುವವನು, ಕೀರ್ತಿ, ಗೌರವ, ಪ್ರತಿಷ್ಠೆ ಪಡೆಯುವವನೂ ಆಗಿರುತ್ತಾನೆ.
6. ಆರು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಗುಣವಂತನು, ಶ್ರೀಮಂತನು, ವಿದ್ವಾಂಸನು, ಸುಖಿಯೂ ಆಗುತ್ತಾನೆ.
7. ಏಳು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ದರಿದ್ರನೂ, ಯಶಸ್ವಿಯೂ ಆಗುತ್ತಾನೆ.
8. ಎಂಟು ಬೆರಳಿನ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ಗುಣಿಯೂ, ಸುಖಿಯೂ ಆಗುತ್ತಾನೆ.
9. ಒಂಬತ್ತು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ದುಃಖಿಯೂ, ರೋಗಿಯೂ, ದರಿದ್ರನೂ ಆಗುತ್ತಾನೆ.
10. ಹತ್ತು ಬೆರಳಿನ ಮೇಲೆ ಶಂಖದ ಚಿಹ್ನೆ ಇದ್ದರೆ ವ್ಯಕ್ತಿ ರಾಜಪೂಜಿತನೂ, ಸದ್ಗುಣಿಯೂ, ಶ್ರೀಮಂತನೂ, ಯಶಸ್ವಿಯೂ ಆಗುತ್ತಾನೆ.

1. ಒಂದು ಬೆರಳಿನ ಮೇಲೆ (ಸಿಂಪಿನ) ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಗುಣವಂತನೂ, ಧನವಂತನೂ, ಯಶಸ್ವಿಯೂ ಆಗುತ್ತಾನೆ.
2. ಎರಡು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಭಾಷಣಕಾರನು, ಧನವಂತನು, ಗೌರವ ಪಡೆಯುವವನು ಆಗಿರುತ್ತಾನೆ.
3. ಮೂರು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಧನವಂತನು, ಯೋಗಿಯೂ ಆಗುತ್ತಾನೆ.

4. ನಾಲ್ಕು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ದರಿದ್ರನಾಗಿರುತ್ತಾನೆ. ಆದರೆ ಸದ್ಗುಣಿಯಾಗಿರುತ್ತಾನೆ.
5. ಐದು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಧನವಂತನು, ಪಂಡಿತನೂ, ಸಫಲನು, ಸಮ್ಮಾನಿತನೂ ಆಗಿರುತ್ತಾನೆ.
6. ಆರು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಯೋಗಿಯೂ, ಶುಭ ಹೊಂದುವವನೂ ಆಗಿರುತ್ತಾನೆ.
7. ಏಳು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ದರಿದ್ರನೂ ಆದರೆ ಸದ್ಗುಣಿಯೂ ಆಗಿರುತ್ತಾನೆ.
8. ಎಂಟು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಶ್ರೀಮಂತನಾಗಿರುತ್ತಾನೆ.
9. ಒಂಬತ್ತು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಗುಣಿಯೂ, ಧನವಂತನೂ, ಸುಖಿಯೂ ಆಗಿರುತ್ತಾನೆ.
10. ಹತ್ತು ಬೆರಳಿನ ಮೇಲೆ ಚಿಪ್ಪಿನ ಚಿಹ್ನೆ ಇದ್ದರೆ ವ್ಯಕ್ತಿ ಯೋಗಿಯೂ, ಧನವಂತನು, ರಾಜಪೂಜಿತನೂ, ಧರ್ಮಾತ್ಮನೂ ಆಗಿರುತ್ತಾನೆ.

### 6. ಸ್ವಾಸ್ತಿಕ

ಸ್ವಾಸ್ತಿಕ ಚಿಹ್ನೆ ಗಣೇಶ ಮತ್ತು ಲಕ್ಷ್ಮಿ ಎಂದು ನಂಬಲಾಗಿದೆ. ಈ ಚಿಹ್ನೆಯಿಂದ ಕೂಡಿರುವ ವ್ಯಕ್ತಿ ಬಹಳ ಶ್ರೀಮಂತನೂ, ಐಶ್ವರ್ಯಸಂಪನ್ನನೂ, ದಯಾಳುವೂ, ಉದ್ಯಮಕುಶಲನೂ, ವೈಭವ ಸಂಪನ್ನನು, ಉಚ್ಚ ಪದಾಧಿಕಾರಿಯು ಆಗುತ್ತಾನೆ. ಈ ವ್ಯಕ್ತಿ ರಾಜನೀತಿ ಕುಶಲಮಂತ್ರಿ, ಜನನಾಯಕ, ಸಂಸ್ಥಾ ಸಂಚಾಲಕ, ಧಾರ್ಮಿಕ, ಧರ್ಮಜ್ಯೋತಿಷಿ, ತಂತ್ರಮಂತ್ರದ ಜ್ಞಾನಿ, ಪುಸ್ತಕ ಹುಳು, ವಿದ್ವಾಂಸರನ್ನು ಗೌರವಿಸುವವನು, ಯಶಸ್ವಿಯೂ ಆಗುತ್ತಾನೆ. ಸ್ತ್ರೀಯರು ವೈಭವ ಸಂಪನ್ನರಾಗುತ್ತಾರೆ.

### 7. ರಥ

ಈ ಚಿಹ್ನೆಯಿಂದ ಸಂಬಂಧಿತ ವ್ಯಕ್ತಿ ಉಚ್ಚ ಮಟ್ಟದ ವಾಹನವನ್ನು ಇಟ್ಟುಕೊಳ್ಳುವವನು, ಧನಧಾನ್ಯ ಸಂಪನ್ನನು, ಪಶುಪಾಲಕನು, ಐಶ್ವರ್ಯಶಾಲಿಯು, ಭೂಮಿ, ಭವನ, ಆಳುಕಾಳುಗಳಿಂದ ಕೂಡಿರುವವನು, ಶಯ್ಯಾಸುಖಯುಕ್ತನು, ಸುಪುತ್ರವಾನನು, ಜ್ಞಾನಿಯು, ಸಜ್ಜನನು, ಜನ ಹಿತೈಷಿಯು, ಒಳ್ಳೆಯ ಮಿತ್ರರಿಂದ ಕೂಡಿರುವವನು, ಶತ್ರು ಬಲನಾಶಕನು ಆಗುತ್ತಾನೆ. ಸ್ತ್ರೀಯ ಕೈಯಲ್ಲಿ ಇಂತಹ ಚಿಹ್ನೆ ಕೀರ್ತಿ,

ವೈಭವ, ಪ್ರತಿಷ್ಠೆಯು ಪ್ರತೀಕವಾಗಿದೆ.

**8. ಕತ್ತಿ**

ಈ ಚಿಹ್ನೆ ಪ್ರಭುತ್ವದ ಪ್ರತೀಕವಾಗಿದೆ. ಇಂತವನು ಅನುಶಾಸನ ಪ್ರಿಯನು, ಅಧಿಕಾರಪ್ರಿಯನು, ಸಾಹಸಿಯು, ನೀತಿ ನಿಪುಣನು, ಕಾನೂನಿನ ರಕ್ಷಕನು ಮತ್ತು ಕಾನೂನು ತಿಳಿದವನು ಆಗಿರುತ್ತಾನೆ. ಇವನಿಗೆ ಎಲ್ಲಾ ಕಡೆ ಗೌರವ ದೊರೆಯುತ್ತದೆ. ಆದರಣೀಯು, ಆಡಳಿತ ಕಾರ್ಯಗಳಲ್ಲಿ ಇವನು ಅತ್ಯಂತ ಸಫಲನಾಗುತ್ತಾನೆ.

**9. ಕಮಂಡಲ**

ಈ ಚಿಹ್ನೆ ಧನ-ಧಾನ್ಯ, ಸಂಪನ್ನತೆಯ ಪ್ರತೀಕವಾಗಿದೆ. ಇಂತಹ ವ್ಯಕ್ತಿ ಪ್ರಭುತ್ವ, ಆತ್ಮನಿರ್ಭರತೆಯ ಧನ ಮತ್ತು ಸಾಧುಸೇವೆ ಮಾಡುವಂತವನಾಗಿರುತ್ತಾನೆ. ಸಾಧು ಸನ್ಯಾಸಿಗಳು, ಯತಿಗಳು, ಪರೋಪಕಾರಿಗಳು, ಮಹಾತ್ಮರು, ಧರ್ಮ ಪ್ರಚಾರಕರು ಮತ್ತು ಧರ್ಮಸಂಸ್ಥೆಗಳ ಸಂಚಾಲಕರಲ್ಲಿ ಈ ಚಿಹ್ನೆ ಇರುತ್ತದೆ. ಇಂತಹ ವ್ಯಕ್ತಿ ಅವಶ್ಯವಾಗಿ ಯಾತ್ರೆ ಮಾಡುತ್ತಾನೆ ಅಥವಾ ಜಲಯಾನ ಮಾಡುತ್ತಾನೆ. ಸ್ತ್ರೀಯ ಕೈಯಲ್ಲಿ ಈ ಚಿಹ್ನೆ ಸೌಭಾಗ್ಯ ಸೂಚಕವಾಗಿದೆ.

**10. ಛತ್ರಿ**

ಸಾಮ್ರಾಜ್ಯ ಅಥವಾ ರಾಜ್ಯಾಧಿಪತ್ಯದ ಪ್ರತೀಕ ಈ ಚಿಹ್ನೆಯಾಗಿದೆ. ಇದು ಶಾಸನಾಧಿಕಾರ ಮತ್ತು ಸ್ವಾಧೀನತೆಯನ್ನು ನೀಡುತ್ತದೆ. ಈ ಚಿಹ್ನೆಯನ್ನು ಹೊಂದಿರುವ ವ್ಯಕ್ತಿ ರಾಷ್ಟ್ರಾಧ್ಯಕ್ಷ, ಪ್ರದೇಶಾಧ್ಯಕ್ಷ ಅಥವಾ ಅನ್ಯ ಉಚ್ಚಪದವಿಯಲ್ಲಿರುತ್ತಾನೆ. ನ್ಯಾಯಾಧೀಶರ ಕೈಗಳಲ್ಲೂ ಇಂತಹ ಚಿಹ್ನೆ ಇರುತ್ತದೆ. ಇಂತಹ ವ್ಯಕ್ತಿಯ ಹೃದಯದಲ್ಲಿ ಧರ್ಮದ ಬಗ್ಗೆ ಶ್ರದ್ಧೆ ಇರುತ್ತದೆ. ಮಹಿಳೆಯರ ಕೈಲಿ ಈ ಚಿಹ್ನೆ ನ್ಯಾಯ ಮತ್ತು ಗೌರವದ ಸೂಚಕವಾಗಿದೆ.

**11. ದೇವಯಾನ**

ಈ ಚಿಹ್ನೆ ಧಾರ್ಮಿಕ ಶ್ರದ್ಧೆ, ಧಾರ್ಮಿಕ ವಿಚಾರದ ಪರಿಚಾಯಕವಾಗಿದೆ. ಇಂತಹ ವ್ಯಕ್ತಿ ಪರಲೋಕ ಸುಧಾರಣೆ ಮಾಡಲು ಎಲ್ಲಾ ಪ್ರಯತ್ನ ಮಾಡುತ್ತಾನೆ. ಯಜ್ಞ, ಹವನ, ಪೂಜಾಪಾಠ, ಕೀರ್ತನೆ, ತಂತ್ರ ಮಂತ್ರ ದಾನ ಮುಂತಾದವುಗಳನ್ನು ಮಾಡುತ್ತಾನೆ. ಪ್ರತಿದಿನ ಧಾರ್ಮಿಕ ಅನುಷ್ಠಾನ ಮಾಡುತ್ತಿರುತ್ತಾನೆ. ಆಗಾಗ್ಗೆ ಬಹುದೂರದ ತೀರ್ಥ

ಯಾತ್ರೆ ಮಾಡುತ್ತಾನೆ. ಪುಣ್ಯ ಕಾರ್ಯಗಳಲ್ಲಿ ಆಸಕ್ತಿ ವಹಿಸುತ್ತಾನೆ. ಇವನು ದೇವಮಂದಿರ, ಜಲಾಶಯಗಳ ನಿರ್ಮಾಣ ಮಾಡಿಸುತ್ತಾರೆ. ಸಾಮಾಜಿಕ, ದೈವಿಕ ಕಾರ್ಯಗಳಲ್ಲಿ ಭಾಗವಹಿಸುತ್ತಾರೆ.

**12. ತ್ರಿಕೋನ**

ಈ ಚಿಹ್ನೆ ವರ್ತುಲದಲ್ಲಿ ಚಿಕ್ಕದಾಗಿ ತ್ರಿಕೋನಾತ್ಮಕವಾಗಿರುತ್ತದೆ. ಈ ಚಿಹ್ನೆ ಕೈಯಲ್ಲಿ ಶುಭವಾದುದೆಂದು ನಂಬಲಾಗಿದೆ.

ತೋರು ಬೆರಳಿನಲ್ಲಿ ಈ ಚಿಹ್ನೆ — ತೋರು ಬೆರಳಿನ ತುದಿ ಒಂದು ವೇಳೆ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ತ್ರಿಕೋನ ಅಥವಾ ತ್ರಿಭುಜದ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಭ್ರಮಣ ಮಾಡುವವನು, ಸಿಂಗಾರ ಪ್ರಿಯನು, ದರ್ಪ ತೋರುವವನು ಮತ್ತು ಮನೋರಂಜನೆ ಹಾಗೂ ಭೋಗಕ್ಕಾಗಿ ಮನಸೋ ಇಚ್ಛೆ ಖರ್ಚು ಮಾಡುವವನೂ ಆಗಿರುತ್ತಾನೆ. ತನ್ನ ಜೀವನದಲ್ಲಿ ಚೆನ್ನಾಗಿ ಶಯ್ಯಾ ಸುಖವನ್ನು ಪಡೆಯುತ್ತಾನೆ. ಒಂದು ವೇಳೆ ಬೆರಳಿನ ತುದಿ ಉದ್ದ ತುದಿಯಾಗಿದ್ದರೆ ಪುಸ್ತಕಗಳ ಮೇಲೆ, ಪಠನ, ಪಾಠನಕ್ಕೆ, ಯಾತ್ರೆಗೆ ಅವಶ್ಯಕತೆಗಿಂತ ಹೆಚ್ಚು ಖರ್ಚು ಮಾಡುತ್ತಾನೆ. ಒಂದು ವೇಳೆ ಬೆರಳಿನ ತುದಿ ಚಪ್ಪಟೆಯಾಗಿದ್ದರೆ ಮತ್ತು ಅದರ ಮೇಲೆ ಈ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಬೇಟೆ, ಶಸ್ತ್ರಾಸ್ತ್ರ ಯುದ್ಧ ಮತ್ತು ಪ್ರಾಚೀನ ವಸ್ತುಗಳ ಸಂಗ್ರಹಕ್ಕಾಗಿ ಹೆಚ್ಚು ಖರ್ಚು ಮಾಡುತ್ತಾನೆ. ಒಂದು ವೇಳೆ ಬೆರಳಿನ ತುದಿ ಗುಂಡಾಗಿ ತುಂಬಿಕೊಂಡಿರುವಂತಿದ್ದರೆ ಮತ್ತು ಅದರ ಮೇಲೆ ಈ ಚಿಹ್ನೆ ಇದ್ದರೆ ವ್ಯಕ್ತಿ ಗೆಳತನ, ಶರಾಬು ಮತ್ತು ಬರುವ ಸಮಾರಂಭಗಳಿಗೆ, ಊಟ ತಿಂಡಿಗಳಿಗೆ ಬಹಳ ಖರ್ಚು ಮಾಡುತ್ತಾನೆ.

ಒಂದು ವೇಳೆ ಬೆರಳು ಗೌರವ ಪೂರ್ಣ ಹಗುರ ಗುಲಾಬಿಯಾಗಿದ್ದರೆ ಆ ವ್ಯಕ್ತಿಗೆ ಪ್ರಶಂಸೆ ದೊರೆಯುತ್ತದೆ. ಒಂದು ವೇಳೆ ಹಳದಿ ವರ್ಣದಿಂದ ಕೂಡಿದ್ದರೆ ಅಪಕೀರ್ತಿ ಪ್ರಾಪ್ತವಾಗುತ್ತದೆ.

1. ಊರ್ಧ್ವ – ಇದು ಉಚ್ಚತೆಯ ಪ್ರತೀಕವಾಗಿದೆ.

2. ಅಧಃ – ಕೆಳಮಟ್ಟದ ಜನಗಳೊಡನೆ ಸಂಪರ್ಕದ ಪ್ರತೀಕವಾಗಿದೆ.

3. ಎಡ – ಅಪಕೀರ್ತಿ

4. ದಕ್ಷಿಣ – ಹೆಚ್ಚು ಪರಿಶ್ರಮದಿಂದ ಗೌರವ ಪ್ರಾಪ್ತವಾಗುತ್ತದೆ.

**ಮಧ್ಯದ ಬೆರಳಿನಲ್ಲಿ ಈ ಚಿಹ್ನೆ —** ಮಧ್ಯದ ಬೆರಳಿನ ತುದಿ ಗೋಲಾಕಾರವಾಗಿದ್ದು ಅದರ ಮೇಲೆ ತ್ರಿಕೋನದ ಚಿಹ್ನೆ ಇದ್ದರೆ ವ್ಯಕ್ತಿ ಅನಾಯಾಸವಾಗಿ, ಆಕಸ್ಮಿಕವಾಗಿ ಲಾಭ ಪ್ರಾಪ್ತಿ ಮಾಡಿಕೊಳ್ಳುತ್ತಾನೆ.

ಬೆರಳಿನ ತುದಿ ಒಂದು ವೇಳೆ ಉದ್ದವಾಗಿದ್ದರೆ ವ್ಯಕ್ತಿ ದೇಶ ವಿದೇಶಗಳ ಪರ್ಯಟನೆ ಮಾಡಿ ಹಣ ಸಂಪಾದಿಸುತ್ತಾನೆ. ಒಂದು ವೇಳೆ ಬೆರಳಿನ ತುದಿ ಚಪ್ಪಟೆಯಾಗಿದ್ದರೆ ವ್ಯಕ್ತಿಗೆ ಜೂಜಿನಿಂದ ಭಾಗ್ಯೋದಯವಾಗುತ್ತದೆ. ಗೋಲಾಕಾರದ ತುಂಬಿರುವ ಬೆರಳಿನ ತುದಿ ಇದ್ದರೆ ವ್ಯಕ್ತಿಗೆ 32 ವರ್ಷದ ನಂತರವೇ ಭಾಗ್ಯೋದಯವಾಗುತ್ತದೆ.

ಒಂದು ವೇಳೆ ಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ವ್ಯಕ್ತಿ ದಾನವೀರನಾಗಿರುತ್ತಾನೆ. ಕೆಂಪು ಬಣ್ಣವಾಗಿದ್ದರೆ ವ್ಯಕ್ತಿ ಯಾತ್ರೆ ಮತ್ತು ಭ್ರಮಣಕ್ಕಾಗಿ ಹಣ ವೆಚ್ಚ ಮಾಡುತ್ತಾನೆ. ಒಂದು ವೇಲೆ ಹಳದಿ ಬಣ್ಣವಾಗಿದ್ದರೆ ವ್ಯಕ್ತಿ ಔಷಧೋಪಚಾರಗಳಿಗೆ, ಚಿಕಿತ್ಸೆಗಳಿಗೆ ಹಣ ವೆಚ್ಚ ಮಾಡುತ್ತಾನೆ.

ಒಂದು ವೇಳೆ ಊರ್ಧ್ವ ತ್ರಿಕೋನವಿದ್ದರೆ ಭಾಗ್ಯೋದಯ ಪ್ರಾರಂಭದಲ್ಲೇ ಆಗುತ್ತದೆ. ಒಂದು ವೇಳೆ ದಕ್ಷಿಣದ ತ್ರಿಕೋನವಿದ್ದರೆ ಯುವಾವಸ್ಥೆಯಲ್ಲಿ ವ್ಯಕ್ತಿಯ ಭಾಗ್ಯೋದಯವಾಗುತ್ತದೆ. ಒಂದು ವೇಳೆ ಅಧಃ ತ್ರಿಕೋನವಿದ್ದರೆ ವ್ಯಕ್ತಿಗೆ 36 ವರ್ಷದ ನಂತರ ಸಾಕಷ್ಟು ತೊಂದರೆಗಳನ್ನು ಅನುಭವಿಸಿದ ಮೇಲೆ ಭಾಗ್ಯೋದಯವಾಗುತ್ತದೆ. ಒಂದು ವೇಳೆ ಎಡ ತ್ರಿಕೋನವಿದ್ದರೆ ವ್ಯಕ್ತಿಗೆ ವೃದ್ಧಾವಸ್ಥೆಯಲ್ಲಿ ಭಾಗ್ಯೋದಯವಾಗುತ್ತದೆ.

**ಉಂಗುರದ ಬೆರಳಿನಲ್ಲಿ ಈ ಚಿಹ್ನೆ** — ಒಂದು ವೇಳೆ ಉಂಗುರದ ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ತ್ರಿಕೋನದ ಚಿಹ್ನೆ ಇದ್ದರೆ ವ್ಯಕ್ತಿಗೆ ಭವ್ಯ ವಾಹನ ಸುಖಪ್ರಾಪ್ತವಾಗುತ್ತದೆ. ಒಂದು ವೇಳೆ ಉದ್ದನೆಯ ತುದಿ ಇದ್ದರೆ ಸಾಮಾನ್ಯ ವಾಹನದ ಪ್ರಾಪ್ತಿ ವ್ಯಕ್ತಿಗೆ ಆಗುತ್ತದೆ. ಚಪ್ಪಟೆ ಮತ್ತು ಕೂತಿರುವ ತುದಿ ಇದ್ದರೆ ವ್ಯಕ್ತಿಗೆ ಉಚ್ಚಮಟ್ಟದ ವಾಹನ ಅವಶ್ಯವಾಗಿ ಪ್ರಾಪ್ತವಾಗುತ್ತದೆ. ಗೋಲಾಕಾರದ ತುಂಬಿಕೊಂಡಿರುವ ತುದಿ ಇದ್ದರೆ ವ್ಯಕ್ತಿ ಬೇರೆಯವರ ವಾಹನದ ಐಶ್ವರ್ಯ ಭೋಗಿಸುತ್ತಾನೆ.

ಒಂದು ವೇಳೆ ಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ಮತ್ತು ಅದರ ಮೇಲೆ ತ್ರಿಕೋನದ ಚಿಹ್ನೆ ಇದ್ದರೆ ವ್ಯಕ್ತಿಗೆ ಲಾಭ ಉಂಟಾಗುತ್ತದೆ. ಕೆಂಪು ಬಣ್ಣದ ಬೆರಳಿದ್ದರೆ ವ್ಯಕ್ತಿ ವಾಹನ ಕಳ್ಳನಾಗುತ್ತಾನೆ. ಹಳದಿ ಬಣ್ಣದ ಬೆರಳು ವಾಹನ ಸುಖದಲ್ಲಿ ನ್ಯೂನತೆಯನ್ನು ನೀಡುತ್ತದೆ.

ಒಂದು ವೇಳೆ ಊರ್ಧ್ವ ತ್ರಿಕೋನವಿದ್ದರೆ ತಾಯಿಯ ಕಡೆಯವರಿಂದ ಧನ ಮತ್ತು ಸರ್ವಸುಖ ಪ್ರಾಪ್ತವಾಗುತ್ತದೆ. ಒಂದು ವೇಳೆ ಅಧಃ ಚಿಹ್ನೆ

ಇದ್ದರೆ ತಾಯಿಯಿಂದ ಲಾಭವಾಗುತ್ತದೆ. ಒಂದು ವೇಳೆ ಎಡ ತ್ರಿಕೋನವಿದ್ದರೆ ಪತ್ನಿಯ ಕಡೆಯವರಿಂದ ಲಾಭವಾಗುತ್ತದೆ. ದಕ್ಷಿಣ ತ್ರಿಕೋನವಿದ್ದರೆ ತಂದೆಯ ಹಣ ದೊರೆಯುತ್ತದೆ.

**ಕಿರುಬೆರಳಿನ ಮೇಲೆ ಈ ಚಿಹ್ನೆ —** ಒಂದು ವೇಳೆ ಕಿರು ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ತ್ರಿಭುಜದ ಚಿಹ್ನೆ ಇದ್ದರೆ ವ್ಯಕ್ತಿ ಇಷ್ಟಪಟ್ಟರೂ ಸಹ ಸಹೋದರರಿಂದ ಮತ್ತು ತಾಯಿಯ ಕಡೆಯವರಿಂದ ಲಾಭ ಪಡೆಯಲಾಗುವುದಿಲ್ಲ. ಒಂದು ವೇಳೆ ಬೆರಳಿನ ತುದಿ ಉದ್ದವಾಗಿದ್ದರೆ ಏಳ್ಗೆ ಮತ್ತು ಧನೋಪಾರ್ಜನೆಯಲ್ಲಿ ಪರಿವಾರ ಮತ್ತು ಕುಟುಂಬದ ಜನರು ಸಹಾಯಕರಾಗುವುದಿಲ್ಲ. ಒಂದು ವೇಳೆ ತುದಿ ಚಪ್ಪಟೆಯಾಗಿ ಕುಳಿತುಕೊಂಡಿರುವಂತಿದ್ದರೆ ಅಂತಹ ವ್ಯಕ್ತಿಯ ಲಾಲನೆ ಪಾಲನೆ ತಾಯಿಯು ಮಾಡದೇ ಅನ್ಯರೇ ಮಾಡುತ್ತಾರೆ. ಒಂದು ವೇಳೆ ತುದಿ ಗುಂಡಾಗಿ ತುಂಬುಕೊಂಡಿದ್ದರೆ ಮತ್ತು ಅದರ ಮೇಲೆ ತ್ರಿಕೋನ ಚಿಹ್ನೆ ಇದ್ದರೆ ವ್ಯಕ್ತಿಗೆ ಸಹೋದರಿ ಲಾಭವನ್ನು ಗಳಿಸುವುದಕ್ಕೆ ಸಹಾಯಕಳಾಗುತ್ತಾಳೆ.

ಊರ್ಧ್ವ ಮುಖ ತ್ರಿಭುಜವಿದ್ದರೆ ಗೌರವದಿಂದ ವ್ಯಕ್ತಿ ಜೀವನ ನಡೆಸುತ್ತಾನೆ. ಅಧಃಮುಖ ತ್ರಿಭುಜವಿದ್ದರೆ ವ್ಯಕ್ತಿಗೆ ಜೀವನದಲ್ಲಿ ಬಾರಿ ಬಾರಿಗೂ ಅಪಮಾನವನ್ನು ಸಹಿಸಬೇಕಾಗುತ್ತದೆ. ಎಡ ತ್ರಿಭುಜ ಇದ್ದರೆ ವ್ಯಕ್ತಿ ಜೀವನದಲ್ಲಿ ಅತ್ಯಲ್ಪ ಕೀರ್ತಿಯನ್ನು ಗಳಿಸುತ್ತಾನೆ. ದಕ್ಷಿಣ ತ್ರಿಭುಜವಿದ್ದರೆ ವ್ಯಕ್ತಿಯ ಜೀವನ ಪೂರ್ಣ ಸುಖದಿಂದ ಕೀರ್ತಿಮಯವಾಗಿ ಸಾಗುತ್ತದೆ.

ಒಂದು ವೇಳೆ ಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ವ್ಯಕ್ತಿಗೆ ಶ್ರೇಷ್ಠ ಲಾಭ ಉಂಟಾಗುತ್ತದೆ. ಕೆಂಪು ಬಣ್ಣವಾಗಿದ್ದರೆ ವ್ಯಕ್ತಿಯ ಜೀವನ ಮಧ್ಯಮ ಲಾಭವಾಗುತ್ತದೆ. ಹಳದಿ ಬಣ್ಣದ್ದಾಗಿದ್ದರೆ ವ್ಯಕ್ತಿಗೆ ಸಾಮಾನ್ಯ ಲಾಭ ಪ್ರಾಪ್ತವಾಗುತ್ತದೆ.

**ಹೆಬ್ಬೆರಳಿನ ಮೇಲೆ ತ್ರಿಕೋನ ಚಿಹ್ನೆ —** ಒಂದು ವೇಳೆ ಹೆಬ್ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ತ್ರಿಭುಜದ ಚಿಹ್ನೆ ಇದ್ದರೆ ವ್ಯಕ್ತಿಗೆ ಶ್ರೇಷ್ಠಮಟ್ಟದ ಮತ್ತು ಉಚ್ಚಮಟ್ಟದ ಶಿಕ್ಷಣ ಪ್ರಾಪ್ತವಾಗುತ್ತದೆ. ಒಂದು ವೇಳೆ ಉದ್ದನೆಯ ಹೆಬ್ಬೆರಳಿದ್ದರೆ ಆ ವ್ಯಕ್ತಿ ಜ್ಯೋತಿಷ್ಯ ಹೇಳುವುದರಿಂದ ಅಥವಾ ವೈದ್ಯಕೀಯ ವೃತ್ತಿಯಿಂದ ಹಣ ಮತ್ತು ಪ್ರಸಿದ್ಧಿಯನ್ನು ಪಡೆಯುತ್ತಾನೆ. ಒಂದು ವೇಳೆ ಚಪ್ಪಟೆಯಾದ

ಕೂತಿರುವ ಹೆಬ್ಬೆರಳಿದ್ದರೆ ವ್ಯಕ್ತಿಗೆ ವಿದ್ಯೆಯ ಲಾಭವಾಗುವುದಿಲ್ಲ. ಒಂದು ವೇಳೆ ಗೋಲಾಕಾರದ ತುಂಬಿರುವ ಹೆಬ್ಬೆರಳಿದ್ದರೆ ವ್ಯಕ್ತಿ ಬಾರಿ ಬಾರಿಗೂ ಶಿಕ್ಷಣದಲ್ಲಿ ಅಸಫಲನಾಗುತ್ತಾನೆ.

ಒಂದು ವೇಳೆ ಹೆಬ್ಬೆರಳಿನ ಬಣ್ಣ ಕೆಂಪಾಗಿದ್ದರೆ ವ್ಯಕ್ತಿ ಸಾಮಾನ್ಯ ವಿದ್ಯೆಯನ್ನು ಪಡೆಯುತ್ತಾನೆ. ಒಂದು ವೇಳೆ ಹಳದಿಯಾಗಿದ್ದರೆ ವ್ಯಕ್ತಿ ಅಲ್ಪ ವಿದ್ಯೆಯನ್ನು ಗಳಿಸುತ್ತಾನೆ. ಗುಲಾಬಿ ಬಣ್ಣದ್ದಾಗಿದ್ದರೆ ವ್ಯಕ್ತಿ ಉಚ್ಚ ಶಿಕ್ಷಣ ಪಡೆಯುತ್ತಾನೆ.

ಒಂದು ವೇಳೆ ಹೆಬ್ಬೆರಳಿನ ಮೇಲೆ ಊರ್ಧ್ವ ತ್ರಿಕೋನವಿದ್ದರೆ ವ್ಯಕ್ತಿ ದೇಶವಿದೇಶಗಳಲ್ಲಿ ಅಕ್ಷಯ ಕೀರ್ತಿ ಪಡೆಯುತ್ತಾನೆ. ಅಧಃಮುಖ ತ್ರಿಕೋನವಿದ್ದರೆ ವ್ಯಕ್ತಿ ಸುಖಮಯ ಜೀವನವನ್ನು ಸಾಗಿಸುತ್ತಾನೆ. ಎಡ ತ್ರಿಕೋನವಿದ್ದರೆ ವ್ಯಕ್ತಿಗೆ ಆನಂದ ನೀಡುತ್ತದೆ. ದಕ್ಷಿಣ ತ್ರಿಕೋನವಿದ್ದರೆ ವ್ಯಕ್ತಿಗೆ ಧನ, ಕೀರ್ತಿ, ಗೌರವ ಎಲ್ಲಾ ಪ್ರಾಪ್ತವಾಗುತ್ತದೆ.

### 13. ದೋಣಿ

ದೋಣಿಯ ಚಿಹ್ನೆ ಸಮುದ್ರಯಾತ್ರೆಯ ಪರಿಚಯ ನೀಡುತ್ತದೆ. ಇಂತಹ ವ್ಯಕ್ತಿ ಜೀವನದಲ್ಲಿ ಅನೇಕ ಬಾರಿ ಸಮುದ್ರ ಯಾತ್ರೆ ಮಾಡುತ್ತಾನೆ. ವಿದೇಶದಲ್ಲೂ ವ್ಯಾಪಾರ ಮಾಡಿ ಹಣ ಸಂಪಾದಿಸುತ್ತಾನೆ. ಒಂದು ವೇಳೆ ಈ ಚಿಹ್ನೆಯ ಜೊತೆಯಲ್ಲಿ ಯಾತ್ರೆ ಸಬಲವಾಗಿ ಮತ್ತು ಶುಭ್ರವಾಗಿದ್ದರೆ ಹಣ ಸಂಪಾದನೆಯ ಜೊತೆಯಲ್ಲಿ ಐಶ್ವರ್ಯ ಲಾಭವೂ ಸಹ ಆಗುತ್ತದೆ. ದೇಶ ವಿದೇಶಗಳಲ್ಲಿ ಈ ವ್ಯಕ್ತಿಯ ಅನೇಕ ಮಿತ್ರರು ಮತ್ತು ಇವನನ್ನು ಇಷ್ಟಪಡುವವರು ಇರುತ್ತಾರೆ.

### 14. ವಜ್ರ

ವಜ್ರದ ಚಿಹ್ನೆ ಪ್ರಭುತ್ವದ ಮತ್ತು ಪ್ರಮುಖತೆಯ ಪ್ರತೀಕವಾಗಿದೆ. ಇಂತಹ ಚಿಹ್ನೆ ಇರುವ ವ್ಯಕ್ತಿ ಪ್ರಭುತ್ವವನ್ನು ಮತ್ತು ಅಧಿಕಾರವನ್ನು ಎಲ್ಲಾ ಕಡೆ ಇಟ್ಟುಕೊಂಡಿರುತ್ತಾನೆ. ಇಂಥವನನ್ನು ಎದುರಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಇವನಿಗೆ ಎಲ್ಲಾ ಕಡೆ ಕೀರ್ತಿ ಮತ್ತು ಆದರ ದೊರೆಯುತ್ತದೆ. ಆಡಳಿತ ಯೋಗ್ಯತೆ, ವೀರತ್ವ, ಬಾಹುಬಲದ ಪ್ರಭುತ್ವ ಈ ವ್ಯಕ್ತಿಗೆ ಇರುತ್ತದೆ. ಈ ವ್ಯಕ್ತಿ ಅನುಶಾಸನ ಪೂರ್ತಿ ಮಾಡಲು ಏನನ್ನು ಬೇಕಾದರೂ ಮಾಡಲು ಸಿದ್ಧನಿರುತ್ತಾನೆ.

### 15. ಮೀನು

ಕೈನಲ್ಲಿ ಮೀನಿನಂತೆ ಎರಡು ಚಿಹ್ನೆಗಳಿದ್ದರೆ ವ್ಯಕ್ತಿ ದಾನವೀರನಾಗಿ ಪ್ರತಿದಿನ ಅನ್ನದಾನ ಮಾಡುತ್ತಾನೆ ಅಥವಾ ಅನ್ನಕ್ಷೇತ್ರದ ವ್ಯವಸ್ಥೆ ಅಥವಾ ಯಜ್ಞದ ಕಾರ್ಯ ಮಾಡುವವನಾಗಿರುತ್ತಾನೆ. ಒಂದು ವೇಳೆ ಕೈನಲ್ಲಿ ಮೀನಿನ ಬಾಲದಂತೆ ಚಿಹ್ನೆ ಇದ್ದರೆ ವ್ಯಕ್ತಿ ವಿದ್ವಾಂಸನೂ ಮತ್ತು ವಿದ್ವಾಂಸರಿಂದ ಪ್ರಶಂಸಿಸಲ್ಪಡುವವನೂ, ಬುದ್ಧಿವಂತನೂ ಹಾಗೂ ಜ್ಞಾನಿಯೂ ಆಗುತ್ತಾನೆ.

**16. ಕಿರೀಟ**

ಈ ಚಿಹ್ನೆ ಶಕ್ತಿಸಾಮರ್ಥ್ಯದ, ಅಧಿಕಾರದ, ಅನುಶಾಸನದ, ವ್ಯವಸ್ಥೆಯ, ಧನ ಮತ್ತು ಐಶ್ವರ್ಯದ ಪ್ರತೀಕವಾಗಿದೆ. ಈ ವ್ಯಕ್ತಿ ವೈಭವ ಸಂಪನ್ನನು, ಧನ, ಧಾನ್ಯ, ವಸ್ತ್ರಾಭೂಷಣ, ಭೂಮಿ, ಭವನ, ವಾಹನ, ಪಶು ಮುಂತಾದವುಗಳಿಂದ ಕೂಡಿದವನೂ ಆಗುತ್ತಾನೆ. ಈ ಚಿಹ್ನೆ ಉಚ್ಚ ಶಾಸನಾಧಿಕಾರಿಗಳ ಕೈಗಳಲ್ಲಿರುತ್ತವೆ. ಇಂತಹ ಜನರು ಧಾರ್ಮಿಕರು, ಪರೋಪಕಾರಿಗಳು, ವೀರರು, ನ್ಯಾಯಪ್ರಿಯರು, ನಿಷ್ಠಾವಂತರು, ಜನ ಹಿತೈಷಿಗಳು ಆಗಿರುತ್ತಾರೆ. ಈ ಚಿಹ್ನೆ ಇರುವ ಸ್ತ್ರೀಯೂ ಸಹ ಸುಖವೈಭೋಗ ಸಂಪನ್ನಳಾಗಿರುತ್ತಾಳೆ.

**17. ಹವನ ಪೀಠ**

ಇಂತಹ ಚಿಹ್ನೆ ಇರುವ ವ್ಯಕ್ತಿ ಅಗ್ನಿಹೋತ್ರಿಯಾಗುತ್ತಾನೆ.

**18. ದಂಡಕ**

ಈ ಚಿಹ್ನೆ ಇರುವ ವ್ಯಕ್ತಿ ಮಹಾ ಶಕ್ತಿವಂತನಾಗಿರುತ್ತಾನೆ. ದಂಡಕ ನ್ಯಾಯ ಮತ್ತು ಅನುಶಾಸನದ ಪ್ರತೀಕವಾಗಿದೆ. ಇಂತಹ ವ್ಯಕ್ತಿಯ ಆಸಕ್ತಿ ಆಧ್ಯಾತ್ಮದ ಕಡೆಗೆ ತಿರುಗುವಂತೆ ಈ ಚಿಹ್ನೆ ಮಾಡುತ್ತದೆ. ಇಂತಹ ವ್ಯಕ್ತಿ ಅನುಶಾಸನ ಹೀನತೆಯಿಂದ, ಮೋಸ ವಂಚನೆಯಿಂದ ದೂರವಿರುತ್ತಾನೆ. ಇಂತಹ ವ್ಯಕ್ತಿ ಗೃಹಸ್ಥ ಜೀವನದ ಗೊಂದಲದಲ್ಲಿ ಸಿಕ್ಕಿಕೊಳ್ಳಲು ಬಯಸುವುದಿಲ್ಲ. ಇವನ ಸ್ವಭಾವ ವೈರಾಗ್ಯದ ಕಡೆಗೆ ನಿರಂತರ ಸಾಗುತ್ತಿರುತ್ತದೆ. ನ್ಯಾಯಾಧೀಶರ ಕೈಗಳಲ್ಲಿ ಈ ಚಿಹ್ನೆ ಇರುತ್ತದೆ.

**19. ಧ್ವಜ**

ಕೀರ್ತಿಯ ಪತಾಕೆಯನ್ನು ಹಾರಿಸುವ ಧ್ವಜ ಚಿಹ್ನೆ ವ್ಯಕ್ತಿಯನ್ನು ಮೇಲಕ್ಕೆ ಕೊಂಡೊಯ್ಯುತ್ತದೆ. ಈ ವ್ಯಕ್ತಿ ಉತ್ಕೃಷ್ಟತೆಯ ಪ್ರತೀಕನು, ಧಾರ್ಮಿಕ ಭಾವನೆಗಳಿಂದ ಕೂಡಿರುವವನು, ವಿವೇಕಪೂರ್ಣ ನಿರ್ಣಯ

ತೆಗೆದುಕೊಳ್ಳುವವನು, ಬುದ್ಧಿಸಾಗರನು, ನೈತಿಕತೆಯು ಗಣಿಯೂ, ಪಾರಿವಾರಿಕ ಕುಲಕೀರ್ತಿಯನ್ನು ಅಕ್ಷಯಗೊಳಿಸುವವನೂ ಆಗಿರುತ್ತಾನೆ. ಇಂತಹ ವ್ಯಕ್ತಿ ಜೀವನದಲ್ಲಿ ತನ್ನ ಕ್ಷೇತ್ರದಲ್ಲಿ ಮೇಲ್ಮಟ್ಟದ ಪದವಿಯನ್ನು ಪಡೆದುಕೊಳ್ಳುತ್ತಾನೆ.

## 20. ಹಲ್ಲುಗಳು

ಬೆರಳುಗಳ ಮೇಲೆ ಹಲ್ಲುಗಳ ಚಿಹ್ನೆಯನ್ನು ಸ್ಪಷ್ಟವಾಗಿ ಕಾಣಬಹುದು. ಒಂದು ವರ್ತುಲದಲ್ಲಿ ಗರಗಸದಂತೆ ಹಲ್ಲುಗಳಿರುತ್ತವೆ ಇದನ್ನೇ ಹಲ್ಲುಗಳೆಂದು ಗುರುತಿಸಲಾಗುವುದು.

ಹಲ್ಲುಗಳೂ ಸಹ ಊರ್ಧ್ವ, ಅಧಃ, ಎಡ ಮತ್ತು ದಕ್ಷಿಣಾವೃತವಾಗಿರುತ್ತದೆ.

ತೋರು ಬೆರಳಿನ ಮೇಲೆ ಹಲ್ಲಿನ ಚಿಹ್ನೆ — ತೋರು ಬೆರಳಿನ ತುದಿ ಒಂದು ವೇಳೆ ಗೋಲಾಕಾರವಾಗಿದ್ದು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿ ಅನೇಕ ಆಲೋಚನೆ ಮಾಡುವವನಾಗುತ್ತಾನೆ. ಆದರೆ ಇವನು ಎದುರಿಗೆ ಬರದೆ ಹಿಂದೆಯೇ ಆಲೋಚನೆ ಮತ್ತು ನಿಂದೆಯನ್ನು ಮಾಡುತ್ತಾನೆ. ಇವರು ಎಚ್ಚರದಿಂದಿರಬೇಕು.

ತೋರು ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಸಮಾಜದ ರೂಢಿಗಳನ್ನು ಸಹಜವಾಗಿ ವಿರೋಧಿಸುತ್ತಾನೆ ಮತ್ತು ಬೌದ್ಧಿಕ ಕಾರ್ಯ ಮಾಡುವವರಿಂದ ವೈರತ್ವ ಮತ್ತು ಶತ್ರುತ್ವ ಕಟ್ಟಿಕೊಳ್ಳುತ್ತಾನೆ.

ಒಂದು ವೇಳೆ ತೋರು ಬೆರಳಿನ ತುದಿ ಚಪ್ಪಟೆಯಾಗಿ ಕುಳಿತುಕೊಂಡಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿಗೆ ಕೆಳಮಟ್ಟದ ಜನಗಳೊಂದಿಗೆ ವಿರೋಧ, ಶತ್ರುತ್ವ ಉಂಟಾಗುತ್ತದೆ.

ಬೆರಳಿನ ತುದಿ ಗೋಲಾಕಾರವಾಗಿ ತುಂಬಿಕೊಂಡಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿ ಉಚ್ಚ ಅಧಿಕಾರಿಗಳೊಂದಿಗೆ ಶತ್ರುತ್ವ ಕಟ್ಟಿಕೊಂಡು ಅಜ್ಞಾತ ತೊಂದರೆಗಳಿಂದ ಸುತ್ತುವರೆಯಲ್ಪಡುತ್ತಾನೆ.

ಈ ಚಿಹ್ನೆ ಊರ್ಧ್ವಮುಖವಾಗಿದ್ದರೆ ವ್ಯಕ್ತಿ ಸಾಹಸಿಯೂ, ನಿರ್ಭಯನೂ ಆಗಿರುತ್ತಾನೆ.

ಹಲ್ಲುಗಳು ಅಧೋಮುಖವಾಗಿದ್ದರೆ ವ್ಯಕ್ತಿ ವಿರೋಧದ ರೂಪದಲ್ಲೇ ಜೀವನ ನಡೆಸುತ್ತಾನೆ.

ಹಲ್ಲುಗಳು ಎಡಮುಖವಾಗಿದ್ದರೆ ವ್ಯಕ್ತಿ ವ್ಯರ್ಥ ಶತ್ರುತ್ವ

ಕಟ್ಟಿಕೊಳ್ಳುತ್ತಾನೆ. ದಕ್ಷಿಣದ ಕಡೆಗೆ ಈ ಚಿಹ್ನೆ ಇದ್ದರೆ ಜನಸಾಮಾನ್ಯರೊಂದಿಗೆ ಈ ವ್ಯಕ್ತಿಯ ವಿರೋಧವಿರುತ್ತದೆ.

ಈ ಚಿಹ್ನೆ ಗುಲಾಬಿ ಬಣ್ಣದ್ದಾಗಿದ್ದರೆ ಶತ್ರುಗಳಿರುತ್ತಾರೆ ಆದರೆ ಅವರಿಂದ ಏನೂ ನಷ್ಟವಾಗುವುದಿಲ್ಲ. ಈ ಚಿಹ್ನೆ ಕೆಂಪು ಬಣ್ಣದ್ದಾಗಿದ್ದರೆ ಶತ್ರು ವ್ಯಕ್ತಿಯ ಎದುರಿಗೆ ಬರಲು ಭಯಪಡುತ್ತಾನೆ. ಈ ಚಿಹ್ನೆ ಹಳದಿ ಬಣ್ಣಕ್ಕಿದ್ದರೆ ವ್ಯಕ್ತಿಗೆ ಹಾನಿ ಉಂಟಾಗುತ್ತದೆ.

**ಮಧ್ಯದ ಬೆರಳಿನ ಮೇಲೆ ಹಲ್ಲಿನ ಚಿಹ್ನೆ —** ಒಂದು ವೇಳೆ ಮಧ್ಯದ ಬೆರಳಿನ ತುದಿ ದಪ್ಪವಾಗಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿಗೆ ಕುಟುಂಬದ ಜನ, ಪರಿವಾರದ ಜನ, ಸಹೋದರರು ಕೊನೆಗೆ ಸಂತಾನವೂ ಸಹ ಮೋಸ ಮಾಡುತ್ತಾರೆ.

ಒಂದು ವೇಳೆ ಮಧ್ಯದ ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿ ಅಪರಾಧ ಮಾಡಿ ಜೈಲಿಗೆ ಹೋಗುತ್ತಾನೆ. ರಾಜ್ಯ ಪಕ್ಷದಲ್ಲಿ ಸಂಘರ್ಷ ಮತ್ತು ಜೀವನ ಕಟುವಾಗಿ ಇರುತ್ತದೆ.

ಒಂದು ವೇಳೆ ಮಧ್ಯದ ಬೆರಳಿನ ತುದಿ ಚಪ್ಪಟೆಯಾಗಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ಮತ್ತು ತುದಿ ಕುಳಿತುಕೊಂಡಂತೆ ಇದ್ದರೆ ವ್ಯಕ್ತಿ ಅತ್ಯಂತ ಕೆಳಮಟ್ಟದವನು ಮತ್ತು ಅಪರಾಧಿ ವೃತ್ತಿಯವನಾಗುತ್ತಾನೆ.

ಮಧ್ಯದ ಬೆರಳಿನ ತುದಿ ಗೋಲಾಕಾರವಾಗಿ ತುಂಬಿಕೊಂಡಿದ್ದರೆ ಅಂತಹ ವ್ಯಕ್ತಿಯ ಅಧಿಕಾಂಶ ಜೀವನದ ಸಮಯ ಮಿತ್ರರಿಗೆ ಖರ್ಚು ಮಾಡುವುದೇ ಆಗಿರುತ್ತದೆ.

ಬೆರಳು ಗುಲಾಬಿ ಬಣ್ಣವಿದ್ದರೆ ಶತ್ರುನಾಶ ಮಾಡುವವನಾಗಿರುತ್ತಾನೆ. ಬೆರಳು ಕೆಂಪು ಬಣ್ಣವಿದ್ದರೆ ಜೀವನ ಸಂಘರ್ಷಮಯವಾಗಿರುತ್ತದೆ. ಬೆರಳು ಹಳದಿ ಬಣ್ಣವಿದ್ದರೆ ವ್ಯಕ್ತಿಗೆ ಪರಾಜಯ ಉಂಟಾಗುತ್ತದೆ.

ಊರ್ಧ್ವಮುಖ ಹಲ್ಲು ಶತ್ರುಗಳ ಮೇಲೆ ವಿಜಯ ನೀಡುತ್ತದೆ. ಅಧಃ ಮುಖ ಹಲ್ಲು ಭಯದಿಂದ ಕೂಡಿರುವಂತೆ ಮಾಡುತ್ತದೆ. ಎಡಮುಖ ಹಲ್ಲು ಅಪರಾಧ ಮಾಡಿಸುತ್ತದೆ. ದಕ್ಷಿಣ ಮುಖ ಹಲ್ಲು ಶತ್ರುಗಳಿಂದ ಸೋಲುವಂತೆ ಮಾಡುತ್ತದೆ.

**ಉಂಗುರದ ಬೆರಳಿನ ಮೇಲೆ ಹಲ್ಲಿನ ಚಿಹ್ನೆ —** ಒಂದು ವೇಳೆ ಉಂಗುರದ ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ

ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿ ದೇವರ ಅವಕೃಪೆಯಿಂದ ಪೀಡಿತನಾಗಿರುತ್ತಾನೆ. ಆದರೆ ಉಂಗುರದ ಬೆರಳಿನ ತುದಿ ಉದ್ದವಾಗಿದ್ದರೆ ವ್ಯಕ್ತಿ ಕ್ರೂರ, ದುಷ್ಟ, ವ್ಯಭಿಚಾರಿ ಮತ್ತು ಖಳಜನರಿಂದ ಪೀಡಿತನಾಗಿರುತ್ತಾನೆ.

ಉಂಗುರದ ಬೆರಳಿನ ತುದಿ ಚಪ್ಪಟೆಯಾಗಿದ್ದು ಮತ್ತು ಕುಳಿತುಕೊಂಡಿದ್ದರೆ ಹಾಗೂ ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿ ಜೀವನದಲ್ಲಿ ಭೂತ, ಪ್ರೇತ ಮತ್ತು ಪಿಶಾಚಿಗಳ ತೊಂದರೆಗಳಿಂದ ಖಿನ್ನನಾಗಿರುತ್ತಾನೆ.

ಉಂಗುರದ ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ತುಂಬಿಕೊಂಡಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿಗೆ ತಂದೆಯಿಂದ ವೈಮನಸ್ಯ, ಕಷ್ಟ, ದುಃಖ ಮತ್ತು ವ್ಯಾಕುಲತೆ ಅನುಭವಿಸಬೇಕಾಗುತ್ತದೆ.

ಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ಕಷ್ಟ ಉಂಟಾಗುತ್ತದೆ. ಬೆರಳಿನ ಬಣ್ಣ ಕೆಂಪಗಿದ್ದರೆ ವಿಶೇಷ ತೊಂದರೆ ಉಂಟಾಗುತ್ತದೆ. ಬೆರಳಿನ ಬಣ್ಣ ಹಳದಿಯಾಗಿದ್ದರೆ ದುಃಖ ಉಂಟಾಗುತ್ತದೆ.

ಒಂದು ವೇಳೆ ಉಂಗುರದ ಬೆರಳಿನ ಮೇಲೆ ಊರ್ಧ್ವಮುಖ ಹಲ್ಲುಗಳಿದ್ದರೆ ವ್ಯಕ್ತಿಯು ತಾಯಿ ದುರ್ಗಾಮಾತೆಯನ್ನು ಆರಾಧಿಸಬೇಕು. ಅಧಃ ಮುಖ ಹಲ್ಲುಗಳಿದ್ದರೆ ಯಂತ್ರ ಮಂತ್ರಗಳಿಂದ ಶುಭತ್ವ ನೀಡುತ್ತದೆ. ಎಡಮುಖ ಹಲ್ಲುಗಳಿದ್ದರೆ ತಾಂತ್ರಿಕ ಪ್ರಯೋಗಗಳಿಂದ ಅನುಕೂಲವಾಗುತ್ತದೆ. ದಕ್ಷಿಣ ಮುಖ ಹಲ್ಲುಗಳಿದ್ದರೆ ವೈದಿಕ ಮಂತ್ರಗಳಿಂದ ಸಫಲತೆ ದೊರೆಯುತ್ತದೆ.

**ಕಿರುಬೆರಳಿನ ಮೇಲೆ ಹಲ್ಲಿನ ಚಿಹ್ನೆ —** ಒಂದು ವೇಳೆ ಕಿರುಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿ ಪಿತೃವಿರೋಧಿ ಮತ್ತು ಕುಟುಂಬ ದ್ವೇಷಿಯಾಗುತ್ತಾನೆ.

ಒಂದು ವೇಳೆ ಕಿರುಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿಗೆ ಪತ್ನಿಯೊಡನೆ ಸದಾ ವೈಮನಸ್ಯವಿರುತ್ತದೆ ಮತ್ತು ಭೋಗ ಸುಖದಲ್ಲಿ ನ್ಯೂನತೆ ಇರುತ್ತದೆ.

ಕಿರುಬೆರಳಿನ ತುದಿ ಚಪ್ಪಟೆಯಾಗಿದ್ದರೆ ಮತ್ತು ಕುಳಿತುಕೊಂಡಿದ್ದರೆ ವ್ಯಕ್ತಿಗೆ ಪರಸ್ಪರ ಮಿತ್ರದ್ವೇಷ, ವಿರೋಧ, ಅಂಗಭಂಗ, ಹೊಡೆದಾಟ-ಬಡಿದಾಟ, ಜೈಲು ಏನು ಬೇಕಾದರೂ ಅನಾಹುತ ಉಂಟಾಗುತ್ತದೆ.

ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ತುಂಬಿಕೊಂಡಂತಿದ್ದರೆ ಮತ್ತು ಹಲ್ಲಿನ ಚಿಹ್ನೆ ಇದ್ದರೆ ವ್ಯಕ್ತಿ ವಿರೋಧಿ ಅತ್ಯೆಮಾವರೊಂದಿಗೆ ಇರುತ್ತಾನೆ.

ಬೆರಳಿನ ಪರ್ವ ಗುಲಾಬಿ ಬಣ್ಣಕ್ಕಿದ್ದರೆ ವ್ಯಕ್ತಿಗೆ ಲಾಭವಾಗುತ್ತದೆ. ಬೆರಳಿನ ಪರ್ವ ಕೆಂಪಾಗಿದ್ದರೆ ಶತ್ರುಗಳು ಹೆಚ್ಚಾಗಿರುತ್ತಾರೆ. ಬೆರಳಿನ ಪರ್ವ ಹಳದಿಯಾಗಿದ್ದರೆ ಹಾನಿ ಉಂಟಾಗುತ್ತದೆ.

ಊರ್ಧ್ವಮುಖ ಹಲ್ಲು ಇದ್ದರೆ ವ್ಯಕ್ತಿ ಪ್ರಬಲ ವಿರೋಧಿಯನ್ನು ಹೊಂದಿರುತ್ತಾನೆ. ಅಧೋಃಮುಖ ಹಲ್ಲಿದ್ದರೆ ವ್ಯಕ್ತಿಯ ಶತ್ರು ಚಾಲಾಕನೂ, ದುಷ್ಟನು ಮತ್ತು ಧೂರ್ತನೂ ಆಗಿರುತ್ತಾನೆ. ಎಡಮುಖ ಹಲ್ಲುಗಳಿದ್ದರೆ ವ್ಯಕ್ತಿ ವ್ಯರ್ಥ ಶತ್ರುತ್ವ ಕಟ್ಟಿಕೊಳ್ಳುತ್ತಾನೆ. ದಕ್ಷಿಣ ಮುಖ ಹಲ್ಲುಗಳಿದ್ದರೆ ವ್ಯಕ್ತಿ ಬುದ್ಧಿ ಜೀವಿಗಳೊಂದಿಗೆ ಭಾರೀ ಶತ್ರುತ್ವವನ್ನು ಕಟ್ಟಿಕೊಳ್ಳುತ್ತಾನೆ.

**ಹೆಬ್ಬೆರಳಿನ ಮೇಲೆ ಹಲ್ಲಿನ ಚಿಹ್ನೆ —** ಹೆಬ್ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ಹಲ್ಲಿನ ಚಿಹ್ನೆ ಇದ್ದರೆ ಆ ವ್ಯಕ್ತಿ ಸ್ವತಃ ಇಬ್ಬಗೆಯ ವಿರೋಧಿ ಪರಿಸ್ಥಿತಿಯಲ್ಲಿ ಜೀವಿತವಿರುತ್ತಾನೆ. ಹೆಬ್ಬೆರಳಿನ ತುದಿ ಉದ್ದವಾಗಿದ್ದರೆ ವ್ಯಕ್ತಿ ಮಾನಸಿಕ ಎಳೆತದಿಂದ ಪೀಡಿತನಾಗಿರುತ್ತಾನೆ.

ಹೆಬ್ಬೆರಳಿನ ತುದಿ ಚಪ್ಪಟೆಯಾಗಿದ್ದು ಹಾಗೂ ಕುಳಿತುಕೊಂಡಂತಿದ್ದರೆ ವ್ಯಕ್ತಿ ಕ್ರೂರ ಸಮಾಜ ವಿರೋಧಿ ಕಾರ್ಯಗಳಲ್ಲಿ ಲಿಪ್ತನಾಗಿರುತ್ತಾನೆ. ಹೆಬ್ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ತುಂಬಿಕೊಂಡಂತಿದ್ದರೆ ವ್ಯಕ್ತಿಯು ಶತ್ರುಗಳು ದೂರವಿರುತ್ತಾರೆ.

ಹೆಬ್ಬೆರಳಿನ ಪರ್ವ ಗುಲಾಬಿ ಬಣ್ಣಕ್ಕಿದ್ದರೆ ಪ್ರಸನ್ನತೆ ವ್ಯಕ್ತಿಗಿರುತ್ತದೆ. ಹೆಬ್ಬೆರಳಿನ ಪರ್ವ ಕೆಂಪಾಗಿದ್ದರೆ ವ್ಯಕ್ತಿ ಕಠೋರ ಸ್ವಭಾವವನ್ನು ಸೂಚಿಸುತ್ತದೆ. ಹೆಬ್ಬೆರಳಿನ ಪರ್ವ ಹಳದಿ ಬಣ್ಣಕ್ಕಿದ್ದರೆ ವ್ಯಕ್ತಿಯ ದುರ್ಬಲತೆ ಮತ್ತು ಅಸ್ಥಿರ ಮನೋವೃತ್ತಿಯ ಪರಿಚಯ ನೀಡುತ್ತದೆ.

ಊರ್ಧ್ವ ಮುಖ ಹಲ್ಲುಗಳು ಪರೋಪಕಾರ ಸೂಚಿಸುತ್ತದೆ. ಅಧಃಮುಖ ಹಲ್ಲು ಬಡತನ, ದುಷ್ಟತೆ, ಮತ್ತು ಮೋಸದ ಪ್ರತೀಕವಾಗಿದೆ. ಎಡಮುಖ ಹಲ್ಲುಗಳು ಅವಸರದ ಸ್ವಭಾವವನ್ನು ಸೂಚಿಸುತ್ತದೆ. ದಕ್ಷಿಣ ಮುಖ ಹಲ್ಲುಗಳು ಪ್ರಾಮಾಣಿಕತೆಯ ಪರಿಚಯ ನೀಡುತ್ತದೆ.

**21. ತ್ರಿಶೂಲ**

ತ್ರಿಶೂಲದ ಚಿಹ್ನೆ ನ್ಯಾಯ, ಶಕ್ತಿ, ಶತ್ರುನಾಶಕ ಶಕ್ತಿಯ

ಪ್ರತೀಕವಾಗಿದೆ. ಎಲ್ಲಿ ಶಕ್ತಿ ಇರುತ್ತದೋ ಅಲ್ಲಿ ವೈಭವವಿರುತ್ತದೆ. ವ್ಯಕ್ತಿ ಧನ, ಧಾನ್ಯ ಸಂಪನ್ನತಾಯುಕ್ತನು, ವಾಹನ, ಭವನ, ಸುಖಗಳನ್ನು ಹೊಂದಿರುವವನು ಆಗಿರುತ್ತಾನೆ. ಹಾಗೆಯೇ ಈ ವ್ಯಕ್ತಿ ಬಹಳ ಶಕ್ತಿವಂತನೂ, ಶಕ್ತಿಮಾತೆಯ ಭಕ್ತನು, ಧರ್ಮನಿಷ್ಠನು ಮತ್ತು ಆಚರಣೆಯಲ್ಲಿ ಶುದ್ಧನು ಆಗಿರುತ್ತಾನೆ. ಸಾಮಾಜಿಕ ದೃಷ್ಟಿಯಿಂದ ಪ್ರತಿಷ್ಠಿತನು ಮತ್ತು ಮಾನನೀಯನೂ ಆಗಿರುತ್ತಾನೆ.

ಈ ಚಿಹ್ನೆ ಯಾವುದೇ ಕ್ಷೇತ್ರದ ಮೇಲಿದ್ದರೂ ಆ ಕ್ಷೇತ್ರದ ಶಕ್ತಿಯನ್ನು ತೀವ್ರಗೊಳಿಸುತ್ತದೆ. ಒಂದು ವೇಳೆ ಈ ಚಿಹ್ನೆ ಚಂದ್ರಕ್ಷೇತ್ರದ ಮೇಲಿದ್ದರೆ ಚಂದ್ರನ ಶುಭಗುಣಗಳನ್ನು ವೃದ್ಧಿಗೊಳಿಸುತ್ತದೆ. ಅಂತಹ ವ್ಯಕ್ತಿಯ ಕಲ್ಪನೆಯ ಪ್ರಯೋಗ ಸರಿಯಾದ ಕಾರ್ಯಗಳ ಮೇಲೆ ತೊಡಗುತ್ತದೆ ಮತ್ತು ಆ ಕಾರ್ಯಗಳಿಗೆ ಪೂರ್ಣ ಸಫಲತೆ ದೊರೆಯುತ್ತದೆ. (ಮಂಗಳ) ಭೌಮದ ಕ್ಷೇತ್ರದ ಮೇಲೆ ತ್ರಿಶೂಲ ಸಾಹಸದ ಪರಿಚಯ ನೀಡುತ್ತದೆ. ವ್ಯಕ್ತಿ ಬುದ್ಧಿ ಬಲದ ನಂಬಿಕೆಯಿಂದ ಎಲ್ಲಾ ಕಾರ್ಯಗಳಲ್ಲಿ ಸಫಲತೆ ಉಂಟಾಗುತ್ತದೆ.

ಬುಧಕ್ಷೇತ್ರದ ಮೇಲೆ ತ್ರಿಶೂಲ ವಿದ್ವತ್ತನ್ನು ವ್ಯಕ್ತಗೊಳಿಸುತ್ತದೆ. ಇಂತಹ ಮನುಷ್ಯ ತನ್ನ ಸ್ಥಿರ ಬುದ್ಧಿಯ ಕಾರಣದಿಂದಾಗಿ ಜೀವನ ನಡೆಸುವ ಕಾರ್ಯಗಳಲ್ಲಿ ಅಥವಾ ಅನ್ಯ ವಿಷಯಗಳಲ್ಲಿಯೂ ಸಫಲತೆಯನ್ನು ಪಡೆಯುತ್ತಾನೆ. ಗುರುಕ್ಷೇತ್ರದ ಮೇಲೆ ತ್ರಿಶೂಲದ ಚಿಹ್ನೆ ಬೀಳುತ್ತಿರುವ ಸಂತುಲನವನ್ನು ಸರಿಯಾಗಿ ಸ್ಥಾಪಿಸುವುದಕ್ಕೆ ಪ್ರಭಾವ ನೀಡುತ್ತದೆ. ಶನಿ ಕ್ಷೇತ್ರದ ಮೇಲೆ ತ್ರಿಶೂಲ ಚಿಹ್ನೆ ತಂತ್ರ ವಿದ್ಯೆಗಳ ಜ್ಞಾನವನ್ನು ನೀಡುತ್ತದೆ. ತ್ರಿಶೂಲದ ಚಿಹ್ನೆ ಸೂರ್ಯ ಕ್ಷೇತ್ರದ ಮೇಲಿದ್ದರೆ ಮನುಷ್ಯ ಮಿಥ್ಯಾಭಿಮಾನದಿಂದ ದೂರವಿರುತ್ತಾನೆ.

**22. ಸಿಂಹಾಸನ**

ಸಿಂಹಾಸನದ ಹೆಸರೇ ಉಚ್ಚಪದವಿ, ಸಮ್ಮಾನ, ಪ್ರತಿಷ್ಠೆಯ ಪ್ರತೀಕವಾಗಿದೆ. ಈ ಚಿಹ್ನೆ ಶಾಸಕ, ಸೇನಾಪತಿ, ನ್ಯಾಯಾಧೀಶರ ಕೈಲಿ ನೋಡಲು ಸಿಗುತ್ತದೆ. ಯಾವುದಾದರೂ ಉದ್ಯೋಗ ಪತಿಯ ಕೈನಲ್ಲಿ ಈ ಚಿಹ್ನೆ ಇದ್ದರೆ ಅವನಿಗೆ ಅಪಾರ ವೈಭವ, ಸಂಪನ್ನತೆ ಮತ್ತು ಸಮಾಜದಲ್ಲಿ ಪ್ರಭುತ್ವವಿರುತ್ತದೆ. ಯಾವುದಾದರೂ ಸ್ತ್ರೀಯ ಕೈನಲ್ಲಿ ಈ ಚಿಹ್ನೆ ಇದ್ದರೆ ಅವಳು ಮಾನ, ಸಮ್ಮಾನ, ಪ್ರತಿಷ್ಠೆ, ಕೀರ್ತಿ, ವೈಭವ ಮತ್ತು ಸಂಪನ್ನತೆಯಿಂದ ಕೂಡಿರುತ್ತಾಳೆ.

**23. ಅಂಕುಶ**

ಅಂಕುಶದ ಅರ್ಥ ನ್ಯಾಯ ಎಂದಾಗಿದೆ. ಎಲ್ಲಿ ನ್ಯಾಯವಿರುತ್ತದೋ ಅಲ್ಲಿ ಅನುಶಾಸನವಿರುತ್ತದೆ. ಎಲ್ಲಿ ಅನುಶಾಸನವಿರುತ್ತದೋ ಅಲ್ಲಿ ಶಾಂತಿ ಇರುತ್ತದೆ. ಎಲ್ಲಿ ಶಾಂತಿ ಇರುತ್ತದೋ ಅಲ್ಲಿ ಐಶ್ವರ್ಯವಿರುತ್ತದೆ. ಎಲ್ಲಿ ಐಶ್ವರ್ಯವಿರುತ್ತದೋ ಅಲ್ಲಿ ಸುಖ, ಆನಂದ ಮತ್ತು ಪ್ರಸನ್ನತೆ ಇರುತ್ತದೆ. ಐಶ್ವರ್ಯವಿರುವ ವ್ಯಕ್ತಿ ಧನ, ಧಾನ್ಯ, ವೈಭವ ಸಂಪನ್ನನು, ಜನಸಮಾಜದ ಮೇಲೆ ಪ್ರಮುಖತೆ ಇಟ್ಟುಕೊಂಡಿರುವವನು, ಯಾವುದಾದರೂ ರಾಜ್ಯ ವಿಭಾಗದಲ್ಲಿ ಉಚ್ಚಪದವಿಯನ್ನು ಹೊಂದಿರುವವನು, ನ್ಯಾಯಿಯೂ ಮತ್ತು ಉಚ್ಚಮಟ್ಟದ ವ್ಯಾಪಾರಿಯೂ ಆಗುತ್ತಾನೆ.

**24. ಪಲ್ಲಕ್ಕಿ**

ಈ ಚಿಹ್ನೆ ಧನ, ಐಶ್ವರ್ಯ, ಸಂಪನ್ನತೆ, ಪ್ರಸನ್ನತೆ, ವಾಹನ ಸುಖದ ಪ್ರತೀಕವಾಗಿದೆ. ಸ್ತ್ರೀಯರ ಕೈಲಿ ಈ ಚಿಹ್ನೆ ವಿಶೇಷ ಶುಭವಾದುದೆಂದು ನಂಬಲಾಗಿದೆ. ಇಂತಹ ಸ್ತ್ರೀ ದೂರ ದೂರದ ಧಾರ್ಮಿಕ ಯಾತ್ರೆಗಳನ್ನು ಮತ್ತು ತೀರ್ಥಾಟನೆಯನ್ನು ಮಾಡುತ್ತಾಳೆ. ಕನ್ಯೆಯ ಕೈಯಲ್ಲಿ ಈ ಚಿಹ್ನೆ ಇದ್ದರೆ ಒಳ್ಳೆಯ ಮನೆಯಲ್ಲಿ ಕನ್ಯೆಯ ವಿವಾಹವಾಗುತ್ತದೆಂದು ಅರ್ಥ. ಹಾಗೇ ಗೃಹಸ್ಥ ಜೀವನ ಆನಂದವಾಗಿ ಕಳೆಯುತ್ತದೆ.

**25. ಚಾಮರ**

ಈ ಚಿಹ್ನೆ ಪ್ರಭುತ್ವದ ಉಚ್ಚ ವ್ಯಕ್ತಿತ್ವದ ಪ್ರತೀಕವಾಗಿದೆ. ಇಂತಹ ವ್ಯಕ್ತಿಯ ಮನೆಯಲ್ಲಿ ಆಳುಕಾಳುಗಳ ಸೇವಕರ ದಂಡೇ ಇರುತ್ತದೆ. ಇಂತಹ ವ್ಯಕ್ತಿ ದೂರದೂರದವರೆಗೆ ವ್ಯಾಪಾರವನ್ನು ಹರಡಿ ಧನ, ಕೀರ್ತಿ, ಮಾನ ಪಡೆದುಕೊಳ್ಳುತ್ತಾನೆ. ದೈವಿಕ ಮತ್ತು ಧಾರ್ಮಿಕ ಕಾರ್ಯಗಳಿಗೆ ಇವನು ಸಂತೋಷದಿಂದ ಖರ್ಚು ಮಾಡುತ್ತಾನೆ. ಪ್ರಭುತ್ವದಲ್ಲಿ ಸಂಪೂರ್ಣ ಭೌತಿಕ ಐಶ್ವರ್ಯವನ್ನು ಭೋಗಿಸುತ್ತಾನೆ.

**26. ಕಲ್ಪವೃಕ್ಷ**

ಈ ಚಿಹ್ನೆ ಇಚ್ಛಾಪೂರ್ತಿ, ಕಾಮನೆಯ ಪೂರ್ತಿಯ ಪ್ರತೀಕವಾಗಿದೆ. ಈ ಚಿಹ್ನೆ ವ್ಯಕ್ತಿಗೆ ಪೂರ್ಣ ಅಧಿಕಾರ, ಪೂರ್ಣ ಐಶ್ವರ್ಯ ದಯಪಾಲಿಸುತ್ತದೆ. ಇಂತಹ ವ್ಯಕ್ತಿಗೆ ಭೂಮಿ, ಭವನ, ವಾಹನ, ಭೋಗ ಸುಖ, ವಸ್ತ್ರಾಭೂಷಣ, ಪಶುಸುಖ, ನಾರೀಸುಖ, ಶಯ್ಯಾಸುಖ, ಸದಾ ಪ್ರಸನ್ನತೆ, ದಾನವೀರತೆ, ನ್ಯಾಯಪ್ರಿಯತೆ, ಪರೋಪಕಾರಗುಣ, ಕೀರ್ತಿ

ಮುಂತಾದವುಗಳನ್ನು ಕರುಣಿಸುತ್ತದೆ.

**27. ಶಂಖ – ಛತ್ರಿ – ಪಲ್ಲಕ್ಕಿ**

ಕೈನಲ್ಲಿ ಶಂಖ, ಛತ್ರಿ, ಪಲ್ಲಕ್ಕಿ, ಆನೆ, ಕುದುರೆ, ಕಮಲದಳ ಈ ಎಲ್ಲಾ ಚಿಹ್ನೆಗಳು ವೈಭವ, ಸಂಪನ್ನತೆ ಮತ್ತು ರಾಜ ಸಮಾನ ಸುಖ ಭೋಗಿಸುವ ಅದೃಷ್ಟವನ್ನು ನೀಡುತ್ತವೆ.

**28. ಕಳಶ – ಕಮಲ – ಧ್ವಜ**

ಕೈನಲ್ಲಿ ಕಳಶ, ಕಮಲ, ಕಮಲದ ದಂಟು, ಧ್ವಜ, ಅಂಕುಶ ಚಿಹ್ನೆಗಳು ಧನಧಾನ್ಯ, ನ್ಯಾಯದ ಪೂರ್ಣತೆ ಮತ್ತು ಉಚ್ಚಾಶಯತೆಯ ಪ್ರತೀಕವಾಗಿದೆ.

**29. ಕತ್ತಿ – ಭರ್ಜಿ – ತ್ರಿಶೂಲ**

ಕೈನಲ್ಲಿ ಕತ್ತಿ, ಭರ್ಜಿ, ತ್ರಿಶೂಲ, ಕೊಡಲಿ, ತೋಮರ, ಧನುಸ್ಸು, ಮಾಲೆ ಮುಂತಾದ ಚಿಹ್ನೆಗಳು ಅನುಶಾಸನ, ನ್ಯಾಯ, ಬಲ, ನಿಯಂತ್ರಣ ಶಕ್ತಿಯ ಪ್ರತಿಪಾದಕವಾಗಿವೆ.

**30. ಒರಳು**

ಇಂತಹ ಚಿಹ್ನೆಯಿಂದ ಕೂಡಿರುವ ವ್ಯಕ್ತಿ ಜೀವನದಲ್ಲಿ ಅನೇಕ ಯಾಜ್ಞಿಕ ಕಾರ್ಯಗಳನ್ನು ಮಾಡುತ್ತಾನೆ.

**31. ಮೊಸಳೆ – ಧ್ವಜ – ಪತಾಕೆ – ಭಂಡಾರ**

ಕೈನಲ್ಲಿ ಮೊಸಳೆ, ಧ್ವಜ, ಪತಾಕೆ, ಭಂಡಾರ ಮುಂತಾದ ಚಿಹ್ನೆಗಳು ಧನ, ಧಾನ್ಯ, ಸುಖದ ಪ್ರತೀಕವಾಗಿದೆ.

**32. ಬಾವಿ – ಕೊಳ – ಕೆರೆ**

ಕೈಯಲ್ಲಿ ಬಾವಿ, ಕೊಳ, ಕೆರೆ, ಸಿಂಹಾಸನ, ತ್ರಿಕೋನ ಮುಂತಾದ ಚಿಹ್ನೆಗಳು ಧಾರ್ಮಿಕತೆಯ ಕಡೆಗೆ ಸಂಕೇತ ಮಾಡುತ್ತದೆ.

**33. ಪರ್ವತ – ಪರ್ವತಸಾಲು – ಕಂಕಣ – ಯೋನಿ – ನರಮುಂಡ – ಮನೆ**

ಕೈಯಲ್ಲಿ ಪರ್ವತ, ಪರ್ವತ ಸಾಲು, ಕಂಕಣ, ಯೋನಿ, ನರಮುಂಡ, ಮನೆ ಮುಂತಾದ ಚಿಹ್ನೆಗಳು ಮಂತ್ರಿ ಪದವಿಯನ್ನು ಕರುಣಿಸುತ್ತವೆ.

### 34. ಸೂರ್ಯ – ಚಂದ್ರ – ಬಳ್ಳಿ – ನೇತ್ರ – ಅಷ್ಟಕೋನ – ತ್ರಿಕೋನ

ಕೈನಲ್ಲಿ ಸೂರ್ಯ, ಚಂದ್ರ, ಬಳ್ಳಿ, ನೇತ್ರ, ಅಷ್ಟಕೋನ, ತ್ರಿಕೋನ ಮುಂತಾದವುಗಳು ಸಂಪನ್ನತೆ ಮತ್ತು ಸುಖದ ಪ್ರತೀಕ ಚಿಹ್ನೆಗಳಾಗಿವೆ.

### 35. ಕನ್ನಡಿ

ನಾವು ಯಾವ ರೀತಿ ಇರುತ್ತೇವೆಯೋ ಆ ರೀತಿ ನಾವು ಕನ್ನಡಿಯಲ್ಲಿ ನೋಡಿಕೊಳ್ಳುತ್ತೇವೆ. ಕನ್ನಡಿಯ ಚಿಹ್ನೆ ಇರುವ ವ್ಯಕ್ತಿ ಪ್ರಪಂಚದ ಯಥಾರ್ಥವನ್ನು ಮಾತ್ರ ಸ್ವೀಕಾರ ಮಾಡುತ್ತಾನೆ. ಇವನು ಕಲ್ಪನೆಯ ಎತ್ತರದ ಹಾರಾಟ ಮಾಡುವುದಿಲ್ಲ ಮತ್ತು ಕಳೆದುಹೋದುದರ ಬಗ್ಗೆ ಚಿಂತಿಸುವುದಿಲ್ಲ. ಕೇವಲ ವರ್ತಮಾನದ ಬಗ್ಗೆ ಯೋಚಿಸುತ್ತಾನೆ. ಪರಿಪಕ್ವ ಬುದ್ಧಿ, ದೃಢನಿಶ್ಚಯದಿಂದ ವಯಸ್ಸಿನ ಜೊತೆ ಜೊತೆಯಲ್ಲೇ ಆಧ್ಯಾತ್ಮದ ಕಡೆಗೆ ಮುಂದುವರೆಯುತ್ತಾನೆ. ಇಂತಹ ವ್ಯಕ್ತಿ ಜೀವನದಲ್ಲಿ ದೀರ್ಘ ಸಮಯದವರೆಗೆ ಶ್ರೇಷ್ಠ ವ್ಯಾಪಾರಿ ಅಥವಾ ಉಚ್ಚ ಆಡಳಿತ ಅಧಿಕಾರಿಯಾಗಿರುತ್ತಾನೆ. ಸಮಯಾನುಸಾರ ಧರ್ಮ ಪ್ರಚಾರಕ, ಮಂದಿರ, ಧರ್ಮಶಾಲೆ, ಗೋಶಾಲೆ, ದೈವಿಕ ಕಾರ್ಯಗಳಲ್ಲಿ ತೊಡಗುತ್ತಾನೆ. ವೃದ್ಧಾವಸ್ಥೆಯಲ್ಲಿ ಈ ವ್ಯಕ್ತಿ ಸನ್ಯಾಸಿ ಅಥವಾ ಯೋಗಿ ಆಗುತ್ತಾನೆ.

### 36. ನೇಗಿಲು

ಈ ಚಿಹ್ನೆ ಇರುವ ವ್ಯಕ್ತಿ ಕೃಷಿ ಕಾರ್ಯ ಮಾಡುವ ರೈತನಾಗಿರುತ್ತಾನೆ. ಆದರೆ ಇವನು ಸಾಧನ ಸಂಪನ್ನನೂ ಆಗಿರುತ್ತಾನೆ. ಜೀವನದಲ್ಲಿ ಇವನಿಗೆ ಯಾವುದೇ ಅಭಾವ ಅಥವಾ ಕಷ್ಟ ಉಂಟಾಗುವುದಿಲ್ಲ. ಇವನಿಗೆ ಸಾಕಷ್ಟು ಹೊಲ, ಗದ್ದೆ, ತೋಟಗಳಿರುತ್ತವೆ. ಒಂದು ವೇಳೆ ಇಂಥವನು ವ್ಯಾಪಾರಿಯಾದರೆ ಖಾದ್ಯ ವಸ್ತುಗಳ ವ್ಯಾಪಾರ ಮಾಡುವಂಥವನಾಗಿರುತ್ತಾನೆ. ಸ್ತ್ರೀಯ ಕೈಲಿ ಈ ಚಿಹ್ನೆ ಇದ್ದರೆ ಅವಳು ರೈತನ ಪತ್ನಿ ಅಥವಾ ಖಾದ್ಯ ವಸ್ತುವಿನ ವ್ಯಾಪಾರಿಯ ಪತ್ನಿಯಾಗಿರುತ್ತಾಳೆ.

### 37. ಪುಷ್ಪ

ಈ ಚಿಹ್ನೆ ಶುಭ ಸಂಕೇತವಾಗಿದೆ. ಮನುಷ್ಯ ಶೃಂಗಾರ ಪ್ರಿಯನಾಗುತ್ತಾನೆ. ಇಂತಹ ವ್ಯಕ್ತಿ ಕೋಮಲಕಾಂತನು, ಸರಳ ಹೃದಯದವನು, ದಯಾವಂತನು ಮತ್ತು ಈಶ್ವರಭಕ್ತನು ಆಗಿರುತ್ತಾನೆ. ಹಾಗೇ ಇಂತಹ ವ್ಯಕ್ತಿ ರಸಿಕ ಶಿರೋಮಣಿಯೂ, ಸುಗಂಧ ಪ್ರಿಯನು,

ಸುಂದರ ರಮಣಿಯರ ಪ್ರತಿ ಆಕರ್ಷಿತನು, ಸೌಂದರ್ಯ ಪ್ರೇಮಿಯೂ, ಮಧುರ ಮಾತಾಡುವವನೂ ಆಗಿರುತ್ತಾನೆ. ಈ ಚಿಹ್ನೆ ಇರುವ ನಾರಿಯರು ಶೃಂಗಾರ ಪ್ರಿಯರು ಮತ್ತು ಜೀವನದಲ್ಲಿ ವಿಲಾಸಿಗಳೂ ಆಗಿರುತ್ತಾರೆ.

**38. ಕುಂಡಲ**

ಇದು ಸಹ ಶುಭ ಸಂಕೇತವಾಗಿದೆ. ಸಂಪನ್ನತೆಯ ದ್ಯೋತಕವಾಗಿದೆ. ಇಂತಹ ವ್ಯಕ್ತಿ ಶೃಂಗಾರ ಪ್ರಿಯನಾಗಿರುತ್ತಾನೆ.

**39. ಕವಚ**

ಶೂರವೀರರುಗಳ ಕೈಲಿ ಈ ಚಿಹ್ನೆ ಇರುತ್ತದೆ. ಇಂತಹ ವ್ಯಕ್ತಿ ಆರೋಗ್ಯವಂತನು, ಬಲಿಷ್ಠನು, ದೃಢಮತಾವಲಂಬಿಯು, ಧೈರ್ಯಶಾಲಿಯು, ಶತ್ರುನಾಶಕನು, ಯುದ್ಧದಲ್ಲಿ ವಿಜಯ ಗಳಿಸುವ ಸೇನಾಪತಿಯೂ ಆಗಿರುತ್ತಾನೆ. ಆರ್ಥಿಕ ದೃಷ್ಟಿಯಿಂದಲೂ ಇಂಥವರು ಬಹಳ ಅನುಕೂಲವಾಗಿರುತ್ತಾರೆ.

**40. ಶ್ರೀವತ್ಸ**

ಈ ಚಿಹ್ನೆ ಇದ್ದರೆ ಧನ, ಸಂಪತ್ತು, ಸುಖ, ಐಶ್ವರ್ಯ ಎಲ್ಲಾ ಇರುತ್ತದೆ. ಇಂತಹ ವ್ಯಕ್ತಿ ಮೇಲ್ಮಟ್ಟದ ವಾಹನವನ್ನು ಹೊಂದಿರುವ, ಧರ್ಮಕಾರ್ಯಗಳಲ್ಲಿ ಆಸಕ್ತಿ ವಹಿಸುವ, ನ್ಯಾಯಪ್ರಿಯನಾಗಿರುವ, ವಿವೇಕಿಯಾಗಿರುವ ವ್ಯಕ್ತಿಯಾಗಿರುತ್ತಾನೆ. ಇವನ ಜೀವನದಲ್ಲಿ ಯಾವುದಕ್ಕೂ ಕೊರತೆ ಇರುವುದಿಲ್ಲ.

**41. ಗೋಧಿ**

ಸಾಮುದ್ರಿಕ ಶಾಸ್ತ್ರದಲ್ಲಿ ಗೋಧಿಗೆ ಬಹಳ ಹೆಚ್ಚು ಮಹತ್ವವಿದೆ. ಗೋಧಿ ಎರಡು ರೀತಿಯಲ್ಲಿರುತ್ತದೆ.

i) ಪೂರ್ಣ ಗೋಧಿ

ii) ಅರ್ಧ ಗೋಧಿ (ಅಪೂರ್ಣಗೋಧಿ)

ಪೂರ್ಣ ಗೋಧಿಯಲ್ಲಿ ಗೋಧಿಯ ಚಿಹ್ನೆ ಪೂರ್ಣವಾಗಿರುತ್ತದೆ. ಅರ್ಧ ಅಥವಾ ಅಪೂರ್ಣ ಗೋಧಿಯಲ್ಲಿ ಗೋಧಿ ಆಕೃತಿ ಪೂರ್ಣ ಸೇರಿಕೊಂಡಿರುವುದಿಲ್ಲ.

ಪ್ರಾಯಃ ಭ್ರಮೆಯ ಕಾರಣದಿಂದ ಅಪೂರ್ಣ ಗೋಧಿಯನ್ನು ಗೋಧಿಯೆಂದು ಒಪ್ಪಿಕೊಂಡು ಫಲಕಥನ ಹೇಳುವುದು ತಪ್ಪಾಗುತ್ತದೆ.

ಸಾಮುದ್ರಿಕ ಶಾಸ್ತ್ರದಲ್ಲಿ ಇವೆರಡಕ್ಕೆ ತನ್ನದೇ ಮಹತ್ವವಿದೆ. ಗೋಧಿಯ

ಚಿಹ್ನೆ ಮೂಲತಃ ಕಣ್ಣಿನ ಸಮಾನ ಇರುತ್ತದೆ. ಈ ಕಣ್ಣು ಅಥವಾ ಗೋದಿ ಬೆರಳಿನ ಯಾವ ಕಡೆಗೆ ಬಾಗಿರುತ್ತದೋ ಅದೇ ಪ್ರಕಾರದ ಚಿಹ್ನೆ ಅದೆಂದು ನಂಬಲಾಗುತ್ತದೆ. ಇದು ಊರ್ಧ್ವಮುಖ, ಎಡಮುಖ, ಅಧಃಮುಖ, ದಕ್ಷಿಣಮುಖದ್ದಾಗಿರುತ್ತದೆ.

**ತೋರುಬೆರಳಿನ ಗೋಧಿ ಚಿಹ್ನೆ —** ತೋರು ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ಅರ್ಧಗೋಧಿ ಇದ್ದರೆ ವ್ಯಕ್ತಿ ವೃದ್ಧಾವಸ್ಥೆಯನ್ನು ಆನಂದದಿಂದ ಕಳೆಯುತ್ತಾನೆ.

ತೋರು ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿ ಇದ್ದರೆ ವ್ಯಕ್ತಿ ದುರ್ಬಲನು, ತೆಳುವಾದವನು, ನಿಶ್ಶಕ್ತನೂ, ಅಶಕ್ತ ರೋಗಿಯೂ ಆಗಿರುತ್ತಾನೆ. ಒಂದು ವೇಳೆ ಪೂರ್ಣ ಗೋಧಿ ಇದ್ದರೆ ವ್ಯಕ್ತಿ ರಕ್ತ ನ್ಯೂನತೆಯಿಂದ ದುಃಖಿಯಾಗುತ್ತಾನೆ.

ತೋರು ಬೆರಳಿನ ತುದಿ ಚಪ್ಪಟೆಯಾಗಿ ಕುಳಿತುಕೊಂಡಿರುವಂತಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಯಾವಾಗಲೂ ಹೀನ ಭಾವನೆಯಿಂದ ಕೂಡಿರುತ್ತಾನೆ. ಅವನ ವ್ಯಕ್ತಿತ್ವದಲ್ಲಿ ಸಿಂಗಾರ, ಸ್ವಚ್ಛತೆ ಬರುವುದಿಲ್ಲ. ಒಂದು ವೇಳೆ ಇದರ ಮೇಲೆ ಪೂರ್ಣಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಚಾಲಾಕನು, ಧೂರ್ತನು, ಅವಸರ ಸ್ವಭಾವದವನು, ತನ್ನ ಕೆಲಸ ಸಾಧಿಸುವುದರಲ್ಲಿ ಸಿದ್ಧಹಸ್ತನೂ ಆಗಿರುತ್ತಾನೆ.

ಒಂದು ವೇಳೆ ತೋರು ಬೆರಳಿನ ತುದಿ ತುಂಬಿಕೊಂಡಿದ್ದರೆ ಮತ್ತು ಗೋಲಾಕಾರವಾಗಿದ್ದರೆ ಹಾಗೂ ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಲಂಪಟನು, ವಿಲಾಸಿಯೂ, ಸಿಂಗಾರ ದರ್ಪದವನು ಮತ್ತು ಸಿಂಗಾರ ದರ್ಪಕ್ಕೆ ಹೆಚ್ಚು ಖರ್ಚು ಮಾಡುವವನು ಆಗಿರುತ್ತಾನೆ. ಒಂದು ವೇಳೆ ಅದರ ಮೇಲೆ ಪೂರ್ಣಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಗುಪ್ತಾಂಗ ರೋಗದಿಂದ ಪೀಡಿತನಾಗಿರುತ್ತಾನೆ.

**ಊರ್ಧ್ವಗೋಧಿ ಚಿಹ್ನೆ:** ಊರ್ಧ್ವಮುಖದ ಅಪೂರ್ಣ ಗೋಧಿ ಚಿಹ್ನೆ ಕಷ್ಟ ಸಹಿಷ್ಣುತೆ, ಸಂಘರ್ಷಶೀಲತೆ, ಧೈರ್ಯ, ಕರ್ಮಣ್ಯ, ಆತ್ಮಾನುಭೂತಿಯಿಂದ ಸಂಚಾಲಿತವಾಗಿರುತ್ತದೆ. ಪೂರ್ಣ ಗೋಧಿ ಚಿಹ್ನೆ ಇದ್ದರೆ ವಯಸ್ಸಿನ ಜೊತೆಯಲ್ಲಿ ಸಂಸಾರದ ವ್ಯಾಮೋಹ ದೂರವಾಗುತ್ತಾ ಹೋಗುತ್ತದೆ.

**ಅಧಃಮುಖ ಗೋಧಿ ಚಿಹ್ನೆ:** ಅಧಃಮುಖ ಅಪೂರ್ಣ ಗೋಧಿ ಚಿಹ್ನೆ ತೋರು ಬೆರಳಿನ ಮೇಲಿದ್ದರೆ ವ್ಯಕ್ತಿ ದುರ್ಗುಣಿಯು, ಕುಡುಕನು,

ಮಾಂಸಾಹಾರಿಯೂ, ಜೂಜುಕೋರನೂ, ವ್ಯಸನಿಯೂ ಆಗುತ್ತಾನೆ. ಪೂರ್ಣ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ಕಾಮಿಯು, ಕಾಮಪಿಪಾಸನು, ಭೋಗಲಿಪ್ತನು, ಮರ್ಯಾದಾಹೀನನು, ಬಹುಸ್ತ್ರೀ ಭೋಗಿಯೂ ಆಗಿರುತ್ತಾನೆ.

**ಎಡಗೋಧಿ ಚಿಹ್ನೆ:** ಎಡಮುಖದಲ್ಲಿ ಅಪೂರ್ಣ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ಗುದರೋಗ, ಗುಲ್ಮರೋಗ, ಉದರ ರೋಗದಿಂದ ಪೀಡಿತನಾಗಿರುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ಹೊಟ್ಟೆಯ ಶಸ್ತ್ರಚಿಕಿತ್ಸೆ ಮತ್ತು ಮೃತ್ಯು ಸಮಾನ ಕಷ್ಟವನ್ನು ವ್ಯಕ್ತಿ ಭೋಗಿಸಬೇಕಾಗುತ್ತದೆಂದು ಸೂಚಿಸುತ್ತದೆ.

**ದಕ್ಷಿಣಮುಖ ಗೋಧಿ ಚಿಹ್ನೆ:** ಒಂದು ವೇಳೆ ತೋರು ಬೆರಳಿನ ಮೇಲೆ ದಕ್ಷಿಣಾವರ್ತ ಅಪೂರ್ಣ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ತಲೆಯ ಭಾಗದಲ್ಲಿ ಪೆಟ್ಟು ಬೀಳುತ್ತದೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಮಾನಸಿಕ ಶಕ್ತಿ ಅಸ್ತವ್ಯಸ್ತವಾಗಿ, ವಿಶೃಂಖಲಿತವಾಗಿ, ಕೆಳಮಟ್ಟದ ವಿಚಾರ ಮಾಡುವ ಹಾಗಿರುತ್ತದೆ.

ಒಂದು ವೇಳೆ ಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿ ಚಿಹ್ನೆ ಇದ್ದರೆ ಪ್ರಭುತ್ವ, ಸಂಪನ್ನತೆ, ಪೂರ್ಣ ಯೋಗಕಾರಕ ಮತ್ತು ರೋಗನಾಶಕವಾಗಿರುತ್ತವೆ.

ಕೆಂಪು ಬಣ್ಣದ ಬೆರಳಿನ ಮೇಲೆ ಅಪೂರ್ಣ ಗೋಧಿ ಚಿಹ್ನೆ ಇದ್ದರೆ ರೋಗ ಪೀಡಿತನಾಗುವನು. ಪೂರ್ಣ ಗೋಧಿ ಚಿಹ್ನೆ ಇದ್ದರೆ ಗುಪ್ತರೋಗಕಾರಕವಾಗುತ್ತದೆ.

ಹಳದಿ ಬಣ್ಣದ ಬೆರಳಿನ ಮೇಲೆ ಅಪೂರ್ಣ ಗೋಧಿ ಚಿಹ್ನೆ ಚಿರರೋಗಿಯನ್ನಾಗಿ ಮಾಡುತ್ತದೆ. ಪೂರ್ಣ ಗೋಧಿಯ ಚಿಹ್ನೆ ಕ್ಷಯರೋಗ, ಜಲೋದರ ರೋಗಕಾರಕವಾಗಿದೆ.

**ಮಧ್ಯದ ಬೆರಳಿನಲ್ಲಿ ಗೋಧಿ ಚಿಹ್ನೆ** — ಮಧ್ಯದ ಬೆರಳಿನ ತುದಿಯ ಮೇಲೆ ಗೋಧಿಯ ಚಿಹ್ನೆ ಇದ್ದರೆ ಅದು ಮಹತ್ವಪೂರ್ಣ ಸ್ಥಿತಿಯ ಪರಿಚಯ ನೀಡುತ್ತದೆ.

ಒಂದು ವೇಳೆ ಮಧ್ಯದ ಬೆರಳಿನ ಮುಂದಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಭಾಗ್ಯೋದಯ 28ನೇ ವರ್ಷದಲ್ಲಿ ಆಗುತ್ತದೆ.

ಒಂದು ವೇಳೆ ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯು

ಭಾಗ್ಯೋದಯ 25ನೇ ವರ್ಷದಲ್ಲೇ ಆಗುತ್ತದೆ. ಒಂದು ವೇಳೆ ಮಧ್ಯದ ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಭಾಗ್ಯೋದಯ ದೂರ ದೇಶದಲ್ಲಿ, ಪರದೇಶ ಅಥವಾ ವಿದೇಶದವರೆಗೆ ಆಗುತ್ತದೆ. ಆದರೆ ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಭಾಗ್ಯೋದಯ ಹುಟ್ಟಿದ ಸ್ಥಳದ ಸುತ್ತಮುತ್ತಲೇ ಆಗುತ್ತದೆ.

ಒಂದು ವೇಳೆ ಮಧ್ಯದ ಬೆರಳಿನ ತುದಿ ಚಪ್ಪಟೆಯಾಗಿ ಕುಳಿತುಕೊಂಡಂತಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಭಾಗ್ಯ ಯಾವಾಗಲೂ ಪ್ರತಿಕೂಲವಾಗಿರುತ್ತದೆ. ಒಂದು ವೇಳೆ ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಗೆ ಅನೇಕ ಬಾರಿಯ ಅಸಫಲತೆಯ ನಂತರ ಕೊನೆಗೆ ಸಫಲತೆ ಪ್ರಾಪ್ತವಾಗುತ್ತದೆ.

ಒಂದು ವೇಳೆ ಮಧ್ಯದ ಬೆರಳಿನ ತುದಿ ಗೋಲಾಕಾರವಾಗಿ ತುಂಬಿಕೊಂಡಂತಿದ್ದರೆ ಮತ್ತು ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಭಾಗ್ಯ ಯಾವಾಗಲೂ ಪ್ರತಿಕೂಲವಾಗಿರುತ್ತದೆ. ಒಂದು ವೇಳೆ ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಗೆ ಅನೇಕ ಬಾರಿಯ ಅಸಫಲತೆಯ ನಂತರ ಕೊನೆಗೆ ಸಫಲತೆ ಪ್ರಾಪ್ತವಾಗುತ್ತದೆ.

ಒಂದು ವೇಳೆ ಮಧ್ಯದ ಬೆರಳಿನ ತುದಿ ಗೋಲಾಕಾರವಾಗಿ ತುಂಬಿಕೊಂಡಂತಿದ್ದರೆ ಮತ್ತು ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಬಹಳ ಅಧಿಕ ಕಷ್ಟ ಅನುಭವಿಸಿದ ನಂತರ ಮತ್ತು ವಿಪತ್ತನ್ನು ಸಹಿಸಿಕೊಂಡ ನಂತರ ಭಾಗ್ಯೋದಯವಾಗುತ್ತದೆ. ಆದರೆ ಪೂರ್ಣ ಗೋಧಿ ಚಿಹ್ನೆ ಪ್ರಬಲ ಭಾಗ್ಯ ಸಮರ್ಥಕವಾಗಿರುತ್ತದೆ. ಅಂತಹ ವ್ಯಕ್ತಿ ಅಕಸ್ಮಾತ್ ಧನಪ್ರಾಪ್ತಿ ಮಾಡಿಕೊಳ್ಳುತ್ತಾನೆ.

**ಊರ್ಧ್ವಮುಖ ಗೋಧಿ ಚಿಹ್ನೆ:** ಒಂದು ವೇಳೆ ಮಧ್ಯದ ಬೆರಳಿನ ಮೇಲೆ ಅಪೂರ್ಣ ಊರ್ಧ್ವ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ವ್ಯಾಪಾರದಲ್ಲಿ ಪ್ರಾಮಾಣಿಕತೆಯನ್ನಿರಿಸಿಕೊಂಡು ಚೆನ್ನಾಗಿ ಏಳ್ಗೆ ಹೊಂದಿ ಹಣ ಸಂಪಾದಿಸುತ್ತಾನೆ. ವ್ಯಾಪಾರದಲ್ಲಿ ಒಬ್ಬೊಂಟಿಗನಾಗಿಯೇ ಊಹಿಸಲಾರದಷ್ಟು ಉನ್ನತಿ ಹೊಂದುತ್ತಾನೆ.

**ಅಧಃಮುಖ ಗೋಧಿ ಚಿಹ್ನೆ:** ಒಂದು ವೇಳೆ ಮಧ್ಯದ ಬೆರಳಿನ ಮೇಲೆ ಅಪೂರ್ಣ ಅಧಃಮುಖ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ವ್ಯಾಪಾರದಲ್ಲಿ ಸೋಲುತ್ತಾನೆ ಮತ್ತು ಬಂಡವಾಳವನ್ನು ಸಹ ಕಳೆದುಕೊಳ್ಳುತ್ತಾನೆ. ಆದರೆ

ಪೂರ್ಣ ಅಧೋಮುಖ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ವ್ಯಾಪಾರದಲ್ಲಿ ಸೋತರೂ ಸಹ ಪುನಃ ಸಾವರಿಸಿಕೊಳ್ಳುತ್ತಾನೆ.

**ಎಡಮುಖ ಗೋಧಿ ಚಿಹ್ನೆ:** ಅಪೂರ್ಣ ಎಡಮುಖ ಗೋಧಿ ಚಿಹ್ನೆ ಕೆಟ್ಟ ಹೆಸರು, ಕಷ್ಟ, ಸೋಲು, ತಿರಸ್ಕಾರ ನೀಡುತ್ತದೆ. ಎಡಮುಖ ಪೂರ್ಣ ಗೋಧಿ ಚಿಹ್ನೆ ಭೋಗ ಮತ್ತು ಇತರೆ ರಾಗಾತ್ಮಕ ಸಂಬಂಧವನ್ನು ನಿರ್ಮಿಸಿ ಗೌರವವನ್ನು ಕಳೆಯುತ್ತದೆ.

**ದಕ್ಷಿಣಮುಖ ಗೋಧಿ ಚಿಹ್ನೆ:** ದಕ್ಷಿಣಾವರ್ತ ಅಪೂರ್ಣ ಗೋಧಿ ಚಿಹ್ನೆ ಸಂತಾನದಿಂದ ಸುಖ ಮತ್ತು ಪೂರ್ಣ ಗೋಧಿ ಚಿಹ್ನೆ ಸ್ವಕಾರ್ಯದಿಂದ ಖ್ಯಾತಿಯನ್ನು ನೀಡುತ್ತದೆ.

ಒಂದು ವೇಳೆ ಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ವ್ಯಕ್ತಿಯು ಜೀವನೋಪಾಯಕ್ಕೆ ಪರ್ಣ ಅನುಕೂಲತೆ ಇರುತ್ತದೆ. ಪ್ರತಿಯೊಂದು ಕಾರ್ಯ ವ್ಯವಹಾರದಲ್ಲಿ ಸಫಲತೆ ದೊರೆಯುತ್ತದೆ. ಬೆರಳು ಕೆಂಪು ಬಣ್ಣಕ್ಕಿದ್ದರೆ ವ್ಯಕ್ತಿಗೆ ಅವಶ್ಯಕತೆಗಿಂತ ಹೆಚ್ಚು ತೊಂದರೆ ಮತ್ತು ಕಷ್ಟಗಳು ಬರುತ್ತವೆ. ಒಂದು ವೇಳೆ ಬೆರಳು ಹಳದಿ ಬಣ್ಣಕ್ಕಿದ್ದರೆ ವ್ಯಕ್ತಿಗೆ ಜೀವನದಲ್ಲಿ ಭಾಗ್ಯೋದಯವಾದರೂ ಸಹ ಅದರ ಲಾಭ ಪಡೆಯಲಾಗುವುದಿಲ್ಲ.

**ಉಂಗುರದ ಬೆರಳಿನಲ್ಲಿ ಗೋಧಿ ಚಿಹ್ನೆ:** ಒಂದು ವೇಳೆ ಉಂಗುರದ ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಶುಭಕಾರ್ಯಗಳಿಂದ ಕೀರ್ತಿಯನ್ನು ಪಡೆಯುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಅವಿಳಂಬ ಉನ್ನತಿ ಹೊಂದಿ ಸಮಾಜದಲ್ಲಿ ಕೀರ್ತಿ, ಗೌರವ, ಐಶ್ವರ್ಯ, ಸುಖ ಪಡೆದುಕೊಳ್ಳುತ್ತಾನೆ.

ಒಂದು ವೇಳೆ ಉಂಗುರದ ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಕಲೆಯ ಕ್ಷೇತ್ರದಲ್ಲಿ ಉನ್ನತಿ ಪಡೆಯುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಕೀರ್ತಿ ದೇಶ ವಿದೇಶಗಳಲ್ಲೆಲ್ಲಾ ಇರುತ್ತದೆ.

ಒಂದು ವೇಳೆ ಉಂಗುರದ ಬೆರಳಿನ ತುದಿ ಚಪ್ಪಟೆಯಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ನಿರಾಶನು, ಹೇಡಿಯೂ, ನಿರುದ್ಯೋಗಿಯೂ ಮತ್ತು ದುಃಖಿಯೂ ಆಗುತ್ತಾನೆ. ಪೂರ್ಣಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಕಠಿಣ ಸಂಘರ್ಷ ಮಾಡಿ ಜೀವನೋಪಾಯಕ್ಕೆ ಹಣ ಸಂಪಾದನೆ ಪ್ರಾಪ್ತಿ ಮಾಡಿಕೊಳ್ಳುತ್ತಾನೆ.

ಒಂದು ವೇಳೆ ಉಂಗುರದ ಬೆರಳಿನ ತುದಿ ತುಂಬಿಕೊಂಡಿದ್ದರೆ ಮತ್ತು ಗೋಲಾಕಾರವಾಗಿದ್ದರೆ ಹಾಗೂ ಅದರ ಮೇಲೆ ಅಪೂರ್ಣ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿಗೆ ಪರಿಚಿತ ಮಿತ್ರರ ಮೂಲಕ ತುಂಬು ಸಹಾಯ ದೊರೆಯುತ್ತದೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ಮಿತ್ರರ ಸಹಯೋಗ ದೊರೆಯುವುದಿಲ್ಲ.

ಬೆರಳು ಗುಲಾಬಿ ಬಣ್ಣಕ್ಕಿದ್ದರೆ ವ್ಯಕ್ತಿ 16 ವರ್ಷದವರೆಗೆ ಮಾತ್ರ ಭಾಗ್ಯೋದಯವನ್ನು ಪಡೆದುಕೊಳ್ಳುತ್ತಾನೆ. ಬೆರಳಿನ ಬಣ್ಣ ಕೆಂಪಾಗಿದ್ದರೆ ವ್ಯಕ್ತಿಯ ಶತ್ರು ಪಕ್ಷ ಪ್ರಬಲವಾಗಿರುತ್ತದೆ. ಬೆರಳಿನ ಬಣ್ಣ ಹಳದಿಯಾಗಿದ್ದರೆ ವ್ಯಕ್ತಿಗೆ ಸಫಲತೆ ದೊರೆಯುವುದೇ ಇಲ್ಲ.

**ಊರ್ಧ್ವಮುಖ ಗೋಧಿ ಚಿಹ್ನೆ:** ಒಂದು ವೇಳೆ ಉಂಗುರದ ಬೆರಳಿನ ಮೇಲೆ ಊರ್ಧ್ವಮುಖ ಅಪೂರ್ಣ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ವೃದ್ಧಾವಸ್ಥೆಯಲ್ಲಿ ಸಾಂಸಾರಿಕತೆಯಿಂದ ದೂರವಾಗಿ ಸನ್ಯಾಸಿಯಂತೆ ಜೀವನ ಕಳೆಯುತ್ತಾನೆ. ಪೂರ್ಣ ಗೋಧಿ ಚಿಹ್ನೆ ಇದ್ದರೆ ಕೆಲಸದಿಂದ ದೂರವಾಗಿ ಸನ್ಯಾಸಿಯಾಗಿ ಕೀರ್ತಿ ಗಳಿಸುತ್ತಾನೆ.

**ಅಧಃಮುಖ ಗೋಧಿ ಚಿಹ್ನೆ:** ಒಂದು ವೇಳೆ ಉಂಗುರದ ಬೆರಳಿನ ಮೇಲೆ ಅಪೂರ್ಣ ಗೋಧಿ ಇದ್ದರೆ ವ್ಯಕ್ತಿ ಜೀವನದಲ್ಲಿ ಅಪಕೀರ್ತಿ ಮತ್ತು ನಿಂದೆಗೆ ಗುರಿಯಾಗಬೇಕಾಗುತ್ತದೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ಮನೆ, ಕುಟುಂಬ, ಪರಿವಾರ, ಜಾತಿಯವರಿಗೆ ಸಂಭವ ಮತ್ತು ಅಸಂಭವ ಸಹಾಯವನ್ನು ವ್ಯಕ್ತಿ ಮಾಡಿದರೂ ಸಹ ಅವನಿಗೆ ಕೀರ್ತಿ ಅಥವಾ ಗೌರವ ಸಿಗುವುದಿಲ್ಲ.

**ಎಡಮುಖ ಗೋಧಿ ಚಿಹ್ನೆ:** ಉಂಗುರದ ಬೆರಳಿನ ಮೇಲೆ ಎಡಮುಖ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಸಂಪರ್ಕ ಸಮಾಜದ ಕೆಳಮಟ್ಟದ ಜನಗಳೊಂದಿಗೆ ಆಗುತ್ತದೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ಪರಿಸ್ಥಿತಿಯಿಂದ ಸಾವರಿಸಿಕೊಳ್ಳುತ್ತಾನೆ ಮತ್ತು ಅಪಮಾನದಿಂದ ಉಳಿದುಕೊಳ್ಳುತ್ತಾನೆ.

**ದಕ್ಷಿಣಾವರ್ತ ಗೋಧಿ ಚಿಹ್ನೆ:** ಉಂಗುರದ ಬೆರಳಿನ ಮೇಲೆ ದಕ್ಷಿಣವರ್ತ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಸಮಾಜದ ಮೇಲ್ಮಟ್ಟದ ಜನಗಳೊಂದಿಗೆ ಸಂಪರ್ಕ ಬೆಳೆಸಿಕೊಂಡು ಉನ್ನತಿ ಹೊಂದುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ಉಚ್ಚಪದವಿಯನ್ನು ಪ್ರಾಪ್ತಿ ಮಾಡಿಕೊಂಡು ಧನ, ಗೌರವ ಮತ್ತು ಐಶ್ವರ್ಯವನ್ನು

ಪಡೆಯುತ್ತಾನೆ.

**ಕಿರುಬೆರಳಿನ ಮೇಲೆ ಗೋಧಿ ಚಿಹ್ನೆ:** ಒಂದು ವೇಳೆ ಕಿರುಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಜೀವನೋಪಾಯದ ಸಂಪಾದನೆಯಲ್ಲಿ ಕಡಿಮೆ ಆಸಕ್ತಿ ಇಟ್ಟುಕೊಂಡಿರುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ವ್ಯಾಪಾರದ ಕಡೆಗೆ ಆಸಕ್ತಿ ವಹಿಸುತ್ತಾನೆ. ಬೇರೆಯವರ ಬಳಿ ಕೆಲಸ ಮಾಡಲು ಇಚ್ಛೆ ಇರುವುದಿಲ್ಲ.

ಒಂದು ವೇಳೆ ಕಿರು ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಸಾಮಾನ್ಯ ಕಲಾಕಾರನಾಗುತ್ತಾನೆ ಮತ್ತು ಕೇವಲ ಉದರ ಪೋಷಣೆಯನ್ನು ಮಾತ್ರ ಅದರಿಂದ ಮಾಡಲು ಸಾಧ್ಯವಾಗುತ್ತದೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಚಿತ್ರಕಾರನು, ತೈಲಚಿತ್ರ ಬರೆಯುವವನು, ಸಂಗೀತಗಾರನೂ ಆಗಿ ಹಣ ಸಂಪಾದಿಸುತ್ತಾನೆ.

ಕಿರು ಬೆರಳಿನ ತುದಿ ಚಪ್ಪಟೆಯಾಗಿ ಕುಳಿತುಕೊಂಡಂತಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಗೆ ಹಣದ ಕೊರತೆ ಉಂಟಾಗುತ್ತದೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಅನೇಕ ರೀತಿಯ ಸಂಪಾದನೆಯ ಮಾರ್ಗದಿಂದ ಹಣ ಗಳಿಸುತ್ತಾನೆ.

ಕಿರು ಬೆರಳಿನ ತುದಿ ತುಂಬಿಕೊಂಡಂತಿದ್ದರೆ, ಗುಂಡು ಗುಂಡಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಪೂರ್ಣ ಸಮೃದ್ಧಿಶಾಲಿಯಾಗುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಎಲ್ಲಾ ದೃಷ್ಟಿಯಿಂದ ಸಮೃದ್ಧಶಾಲಿಯಾಗುತ್ತಾನೆ.

ಒಂದು ವೇಳೆ ಕಿರುಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ವ್ಯಕ್ತಿ ತನ್ನ ಪ್ರಯತ್ನಗಳಿಂದ ಪೂರ್ಣ ಸಂಘರ್ಷದ ನಂತರ ಸಫಲತೆ ಪಡೆಯುತ್ತಾನೆ. ಕಿರು ಬೆರಳಿನ ಬಣ್ಣ ಹಳದಿಯಾಗಿದ್ದರೆ ವ್ಯಕ್ತಿ ಪ್ರತಿಯೊಂದು ಸಂಭವ ಮತ್ತು ಅಸಂಭವ ಪ್ರಯತ್ನಗಳನ್ನು ಮಾಡಿದರೂ ಸಹ ಸಫಲತೆ ದೊರೆಯುವುದಿಲ್ಲ.

**ಊರ್ಧ್ವಮುಖ ಗೋಧಿ ಚಿಹ್ನೆ:** ಒಂದು ವೇಳೆ ಕಿರು ಬೆರಳಿನ ತುದಿಯ ಮೇಲೆ ಊರ್ಧ್ವ ಮುಖ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಜೀವನದಲ್ಲಿ ಆಕಸ್ಮಾತ್ ಸಹಾಯ ಸಿಗುತ್ತದೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ಜೀವನದಲ್ಲಿ ವ್ಯಕ್ತಿಗೆ ಯಾವುದೇ ರೀತಿಯ

ತೊಂದರ ಉಂಟಾಗುವುದಿಲ್ಲ.

**ಅಧಃಮುಖ ಗೋಧಿ ಚಿಹ್ನೆ:** ಕಿರು ಬೆರಳಿನ ಮೇಲೆ ಅಪೂರ್ಣ ಅಧಃಮುಖ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯ ಜೀವನದಲ್ಲಿ ಪ್ರತಿಯೊಂದು ಕ್ಷೇತ್ರದಲ್ಲಿಯೂ ವಿಪತ್ತನ್ನು ಎದುರಿಸಬೇಕಾಗುತ್ತದೆ. ಆದರೆ ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವೃದ್ಧಾವಸ್ಥೆ ಸುಖಮಯವಾಗಿ ಕಳೆಯುತ್ತದೆ.

**ಎಡಮುಖ ಗೋಧಿ ಚಿಹ್ನೆ:** ಕಿರು ಬೆರಳಿನ ಮೇಲೆ ಎಡಮುಖ ಅಪೂರ್ಣ ಗೋದಿಯ ಚಿಹ್ನೆ ಇದ್ದರೆ ವ್ಯಕ್ತಿಗೆ ಉದ್ಯಮದಲ್ಲಿ ಪಾಲುದಾರ ಮೋಸ ಮಾಡುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಮತ್ತು ಪಾಲುದಾರ ನ್ಯಾಯಾಲಯಕ್ಕೆ ಹೋಗಬೇಕಾಗುತ್ತದೆ. ಕೊನೆಗೆ ವ್ಯಕ್ತಿಗೆ ಸೋಲುಂಟಾಗುತ್ತದೆ.

**ದಕ್ಷಿಣಾವರ್ತ ಗೋಧಿ ಚಿಹ್ನೆ:** ಕಿರುಬೆರಳಿನ ಮೇಲೆ ದಕ್ಷಿಣಾವರ್ತ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಪಿತ್ರಾರ್ಜಿತ ಸಂಪತ್ತನ್ನು ಭೋಗಿಸಲಾಗುವುದಿಲ್ಲ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಪಿತ್ರಾರ್ಜಿತ ಸಂಪತ್ತನ್ನು ಪ್ರಾಪ್ತಿ ಮಾಡಿಕೊಳ್ಳುವುದರಲ್ಲಿ ಸಫಲತೆಯನ್ನು ಪಡೆಯುತ್ತಾನೆ.

**ಹೆಬ್ಬೆರಳಿನ ಮೇಲೆ ಗೋಧಿ ಚಿಹ್ನೆ:** ಒಂದು ವೇಳೆ ಹೆಬ್ಬೆರಳು ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ವ್ಯರ್ಥ ಬೊಗಳೆಯವನು, ಅಹಂಕಾರಿಯು, ಕಠೋರ ಹೃದಯಿಯು, ದುಷ್ಟನು ಆಗುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಕೊಲೆಗಾರನಾಗುತ್ತಾನೆ. ಜೀವನಪರ್ಯಂತ ನ್ಯಾಯಾಲಯ ಮತ್ತು ಕಛೇರಿಗಳಿಗೆ ಓಡಾಡುತ್ತಾನೆ.

ಹೆಬ್ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಸಾಮಾನ್ಯ ಕಲಾಕಾರನಾಗುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಶ್ರೇಷ್ಠ ಕಲಾಕಾರನಾಗುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ತಂದೆಯ ಹೆಸರನ್ನು ಬೆಳಗಿಸಲು ಸಮರ್ಥವಾಗಿರುತ್ತದೆ.

ಹೆಬ್ಬೆರಳಿನ ತುದಿ ಚಪ್ಪಟೆಯಾಗಿ ಕುಳಿತುಕೊಂಡಂತಿದ್ದರೆ ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಹೀನಭಾವನೆಯನ್ನು ಹೊಂದಿ ಅಸಫಲತೆಯನ್ನು ಪಡೆಯುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ಮಿತ್ರನಿಂದ ಸಹಾಯ ದೊರೆಯುವಂತೆ ಮಾಡುತ್ತದೆ.

ಹೆಬ್ಬೆರಳಿನ ತುದಿ ಗೋಲಾಕಾರವಾಗಿ ತುಂಬಿಕೊಂಡಂತಿದ್ದರೆ ಅಪೂರ್ಣ ಗೋಧಿ ಚಿಹ್ನೆ ಇದ್ದರೆ ವ್ಯಕ್ತಿ ಸಫಲ ಉದ್ಯಮಿಯು ಮತ್ತು ಕೂಟ ನೀತಿಜ್ಞನು ಆಗುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ರಾಜಕೀಯದಲ್ಲಿ ಸಫಲತೆ ನೀಡುತ್ತದೆ.

ಗುಲಾಬಿ ಬಣ್ಣದ ಹೆಬ್ಬೆರಳು ಮತ್ತು ಅದರ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ಪ್ರಭಾವದಲ್ಲಿ ನ್ಯೂನತೆ ಉಂಟಾಗುತ್ತದೆ. ಪೂರ್ಣ ಗೋಧಿಯ ಚಿಹ್ನೆ ಪ್ರಭಾವವನ್ನು ಹೆಚ್ಚುವಂತೆ ಮಾಡುತ್ತದೆ. ಕೆಂಪು ಬಣ್ಣದ ಹೆಬ್ಬೆರಳಿನ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಗೆ ಧನಹಾನಿ ಮತ್ತು ಮಾನಹಾನಿ ಉಂಟಾಗುತ್ತದೆ. ಪೂರ್ಣ ಗೋಧಿಯ ಚಿಹ್ನೆ ಸಂಪೂರ್ಣ ಗೌರವ ನೀಡುತ್ತದೆ. ಹಳದಿ ವರ್ಣದ ಹೆಬ್ಬೆರಳಿನ ಮೇಲೆ ಅಪೂರ್ಣ ಗೋಧಿಯ ಚಿಹ್ನೆ ತೊನ್ನು ರೋಗವನ್ನು ನೀಡುತ್ತದೆ. ಪೂರ್ಣ ಗೋಧಿಯ ಚಿಹ್ನೆ ಗುಪ್ತರೋಗವನ್ನು ನೀಡುತ್ತದೆ.

**ಊರ್ಧ್ವಮುಖ ಗೋಧಿ ಚಿಹ್ನೆ:** ಹೆಬ್ಬೆರಳಿನ ಮೇಲೆ ಊರ್ಧ್ವಮುಖಿ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಅವಶ್ಯಕತೆಗಿಂತ ಹೆಚ್ಚು ಪ್ರಾಮಾಣಿಕನಾಗಿರುತ್ತಾನೆ. ಆದರೆ ವಾಸ್ತವಿಕತೆ ಸರ್ವಥಾ ಭಿನ್ನವಾಗಿರುತ್ತದೆ. ಪೂರ್ಣಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ದೇಶ, ಕಾಲ, ಪರಿಸ್ಥಿತಿ ನೋಡಿಕೊಂಡು ನಡೆಯುವಂತೆ ಕಲಿಸುತ್ತದೆ.

**ಅಧಃಮುಖ ಗೋಧಿ ಚಿಹ್ನೆ:** ಹೆಬ್ಬೆರಳಿನ ಮೇಲೆ ಅಧಃಮುಖಿ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಕೆಳಮಟ್ಟದ ಕಾರ್ಯಗಳಿಂದ ಹಣ ಸಂಪಾದಿಸುತ್ತಾನೆ. ಪೂರ್ಣ ಗೋಧಿಯ ಚಿಹ್ನೆ ವ್ಯಕ್ತಿ ಪಥಭ್ರಷ್ಟನಾಗುವಂತೆ ಮಾಡುತ್ತದೆ.

**ಎಡಮುಖ ಗೋಧಿ ಚಿಹ್ನೆ:** ಹೆಬ್ಬೆರಳಿನ ಮೇಲೆ ಎಡಮುಖಿ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಯನ್ನು ಪರಸ್ತ್ರೀಗಾಮಿ ಯಾಗುವಂತೆ ಮಾಡುತ್ತದೆ, ಆದರೆ ಅದರಿಂದ ಕೆಟ್ಟ ಹೆಸರು ಬರುವುದಿಲ್ಲ.

**ದಕ್ಷಿಣಾವರ್ತ ಗೋಧಿ ಚಿಹ್ನೆ:** ಹೆಬ್ಬೆರಳಿನ ಮೇಲೆ ದಕ್ಷಿಣಾವರ್ತ ಅಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿ ಅಸಫಲ ಪ್ರೇಮಿಯಾಗುತ್ತಾನೆ.

ಪೂರ್ಣ ಗೋಧಿಯ ಚಿಹ್ನೆ ಇದ್ದರೆ ವ್ಯಕ್ತಿಗೆ ಪ್ರೇಮದಲ್ಲಿ ಅಸಫಲತೆಯನ್ನು ನೀಡಿದರೂ ಸಹ ಅವನ ಪ್ರತಿ ಸತ್ಯ, ಸಂತುಷ್ಟತೆ, ನಿಷ್ಠಾವಂತನನ್ನಾಗಿ ಮಾಡುತ್ತದೆ.

**42. ತೋರಣ**

ಈ ಚಿಹ್ನೆ ಶುಭತೆಯ ಜೊತೆ ಜೊತೆಯಲ್ಲೇ ಸದ್ಗೃಹಸ್ಥನಾಗುವ ಮತ್ತು ಶುಭ ಆನಂದಮಯ ಜೀವನ ನಡೆಸುವ ಮತ್ತು ಸಮೃದ್ಧಿ ಹೊಂದುವ ಪ್ರತೀಕವಾಗಿದೆ. ಇಂತಹ ವ್ಯಕ್ತಿಯ ಬಳಿ ಭೂಮಿ, ಭವನ ಮತ್ತು ಸಮಸ್ತ ಸಾಂಸಾರಿಕ ವೈಭವವಿರುತ್ತದೆ. ಇಂತಹ ವ್ಯಕ್ತಿ ಪ್ರಪಂಚದಲ್ಲಿ ಕೀರ್ತಿ, ಗೌರವ ಪಡೆದುಕೊಳ್ಳುತ್ತಾನೆ. ನ್ಯೂನತೆ, ಅಭಾವ, ರೋಗ ಮತ್ತು ಕಷ್ಟ ಈ ವ್ಯಕ್ತಿಯಿಂದ ದೂರಕ್ಕೆ ಓಡಿ ಹೋಗುವಂತೆ ಕಾಣಿಸುತ್ತದೆ. ಈ ವ್ಯಕ್ತಿ ಮೇಲ್ಮಟ್ಟದ ವಾಹನ ಸುಖವನ್ನು ಪ್ರತಿ ಕ್ಷಣ ಭೋಗಿಸುತ್ತಾನೆ.

**43. ಕುದುರೆ**

ಈ ಚಿಹ್ನೆ ಇರುವ ವ್ಯಕ್ತಿ ಕುದುರೆ ಸವಾರಿ ಮಾಡುವವನಾಗಿರುತ್ತಾನೆ. ಆಡಳಿತ ಅಧಿಕಾರಿ ಅಥವಾ ಉಚ್ಚಮಟ್ಟದ ಉದ್ಯಮಿ, ಸಂಪನ್ನ ಪ್ರತಿಷ್ಠಿತ ಮತ್ತು ಗೌರವಾನ್ವಿತ ಮುಖಂಡ ಇವನಾಗುತ್ತಾನೆ. ಶಾರೀರಿಕ ದೃಷ್ಟಿಯಿಂದ ಈ ವ್ಯಕ್ತಿ ಆರೋಗ್ಯವನಂತನಾಗಿರುತ್ತಾನೆ.

**44. ಸಿಂಹ**

ಈ ಚಿಹ್ನೆ ಧೈರ್ಯ, ಬಲ, ಸಾಹಸ, ಐಶ್ವರ್ಯ ಮತ್ತು ಅನುಶಾಸನದ ಪ್ರತೀಕವಾಗಿದೆ. ಇಂತಹ ವ್ಯಕ್ತಿ ಅತ್ಯಂತ ಶೂರನೂ, ವೀರನೂ, ಯುದ್ಧಪ್ರಿಯನು, ಶತ್ರುನಾಶಕನು, ವೈಭವಶಾಲಿಯೂ, ಉತ್ತಮ ರಾಜ ಪುರುಷನೂ ಆಗಿರುತ್ತಾನೆ.

**45. ಆನೆ**

ಈ ಚಿಹ್ನೆ ಉತ್ತಮೋತ್ತಮ ರಾಜಪುರುಷ, ಶ್ರೇಷ್ಠತಮ ವೈಭವ, ಕೀರ್ತಿಯ ಪ್ರತೀಕವಾಗಿದೆ. ಆನೆಯ ಅಂಬಾರಿಯ ಮೇಲೆ ಕುಳಿತು ಕೊಳ್ಳುವ ಮಹಾ ಸೌಭಾಗ್ಯಶಾಲಿ, ರಾಜಪೂಜಿತ, ಉಚ್ಚಪದಾಧಿಕಾರಿ, ಉಚ್ಚಮಟ್ಟದ ಉದ್ಯಮಿ ಈ ವ್ಯಕ್ತಿಯಾಗುತ್ತಾನೆ.

**46. ಸೂರ್ಯ**

ಈ ಚಿಹ್ನೆ ಅನುಶಾಸನ ಮತ್ತು ತೇಜಸ್ಸಿನ ಪ್ರತೀಕವಾಗಿದೆ. ಇಂತಹ ವ್ಯಕ್ತಿ ನೈತಿಕ ಆದರ್ಶಗಳಿಗೆ ಪ್ರಾಣ ಕೊಡುವಂಥವನು, ಸಾತ್ವಿಕ ಸತ್ಯಾನ್ವೇಷಿಯೂ, ಭೂಮಿಪತಿಯು, ಸೇವಾವೃತ್ತಿಯುವನು, ದಯಾಳುವೂ, ಪರೋಪಕಾರಿಯೂ, ಧಾರ್ಮಿಕನು, ವಿದ್ವಾಂಸನು, ಪ್ರಭಾವಶಾಲಿಯು, ದೇವಗುರುವು, ಅತಿಥಿ ಪೂಜಕನು, ಸದ್ಗುಣಶಾಲಿಯು ಮಾನನೀಯ ಯಶಸ್ವಿಯೂ, ಪ್ರತಾಪಿಯೂ ಆಗಿರುತ್ತಾನೆ.

**47. ಚಂದ್ರ**

ಈ ಚಿಹ್ನೆ ಅಜ್ಞಾಂಧಕಾರವನ್ನು ಅಳಿಸುವ, ತೇಜಸ್ಸನ್ನು ನೀಡುವ ಪ್ರತೀಕವಾಗಿದೆ. ಮೇಲೆ ಹೇಳಿದ ಸೂರ್ಯನ ಗುಣಗಳಿಗಿಂತಲೂ ಹೆಚ್ಚು ಶುಭಗುಣಗಳಿರುತ್ತವೆ. ಇಂತಹ ವ್ಯಕ್ತಿ ಶಾಂತನು, ಗಂಭೀರನು ಮತ್ತು ಕ್ಷಮಾಶೀಲನು ಆಗಿರುತ್ತಾನೆ.

ಒಂದು ವೇಳೆ ಸ್ತ್ರೀಯ ಕೈಲಿ ಈ ಚಿಹ್ನೆ ಇದ್ದರೆ ಅವಳು ಪರಮಸುಂದರಿಯೂ, ಗೌರವಾನ್ವಿತಳು, ಮೋಹಿನಿಯು, ಪ್ರಭಾವಿಯೂ, ಆಕರ್ಷಣೀಯಳೂ ಆಗಿರುತ್ತಾಳೆ.

**48. ನವಿಲು**

ಈ ಚಿಹ್ನೆ ಇರುವ ವ್ಯಕ್ತಿ ಕಲಾಕಾರನು, ಉಚ್ಚ ಅಭಿಲಾಷಿಯು, ಸಂಗೀತ ವಾದ್ಯಗಳ ಪ್ರೇಮಿಯೂ ಆಗಿರುತ್ತಾನೆ. ಇಂತಹ ವ್ಯಕ್ತಿ ಅಂತರ್ಮುಖಿಯಾಗಿರುತ್ತಾನೆ. ಇವನ ಬಾಹ್ಯ ವ್ಯಕ್ತಿತ್ವ ಲುಪ್ತವಾಗಿರುತ್ತದೆ. ಈ ವ್ಯಕ್ತಿ ಹಣವಂತನು, ಐಶ್ವರ್ಯಶಾಲಿಯೂ ಆಗಿರುತ್ತಾನೆ. ಈ ವ್ಯಕ್ತಿ ತನ್ನ ಪ್ರೌಢಾವಸ್ಥೆಯಲ್ಲಿ ವಿಶೇಷ ಸಫಲತೆಯನ್ನು ಪಡೆದುಕೊಳ್ಳುತ್ತಾನೆ.

ಒಂದು ವೇಳೆ ಸ್ತ್ರೀಯ ಕೈಲಿ ಈ ಚಿಹ್ನೆ ಇದ್ದರೆ ಅವಳ ಸ್ವರ ಕೋಗಿಲೆಯ ಸ್ವರದಂತಿರುತ್ತದೆ ಮತ್ತು ಅವಳು ಸುಂದರಿಯೂ, ಆಕರ್ಷಕಳೂ ಆಗಿರುತ್ತಾಳೆ. ಇವಳು ರಸಿಕ ಪ್ರಿಯಳೂ ಮತ್ತು ಭೋಗಪ್ರಿಯಳೂ ಆಗಿರುತ್ತಾಳೆ.

**49. ಹಂಸ**

ಈ ಚಿಹ್ನೆ ಇರುವ ವ್ಯಕ್ತಿಗೆ ಲಕ್ಷ್ಮಿ ಮತ್ತು ಸರಸ್ವತಿಯರಿಬ್ಬರ ಸಮಾನ ಕೃಪೆ ಇರುತ್ತದೆ. ಇಂತಹ ವ್ಯಕ್ತಿ ಗಾಯತ್ರಿಯ ಉಪಾಸಕನು, ವಿದ್ವಾಂಸನು, ಧಾರ್ಮಿಕನು, ಅಭಿಜಿತನು, ದೇವಪ್ರಿಯನು, ವೇದಪುರಾಣಗಳ ತಿಳುವಳಿಕೆ ಉಳ್ಳವನು, ಯಾಜ್ಞಿಕ ಕಾರ್ಯವನ್ನು ಮಾಡುವವನು ಆಗಿರುತ್ತಾನೆ. ಇವನ ವಯಸ್ಸಿನ ಜೊತೆ ಜೊತೆಯಲ್ಲೇ ಆಧ್ಯಾತ್ಮಿಕ ಭಾವನೆ ಹೆಚ್ಚಾಗುತ್ತಾ ಹೋಗುತ್ತದೆ. ಇವನು ಯಂತ್ರ, ಮಂತ್ರ, ತಂತ್ರಗಳನ್ನು ತಿಳಿದವನು, ಸಿದ್ಧಪುರುಷನು ಆಗಿರುತ್ತಾನೆ. ಇವನು ಧರ್ಮಸಂಸ್ಥೆಯ ಸಂಚಾಲಕ ಅಥವಾ ಧರ್ಮ ಪ್ರಚಾರಕನಾಗಿರುತ್ತಾನೆ.

**50. ಆಮೆ**

ಈ ಚಿಹ್ನೆ ಜಲಯಾತ್ರೆ ಮತ್ತು ವಿದೇಶಾಟನೆಯ ಪ್ರತೀಕವಾಗಿದೆ.

ಇಂತಹ ವ್ಯಕ್ತಿ ಜೀವನದಲ್ಲಿ ಅವಶ್ಯವಾಗಿ ಸಮುದ್ರದಾಚೆಯ ಯಾತ್ರೆ ಮಾಡುತ್ತಾನೆ. ಆದ್ದರಿಂದ ಇಂತಹವನು ಬಹು ಎಚ್ಚರಿಕೆಯಿಂದಿರಬೇಕು. ಇಂತಹ ವ್ಯಕ್ತಿ ಧನ, ಧಾನ್ಯ, ವೈಭವ ಸಂಪನ್ನನಾಗಿರುತ್ತಾನೆ. ಈ ವ್ಯಕ್ತಿ ಸಮಾಜದ ಮುಖಂಡತ್ವವನ್ನು ವಹಿಸುತ್ತಾನೆ.

**51. ಪರ್ವತ**

ಈ ಚಿಹ್ನೆ ಇರುವ ವ್ಯಕ್ತಿ ಧೈರ್ಯಶಾಲಿಯು, ಸ್ಥಿರನು ಆಗಿರುತ್ತಾನೆ. ಇಂತಹ ವ್ಯಕ್ತಿ ದೃಢನಿಶ್ಚಯಿಯು, ಸ್ಥಿರ ಬುದ್ಧಿಯವನು, ಉನ್ನತ ಜೀವನ ನಡೆಸುವವನು, ಧನವಂತನು, ವೈಭವಶಾಲಿಯು, ಉಚ್ಚ ಅಭಿಲಾಷಿಯು, ಭೂಮಿ, ಭವನ, ವಾಹನ ಸಂಪನ್ನನು, ಉಚ್ಚ ಉದ್ಯಮಿಯೂ ಆಗಿರುತ್ತಾನೆ. ಗುತ್ತಿಗೆ ಹಿಡಿಯುವವರ ಕೈಲಿ ಇಂತಹ ಚಿಹ್ನೆ ಇರುತ್ತದೆ.

**52. ಕಳಶ**

ಈ ಚಿಹ್ನೆಗೆ ಧಾರ್ಮಿಕ ಮಹತ್ವವಿದೆ. ಇಂತಹ ವ್ಯಕ್ತಿ ಸಾಧನ ಸಂಪನ್ನನು, ಉದ್ಯಮಿಯು, ಸತ್ಕರ್ಮಗಳಿಗೆ ಹಣ ಖರ್ಚು ಮಾಡುವವನು ಆಗಿರುತ್ತಾನೆ. ಇಂತಹ ವ್ಯಕ್ತಿ ಸಾರ್ವಜನಿಕ ಕಾರ್ಯ ಮಾಡುವುದರಲ್ಲಿ ಕಾಲ ಕಳೆಯುತ್ತಾನೆ.

**53. ಲಕ್ಷ್ಮಿ**

ಕೈನಲ್ಲಿ ಲಕ್ಷ್ಮಿ ಚಿಹ್ನೆ ಮಹಾನ್ ಐಶ್ವರ್ಯ, ಸೌಭಾಗ್ಯ ಮತ್ತು ಸುಖ ನೀಡುವಂಥಹದಾಗಿದೆ. ಈ ಚಿಹ್ನೆ ಇರುವ ವ್ಯಕ್ತಿ ಐಶ್ವರ್ಯ ಸಂಪನ್ನನು, ಸರ್ವ ರೀತಿಯಲ್ಲಿ ಸುಖಿಯೂ ಆಗಿರುತ್ತಾನೆ. ಇವನ ಜೀವನದಲ್ಲಿ ದುಃಖ, ಸಂಕಟ, ರೋಗ, ಕಷ್ಟ ಎಂದೂ ಬರುವುದಿಲ್ಲ. ದಾನ, ಪುಣ್ಯ, ಪರೋಪಕಾರಕ್ಕಾಗಿ ಹಣ ವ್ಯಯ ಮಾಡುತ್ತಾನೆ. ಈ ವ್ಯಕ್ತಿ ಚೆನ್ನಾಗಿ ಸಮಾಜದ ಮುಖಂಡತ್ವ ನಿರ್ವಹಿಸುತ್ತಾನೆ. ಇಂತವನ ಪತ್ನಿ ಲಕ್ಷ್ಮಿಯಂತೆ ಸುಂದರಳು ಸೌಭಾಗ್ಯಶಾಲಿಯೂ ಆಗಿರುತ್ತಾಳೆ.

**54. ಕೊಳ**

ಈ ಚಿಹ್ನೆಯ ಪ್ರಭಾವ ಪರೋಪಕಾರ, ಉದಾರತೆ, ದಾನ, ಪುಣ್ಯ, ಧಾರ್ಮಿಕ ಕಾರ್ಯಗಳಲ್ಲಿ ಆಗುತ್ತದೆ. ಹೆಚ್ಚು ಹಣ ಇಲ್ಲದೇ ಹೋದರೂ ದಾನಮಯ ಸ್ವಭಾವವಿರುತ್ತದೆ. ಇಂತಹ ವ್ಯಕ್ತಿ ಸೇವಾಕಾರ್ಯವನ್ನು ಮನಸ್ಸಿಟ್ಟು ಮಾಡುತ್ತಾನೆ.

**55. ಕುಂಡ**

ಇಂತಹ ಚಿಹ್ನೆ ಇರುವ ವ್ಯಕ್ತಿಗಳೂ ಪರೋಪಕಾರಿಗಳಾಗಿರುತ್ತಾರೆ. ಬೇಸಿಗೆಯಲ್ಲಿ ತಂಪು ಪಾನೀಯಗಳನ್ನು ಹಂಚುವುದು, ಮರಗಳನ್ನು ಬೆಳೆಸುವುದು, ಹಸಿದವರಿಗೆ ಅನ್ನ ನೀಡುವುದು ಇಂತಹ ಚಿಹ್ನೆ ಇರುವ ವ್ಯಕ್ತಿಗಳ ಗುಣವಾಗಿರುತ್ತದೆ.

**56. ಸರೋವರ**

ಇಂತಹ ಚಿಹ್ನೆ ಇರುವ ವ್ಯಕ್ತಿಗಳು ಕಾರ್ಯ ಕುಶಲರು, ಗಂಭೀರರು, ಧರ್ಮಾತ್ಮರು ಆಗಿರುತ್ತಾರೆ. ಕೃಷಿ ಕಾರ್ಯದಲ್ಲಿ ಇವರು ಚೆನ್ನಾಗಿ ಸಫಲರಾಗುತ್ತಾರೆ. ಸ್ತ್ರೀಯರ ಕೈಯಲ್ಲಿ ಈ ಚಿಹ್ನೆ ಇದ್ದರೆ ಅಂತಹ ಸ್ತ್ರೀಯರು ಅತ್ಯಂತ ದಯಾಶೀಲರು, ಪತಿ ಪ್ರಿಯರು, ದೇವರ ಬಗ್ಗೆ ನಿಷ್ಠಾವಂತರು ಆಗಿರುತ್ತಾರೆ.

**57. ವಜ್ರ**

ಕೈಯಲ್ಲಿ ಈ ಚಿಹ್ನೆ ಶಕ್ತಿ, ಸಾಹಸ, ಸಾಮರ್ಥ್ಯ ಮತ್ತು ಆತ್ಮವಿಶ್ವಾಸದ ಪ್ರತೀಕವಾಗಿದೆ.

**ತೋರು ಬೆರಳಿನಲ್ಲಿ ವಜ್ರ ಚಿಹ್ನೆ:** ತೋರು ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಪ್ರಬಲ ಸಾಹಸಿಯು ಮತ್ತು ರಾಜಕೀಯ ಸೇವೆಯಲ್ಲಿ ಸಫಲತಮ ಆಡಳಿತ ಮಾಡುವವನು ಆಗಿರುತ್ತಾನೆ.

ತೋರು ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಪ್ರತಿಯೊಂದು ಕಾರ್ಯದ ಆರಂಭವನ್ನು ಜೋರು ಜೋರಾಗಿ ಮಾಡುತ್ತಾನೆ, ಆದರೆ ಸ್ವಲ್ಪವೇ ತೊಂದರೆ ಅಥವಾ ಅಡಚಣೆ ಉಂಟಾದರೆ ಆ ಕಾರ್ಯವನ್ನು ಕೈ ಬಿಟ್ಟು ಬೇರೊಂದು ಕಾರ್ಯದ ಕಡೆಗೆ ತೊಡಗುತ್ತಾನೆ.

ತೋರು ಬೆರಳಿನ ತುದಿ ಚಪ್ಪಟೆಯಾಗಿದ್ದರೆ ಮತ್ತು ಕುಳಿತುಕೊಂಡಂತಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಹೇಡಿಯು, ಅಂಜುಬುರುಕನೂ ಆಗಿರುತ್ತಾನೆ. ಹೊತು ಹೋದವನಂತೆ, ಅರಿಹೋದ ಕೆಂಡದಂತೆ ಜೀವನ ಕಳೆಯುತ್ತಾನೆ.

ಒಂದು ವೇಳೆ ಬೆರಳಿನ ತುದಿ ಗೋಲಾಕಾರವಾಗಿ ತುಂಬಿಕೊಂಡಂತಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಬೇಜವಾಬ್ದಾರಿಯು ಆದರೆ ಧೈರ್ಯ ಶಾಲಿಯೂ ಆಗಿರುತ್ತಾನೆ. ತೋರು

ಬೆರಳು ಗುಲಾಬಿ ಬಣ್ಣಕ್ಕಿದ್ದರೆ ಅದು ಕ್ಷಮೆ, ಧೈರ್ಯದಂತಹ ಗುಣಗಳನ್ನು ನೀಡುತ್ತದೆ. ಕೆಂಪು ಬಣ್ಣದ ಬೆರಳು ಕ್ರೋಧ, ಚಂಚಲತೆಯಂತಹ ಗುಣಗಳನ್ನು ನೀಡುತ್ತದೆ. ಹಳದಿ ಬಣ್ಣದ ಬೆರಳು ಕಳಂಕವನ್ನು ನೀಡುತ್ತದೆ.

**ಊರ್ಧ್ವವಜ್ರ:** ತೋರು ಬೆರಳಿನ ಮೇಲೆ ಊರ್ಧ್ವವಜ್ರ ಪ್ರಬಲ ಸಾಹಸ, ಧೈರ್ಯ, ಉತ್ಸುಕತೆ ನೀಡುತ್ತದೆ.

**ಅಧಃವಜ್ರ:** ತೋರು ಬೆರಳಿನ ಮೇಲೆ ಅಧಃವಜ್ರವಿದ್ದರೆ ವ್ಯಕ್ತಿ ಮೋಸದಿಂದ, ಕಪಟದಿಂದ ಶತ್ರುವನ್ನು ಸೋಲಿಸುವುದರಲ್ಲಿ ನಂಬಿಕೆ ಇರಿಸಿಕೊಂಡಿರುತ್ತಾನೆ.

**ಎಡವಜ್ರ:** ಎಡ ಮುಖಿ ವಜ್ರ ಮುಖಂಡತ್ವದ ಗುಣವನ್ನು ನೀಡುತ್ತದೆ. ಇಂತಹ ವ್ಯಕ್ತಿ ಮುಖಂಡನಾಗುತ್ತಾನೆ ಮತ್ತು ಸಮಾಜದಲ್ಲಿ ಕೀರ್ತಿ ಗಳಿಸುತ್ತಾನೆ.

**ದಕ್ಷಿಣಾವರ್ತ ವಜ್ರ:** ತೋರು ಬೆರಳಿನಲ್ಲಿ ದಕ್ಷಿಣಾವರ್ತ ವಜ್ರವಿದ್ದರೆ ವ್ಯಕ್ತಿ ಗೌರವಾನ್ವಿತ ಜೀವನವನ್ನು ಬದುಕುತ್ತಾನೆ. ಪ್ರಶಾಸನಿಕ ಸೇವೆಯಲ್ಲಿ ಉಚ್ಚ ಪದವಿ ಪಡೆಯುತ್ತಾನೆ.

**ಮಧ್ಯದ ಬೆರಳಿನಲ್ಲಿ ವಜ್ರ ಚಿಹ್ನೆ:** ಮಧ್ಯದ ಬೆರಳಿನ ಅಗ್ರಭಾಗ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಕ್ರೂರನು ಮತ್ತು ಕ್ರೋಧಿಯೂ ಆಗುತ್ತಾನೆ. ಇವರ ಈ ರೀತಿಯ ಸ್ವಭಾವದಿಂದಾಗಿ ಆಗುವ ಕೆಲಸವೂ ಹಾಳಾಗಿಹೋಗುತ್ತದೆ.

ಮಧ್ಯದ ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಖಳನಾಯಕನಾಗುತ್ತಾನೆ. ರಂಗ ಮಂಚದ ಕಾರ್ಯ ಮಾಡುತ್ತಾನೆ. ಕೀರ್ತಿಯನ್ನು ಗಳಿಸುತ್ತಾನೆ.

ಮಧ್ಯದ ಬೆರಳಿನ ತುದಿ ಚಪ್ಪಟೆಯಾಗಿ ಕುಳಿತುಕೊಂಡಂತಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಅವಶ್ಯ ಕೊಲೆಗಾರನಾಗುತ್ತಾನೆ. ಅವನಿಗೆ ಶಾಸಕೀಯ ದಂಡನೆ ಅಥವಾ ಯಾತನೆಯನ್ನು ಅನುಭವಿಸಬೇಕಾಗುತ್ತದೆ.

ಒಂದು ವೇಳೆ ಮಧ್ಯದ ಬೆರಳಿನ ತುದಿ ಗುಂಡಾಗಿದ್ದರೆ ಮತ್ತು ತುಂಬಿಕೊಂಡಂತಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಮುಖಂಡತ್ವ ಮಾಡಬೇಕಾಗುತ್ತದೆ. ಇಂತಹ ವ್ಯಕ್ತಿ ಬಹಳ ಚೆನ್ನಾಗಿ ಸಮಾಜದ ನಿಯಂತ್ರಣ ಮತ್ತು ಸಂಚಾಲನ ಮಾಡುತ್ತಾನೆ.

ಮಧ್ಯದ ಬೆರಳು ಗುಲಾಬಿ ಬಣ್ಣಕ್ಕಿದ್ದರೆ ವ್ಯಕ್ತಿ ನಿಷ್ಕ್ರಿಯ ಜೀವನ

ಕಳೆಯುತ್ತಾನೆ. ಒಂದು ವೇಳೆ ಬೆರಳು ಕೆಂಪು ಬಣ್ಣಕ್ಕಿದ್ದರೆ ವ್ಯಕ್ತಿ ಅಸಂಭವವನ್ನು ಸಂಭವ ಮಾಡುವ ಪ್ರತಿಕೂಲವನ್ನು ಅನುಕೂಲ ಮಾಡಿಕೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತಾನೆ. ಬೆರಳು ಹಳದಿ ಬಣ್ಣಕ್ಕಿದ್ದರೆ ವ್ಯಕ್ತಿ ತನ್ನ ತಪ್ಪುಗಳಿಂದ ಆಗುವ ಕೆಲಸವನ್ನು ಕೆಡಿಸುತ್ತಾನೆ ಮತ್ತು ವ್ಯರ್ಥ ಜೀವನ ಸವೆಸುತ್ತಾನೆ.

**ಊರ್ಧ್ವವಜ್ರ:** ಮಧ್ಯದ ಬೆರಳಿನ ಮೇಲೆ ಊರ್ಧ್ವ ವಜ್ರವಿದ್ದರೆ ವ್ಯಕ್ತಿ ಪ್ರಬಲ ಸಾಹಸಿಯೂ, ಧೈರ್ಯವಂತನು, ತೊಂದರೆಗಳನ್ನು ಎದುರಿಸುವುದರಲ್ಲಿ ಬುದ್ಧಿವಂತನು ಆಗಿರುತ್ತಾನೆ.

**ಅಧಃವಜ್ರ:** ಮಧ್ಯದ ಬೆರಳಿನ ಮೇಲೆ ಅಧಃಮುಖಿ ವಜ್ರವಿದ್ದರೆ ವ್ಯಕ್ತಿ ಪಾಪಕಾರ್ಯವನ್ನು ಮಾಡುವವನು, ಮನಸ್ಸಿನಿಂದ ಕುಟಿಲನು, ದುಷ್ಟನು, ತೋರಿಕೆಯ ಜೀವನವನ್ನು ಬದುಕುವವನು, ಮನಸ್ಸಿನಲ್ಲಿ ದ್ವೇಷ ಭಾವನೆಯನ್ನು ಇಟ್ಟುಕೊಳ್ಳುವವನೂ ಆಗಿರುತ್ತಾನೆ.

**ಎಡವಜ್ರ:** ಮಧ್ಯದ ಬೆರಳಿನ ಮೇಲೆ ಎಡ ವಜ್ರವಿದ್ದರೆ ವ್ಯಕ್ತಿ ಹಠ ಸ್ವಭಾವದವನು ಮತ್ತು ಹಠ ಧಾರ್ಮಿಕತೆಯವನು ಆಗಿರುತ್ತಾನೆ. ಇವರು ನಾಶ ಹೊಂದಿದರೂ ಸಹ ಬೇರೊಬ್ಬರ ಮುಂದೆ ತಲೆ ಬಾಗುವುದಿಲ್ಲ. ಆತ್ಮಾಭಿಮಾನ ಬಹಳ ಹೆಚ್ಚಾಗಿ ಇರುತ್ತದೆ. ಇವರು ಒಂದು ಬಾರಿ ನಿರ್ಧಾರ ತೆಗೆದುಕೊಂಡರೆ ಎಂದಿಗೂ ಬದಲಿಸುವುದಿಲ್ಲ.

**ದಕ್ಷಿಣ ವಜ್ರ:** ಮಧ್ಯದ ಬೆರಳಿನ ಮೇಲೆ ದಕ್ಷಿಣ ವಜ್ರವಿದ್ದರೆ ವ್ಯಕ್ತಿ ಅತ್ಯಂತ ಬುದ್ಧಿವಂತನು ಮತ್ತು ಮೇಲು-ಕೀಳು, ಜಯ-ಪರಾಜಯ, ಕೀರ್ತಿ-ಅಪಕೀರ್ತಿ, ಲಾಭ-ನಷ್ಟ ಮುಂತಾದವುಗಳನ್ನು ಚೆನ್ನಾಗಿ ಅರ್ಥ ಮಾಡಿಕೊಳ್ಳುವವನಾಗಿರುತ್ತಾನೆ. ಇವನು ದೃಢ ನಿಶ್ಚಯದವನು ಮತ್ತು ಕುಶಲನೂ ಆಗಿರುತ್ತಾನೆ.

**ಉಂಗುರದ ಬೆರಳಿನಲ್ಲಿ ವಜ್ರ ಚಿಹ್ನೆ:** ಉಂಗುರದ ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ತನ್ನ ಕಾರ್ಯಗಳಿಂದ ಕೆಟ್ಟ ಹೆಸರು ಪಡೆಯುತ್ತಾನೆ.

ಉಂಗುರದ ಬೆರಳಿನ ಅಗ್ರಭಾಗ ಉದ್ದವಾಗಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಪರಸ್ತ್ರೀಗಾಮಿಯಾಗಿ ಕೆಟ್ಟ ಹೆಸರು ಪಡೆಯುತ್ತಾನೆ ಮತ್ತು ಅವನು ಪ್ರೇಮದಲ್ಲಿ ವಿಫಲನಾಗುತ್ತಾನೆ.

ಉಂಗುರದ ಬೆರಳಿನ ಅಗ್ರಭಾಗ ಚಪ್ಪಟೆಯಾಗಿ ಕುಳಿತುಕೊಂಡಂತಿದ್ದರೆ ವ್ಯಕ್ತಿ ದುಷ್ಟನು, ಕೊಲೆಗಾರನು ಮತ್ತು

ನಿರ್ದಯಿಯೂ ಆಗುತ್ತಾನೆ. ಇವನ ಹೃದಯದಲ್ಲಿ ದಯೆ, ಮಮತೆ ಮತ್ತು ಮೋಹಕ್ಕೆ ಸ್ಥಾನವೇ ಇರುವುದಿಲ್ಲ. ಯಾರೊಂದಿಗೂ ಇವನ ಮಧುರ ಸಂಬಂಧವಿರುವುದಿಲ್ಲ.

ಉಂಗುರದ ಬೆರಳಿನ ಅಗ್ರಭಾಗ ಗುಂಡಾಗಿ ತುಂಬಿಕೊಂಡಂತಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಅನೈತಿಕ ಉಪಾಯಗಳಿಂದ ಹಣ ಸಂಪಾದಿಸುತ್ತಾನೆ ಮತ್ತು ತಪ್ಪು ಕೆಲಸಗಳಿಗೆ ಖರ್ಚು ಮಾಡುತ್ತಾನೆ.

ಉಂಗುರದ ಬೆರಳು ಗುಲಾಬಿ ಬಣ್ಣಕ್ಕಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಶಾಂತನು, ಸರಳನು, ಕಷ್ಟ ಸಹಿಷ್ಣುವೂ ಆಗುತ್ತಾನೆ. ಕೆಂಪು ಬಣ್ಣಕ್ಕಿದ್ದರೆ ಮತ್ತು ಆತ್ಮಸಹಾಯವಾಸನು, ವಿಶ್ವಾಸಪಾತ್ರನು ಮತ್ತು ಭಾವುಕನು ಆಗಿರುತ್ತಾನೆ. ಒಂದು ವೇಳೆ ಬೆರಳು ಹಳದಿ ಬಣ್ಣಕ್ಕಿದ್ದರೆ ವ್ಯಕ್ತಿ ಪಥಭ್ರಷ್ಟನಾಗುತ್ತಾನೆ.

**ಊರ್ಧ್ವ ವಜ್ರ:** ಉಂಗುರದ ಬೆರಳಿನ ಮೇಲೆ ಊರ್ಧ್ವ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ಧೈರ್ಯಶಾಲಿಯು, ನಿರ್ಭೀಕನು ಮತ್ತು ತನ್ನ ಕಾರ್ಯ ಸಾಧಿಸುವುದರಲ್ಲಿ ಸಿದ್ಧಹಸ್ತನು ಆಗಿರುತ್ತಾನೆ.

**ಅಧಃವಜ್ರ:** ಉಂಗುರದ ಬೆರಳಿನ ಮೇಲೆ ಅಧೋಮುಖ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ದುಷ್ಟನು, ನಿರ್ದಯಿಯು, ಸಾಹಸಿಯು ಮತ್ತು ಘೋರ ಸ್ವಾರ್ಥಿಯು ಆಗಿರುತ್ತಾನೆ.

**ಎಡಮುಖ ವಜ್ರ:** ಉಂಗುರದ ಬೆರಳಿನ ಮೇಲೆ ಎಡಮುಖ ವಜ್ರವಿದ್ದರೆ ವ್ಯಕ್ತಿ ಅನೈತಿಕ ಕಾರ್ಯಗಳಿಂದ ಹಣವನ್ನು ಕೂಡಿಸುತ್ತಾನೆ. ಇವನು ತಪ್ಪು ಕಾರ್ಯ ಮಾಡುವವರ ಮುಖಂಡನಾಗಿರುತ್ತಾನೆ.

**ದಕ್ಷಿಣ ಮುಖ ವಜ್ರ:** ಉಂಗುರದ ಬೆರಳಿನ ಮೇಲೆ ದಕ್ಷಿಣ ಮುಖ ವಜ್ರ ಚಿಹ್ನೆ ಇರುವ ವ್ಯಕ್ತಿ ಸೇನೆಗೆ ಶಸ್ತ್ರಾಸ್ತ್ರ ಸರಬರಾಜು ಮಾಡುವ ಗುತ್ತಿಗೆ ವ್ಯಾಪಾರಿಯಾಗುತ್ತಾನೆ.

**ಕಿರುಬೆರಳಿನ ಮೇಲೆ ವಜ್ರ ಚಿಹ್ನೆ:** ಕಿರುಬೆರಳಿನ ಅಗ್ರಭಾಗ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ಪೊಲೀಸ್ ಇಲಾಖೆಯಲ್ಲಿ ಖ್ಯಾತಿ ಪಡೆಯುತ್ತಾನೆ.

ಕಿರು ಬೆರಳಿನ ತುದಿ ಉದ್ದವಾಗಿದ್ದರೆ ಮತ್ತು ಅದರ ಮೇಲೆ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ಗುಪ್ತಚರ ವಿಭಾಗದಿಂದ ಹಣ ಸಂಪಾದಿಸುತ್ತಾನೆ.

ಕಿರು ಬೆರಳಿನ ತುದಿ ಚಪ್ಪಟೆಯಾಗಿ ಕುಳಿತುಕೊಂಡಂತಿದ್ದರೆ ಮತ್ತು

ಅದರ ಮೇಲೆ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ಕುಖ್ಯಾತನು, ಕಳ್ಳನು, ಜೇಬುಗಳ್ಳನು ಆಗುತ್ತಾನೆ. ಅನೇಕ ಬಾರಿ ಜೈಲಿಗೆ ಹೋಗುತ್ತಾನೆ.

ಕಿರು ಬೆರಳಿನ ತುದಿ ಗುಂಡು ಗುಂಡಾಗಿ ತುಂಬಿಕೊಂಡಂತಿದ್ದರೆ ವ್ಯಕ್ತಿ ಸಾಹಸ ಪೂರ್ಣ ಕಾರ್ಯ ಮಾಡುತ್ತಾ ಕೊಲ್ಲಲ್ಪಡುತ್ತಾನೆ ಅಥವಾ ನ್ಯಾಯಾಲಯದ ದಂಡನೆಯಿಂದಾಗಿ ಸಾಯುತ್ತಾನೆ.

ಕಿರು ಬೆರಳಿನ ಬಣ್ಣ ಗುಲಾಬಿಯಾಗಿದ್ದರೆ ವ್ಯಕ್ತಿ ಹೇಡಿಯಾಗುತ್ತಾನೆ. ಕೆಂಪು ಬಣ್ಣಕ್ಕಿದ್ದರೆ ವ್ಯಕ್ತಿ ಸಾಹಸಿಯು ಮತ್ತು ಜಂಗಳಗಂಟಿ ಸ್ವಭಾವದವನು ಆಗಿರುತ್ತಾನೆ. ಹಳದಿ ವರ್ಣದ ಬೆರಳಿದ್ದರೆ ವ್ಯಕ್ತಿ ಸುಸ್ತಾಗಿಯೂ, ಸೋಮಾರಿಯಾಗಿಯೂ ಇರುತ್ತಾನೆ.

**ಊರ್ಧ್ವ ವಜ್ರ:** ಕಿರುಬೆರಳಿನ ಮೇಲೆ ಊರ್ಧ್ವ ವಜ್ರವಿದ್ದರೆ ಅಂತಹ ವ್ಯಕ್ತಿ ಸಾಹಸಿಯು, ಸಂಘರ್ಷ ಶೀಲನು, ಮನಸ್ಸಿನ ಗುಟ್ಟನ್ನು ಯಾರೊಂದಿಗೂ ತಿಳಿಸವನಾಗಿರುತ್ತಾನೆ.

**ಅಧಃವಜ್ರ:** ಕಿರು ಬೆರಳಿನ ಮೇಲೆ ಅಧೋಮುಖಿ ವಜ್ರವಿದ್ದರೆ ವ್ಯಕ್ತಿ ಸಫಲ ಗುಪ್ತಚರ ಅಥವಾ ಸಫಲ ಅಧಿಕಾರಿಯಾಗುತ್ತಾನೆ.

**ಎಡವಜ್ರ:** ಕಿರು ಬೆರಳಿನ ಮೇಲೆ ಎಡ ವಜ್ರವಿದ್ದರೆ ವ್ಯಕ್ತಿ ಅಕಾಲ ಮೃತ್ಯು ಹೊಂದುತ್ತಾನೆ ಅಥವಾ ಹಳೆಯ ಶತ್ರು ಅವನನ್ನು ಸಮಾಪ್ತಿಗೊಳಿಸುತ್ತಾನೆ. ಆದರೆ ಇವನು ಕೊನೆಯವರೆಗೆ ಸಂಘರ್ಷ ನಡೆಸುವುದನ್ನು ಬಿಡುವುದಿಲ್ಲ.

**ದಕ್ಷಿಣ ವಜ್ರ:** ಕಿರುಬೆರಳಿನ ಮೇಲೆ ದಕ್ಷಿಣ ಮುಖಿ ವಜ್ರವಿದ್ದರೆ ವ್ಯಕ್ತಿ ಸಫಲ ಪೊಲೀಸ್ ಅಧಿಕಾರಿ ಅಥವಾ ಸೇನಾಧಿಕಾರಿಯಾಗುತ್ತಾನೆ. ಸಮಾಜ ಇವನಿಗೆ ವಿಶೇಷ ಗೌರವ ನೀಡುತ್ತದೆ.

**ಹೆಬ್ಬೆರಳಿನ ಮೇಲೆ ವಜ್ರ ಚಿಹ್ನೆ:** ಹೆಬ್ಬೆರಳಿನ ತುದಿ ಗೋಲಾಕಾರವಾಗಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಅವಶ್ಯವಾಗಿ ಸೇನಾ ವಿಭಾಗದ ಉಚ್ಚ ಅಧಿಕಾರಿಯಾಗುತ್ತಾನೆ ಮತ್ತು ಖ್ಯಾತಿಯನ್ನು ಗಳಿಸುತ್ತಾನೆ.

ಹೆಬ್ಬೆರಳಿನ ತುದಿ ಉದ್ದವಾಗಿದ್ದರೆ ವ್ಯಕ್ತಿ ಗುಪ್ತಚರ ವಿಭಾಗದ ಅಧಿಕಾರಿಯಾಗುತ್ತಾನೆ. ಮೇಲುಗಡೆ ಕಠೋರಿಯಂತೆ ತೋರಿದರೂ ಇವರು ಒಳಗಿನಿಂದ ಸರಳರೂ ಸಹೃದಯರೂ ಆಗಿರುತ್ತಾರೆ.

ಹೆಬ್ಬೆರಳು ಚಪ್ಪಟೆಯಾಗಿ ಕುಳಿತುಕೊಂಡಂತಿದ್ದರೆ ಮತ್ತು ಅದರ ಮೇಲೆ ವಜ್ರದ ಚಿಹ್ನೆ ಇದ್ದರೆ ವ್ಯಕ್ತಿ ಠಕಾಯಿತನಾಗುತ್ತಾನೆ ಮತ್ತು ತನ್ನ

ಕಾರ್ಯಗಳಿಂದ ಪ್ರಜೆಗಳಿಗೆ ಆತಂಕ ಉಂಟುಮಾಡುತ್ತಾನೆ.

ಹೆಬ್ಬೆರಳಿನ ತುದಿ ಗುಂಡು ಗುಂಡಾಗಿದ್ದರೆ ಮತ್ತು ತುಂಬಿಕೊಂಡಂತಿದ್ದರೆ ಮತ್ತು ಅದರ ಮೇಲೆ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ಪೊಲೀಸ್ ಅಥವಾ ಸೇನಾ ವಿಭಾಗದಲ್ಲಿ ಸಾಧಾರಣ ಮಟ್ಟದವರೆಗೆ ತಲುಪುತ್ತಾನೆ.

ಹೆಬ್ಬೆರಳು ಗುಲಾಬಿ ಬಣ್ಣಕ್ಕಿದ್ದರೆ ಅಂತಹ ವ್ಯಕ್ತಿಯ ಉನ್ನತಿಯಲ್ಲಿ ಪದೇ ಪದೇ ತೊಂದರೆಗಳು ಉತ್ಪನ್ನವಾಗುತ್ತವೆ. ಭಯಂಕರ ಸಂಘರ್ಷದ ನಂತರ ಸಫಲತೆ ದೊರೆಯುತ್ತದೆ. ಹೆಬ್ಬೆರಳು ಕೆಂಪು ಬಣ್ಣಕ್ಕಿದ್ದರೆ ವ್ಯಕ್ತಿ ಉಚ್ಚ ಅಧಿಕಾರಿಯಾಗುತ್ತಾನೆ ಮತ್ತು ತನ್ನ ಜೀವನದ ಆರಂಭ ಅತಿ ಸಾಧಾರಣಮಟ್ಟದಿಂದ ಮಾಡುತ್ತಾನೆ. ಹೆಬ್ಬೆರಳಿನ ಬಣ್ಣ ಹಳದಿಯಾಗಿದ್ದರೆ ವ್ಯಕ್ತಿಯ ಜೀವನದಲ್ಲಿ ಬಹಳಷ್ಟು ತೊಂದರೆಗಳು ಬರುತ್ತವೆ ಮತ್ತು ವ್ಯಕ್ತಿ ತನ್ನ ಗುರಿಯನ್ನು ತಲುಪಲಾಗುವುದಿಲ್ಲ.

**ಊರ್ಧ್ವಮುಖ ವಜ್ರ:** ಹೆಬ್ಬೆರಳಿನ ಮೇಲೆ ಊರ್ಧ್ವ ಮುಖ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ಸ್ವಕಾರ್ಯದಿಂದ ಕೀರ್ತಿ, ಗೌರವ, ಸಫಲತೆ ಗಳಿಸುತ್ತಾನೆ.

**ಅಧಃವಜ್ರ:** ಹೆಬ್ಬೆರಳಿನ ಮೇಲೆ ಅಧೋಮುಖ ವಜ್ರವಿದ್ದರೆ ವ್ಯಕ್ತಿಯ ಎಲ್ಲಾ ಪ್ರಯತ್ನಗಳೂ ವಿಫಲವಾಗುತ್ತವೆ ಮತ್ತು ಅವನ ಮನಸ್ಸಿನಲ್ಲಿ ನಿರಾಶೆ ಹರಡಿಕೊಳ್ಳುತ್ತದೆ.

**ಎಡವಜ್ರ:** ಹೆಬ್ಬೆರಳಿನ ಮೇಲೆ ಎಡಮುಖ ವಜ್ರವಿದ್ದರೆ ವ್ಯಕ್ತಿ ಮೋಸಗಾರ ಅಥವಾ ಕಳ್ಳ ಅಥವಾ ದರೋಡೆಕೋರನಾಗುತ್ತಾನೆ ಮತ್ತು ಸಮಾಜಕ್ಕೆ ಕಂಟಕನಾಗಿರುತ್ತಾನೆ.

**ದಕ್ಷಿಣ ವಜ್ರ:** ಹೆಬ್ಬೆರಳಿನ ಮೇಲೆ ದಕ್ಷಿಣ ಮುಖ ವಜ್ರ ಚಿಹ್ನೆ ಇದ್ದರೆ ವ್ಯಕ್ತಿ ಶಾಂತನು, ಸರಳನು, ಚತುರನು ಮತ್ತು ಮೃದುಭಾಷಿ ಅಧಿಕಾರಿಯಾಗುತ್ತಾನೆ.

### 58. ಅಂಗೈನಲ್ಲಿ ಧನುಸ್ಸು

ಒಂದು ವೇಳೆ ಅಂಗೈನಲ್ಲಿ ಧನುಸ್ಸಾಕಾರದ ಚಿಹ್ನೆ ಇದ್ದರೆ ವ್ಯಕ್ತಿ ವೀರನು, ಸಾಹಸಿಯು, ಶತ್ರುದಳ ನಾಶಕನು, ಯುದ್ಧದಲ್ಲಿ ವಿಜಯಿಯು, ಎಂದೂ ಸಹ ಸೋಲು ಪಡೆಯದೆ ಇರುವವನಾಗುತ್ತಾನೆ.

### 59. ಗಾಳಿ ಪಟ

ಒಂದು ವೇಳೆ ಅಂಗೈನಲ್ಲಿ ಗಾಳಿಪಟದಂತಹ ಚಿಹ್ನೆ ಇದ್ದರೆ ವ್ಯಕ್ತಿ ಲೋಕಪ್ರಸಿದ್ಧಿ ಪ್ರತಾಪಿಯು, ಸುಖಿಯೂ, ಉಚ್ಚ ಪದವಿ-

ಪಡೆಯುವವನಾಗಿಯೂ ಇರುತ್ತಾನೆ.

## 60. ಷಟ್ಕೋಣ

ಇದು ಧನಲಾಭ, ಐಶ್ವರ್ಯ, ಆನಂದ ಮತ್ತು ಭಾಗ್ಯೋದಯ ಸೂಚಕವಾಗಿದೆ. ಇಂತಹ ವ್ಯಕ್ತಿಯ ಬಳಿ ಸಂಪತ್ತಿನ ಭಂಡಾರವೇ ಇರುತ್ತದೆ. ಇವನು ಸಾಮಾಜಿಕ ದೃಷ್ಟಿಯಿಂದ ಗೌರವ, ಕೀರ್ತಿ ಮತ್ತು ಪ್ರತಿಷ್ಠೆಯನ್ನು ಪಡೆಯುತ್ತಾನೆ.

## 61. ಚತುಷ್ಕೋನ

ಅಂಗೈಮೇಲೆ ಈ ಚಿಹ್ನೆ ಅನ್ನ, ಧನ, ಲಕ್ಷ್ಮಿಯ ಪ್ರಾಪ್ತಿ ಮತ್ತು ಸಂತುಷ್ಟಿಯ ಪ್ರತೀಕವಾಗಿದೆ. ಇಂತಹ ವ್ಯಕ್ತಿ ಎಲ್ಲಾ ರೀತಿಯಿಂದಲೂ ಆತ್ಮ ನಿರ್ಭರನಾಗಿರುತ್ತಾನೆ. ಸಾಕಷ್ಟು ಐಶ್ವರ್ಯ ಈ ವ್ಯಕ್ತಿಗೆ ದೊರೆಯುತ್ತದೆ.

ಯಾವುದಾದರೂ ಸ್ತ್ರೀಯ ಕೈಲಿ ಈ ಚಿಹ್ನೆ ಇದ್ದರೆ ಅವಳು ಪೂರ್ಣ ಸಂಪನ್ನಳಾಗಿರುತ್ತಾಳೆ.

## 62. ತ್ರಿಕೋನ

ಇದು ಪಶುಧನದ ಸಂಪನ್ನತೆಯನ್ನು ವ್ಯಕ್ತಪಡಿಸುತ್ತದೆ. ಈ ಚಿಹ್ನೆ ಇರುವ ವ್ಯಕ್ತಿಯ ಬಳಿ ಖಂಡಿತವಾಗಿ ಮೇಲ್ಪಟ್ಟದ ವಾಹನವಿರುತ್ತದೆ. ಪಶು ವ್ಯಾಪಾರ, ಹಾಲಿನ ಡೈರಿ ನಡೆಸುವುದು, ವ್ಯಾಪಾರ ಲಾಭ ಮತ್ತು ಸದ್ಗೃಹಸ್ಥನ ಚಿಹ್ನೆ ಇದಾಗಿದೆ.

## 63. ನಂಧ್ಯಾವರ್ತ ಸ್ವಾಸ್ತಿಕ

ಈ ಚಿಹ್ನೆ ಇರುವ ವ್ಯಕ್ತಿ ಧರ್ಮಾತ್ಮನು, ಧಾರ್ಮಿಕ ಕಾರ್ಯಕಲಾಪ ಮಾಡುವವನು, ತೀರ್ಥಾಟನೆ ಪ್ರೇಮಿಯು, ಐಶ್ವರ್ಯ ಸಂಪನ್ನನು ಮತ್ತು ಯಶಸ್ವಿಯೂ ಆಗುತ್ತಾನೆ.

## 64. ಕ್ರಾಸ್

ಚಂದ್ರ ಕ್ಷೇತ್ರದ ಮೇಲೆ ಕ್ರಾಸ್‌ನ ಚಿಹ್ನೆ ಬಾಧಕಾರಕವು ಮತ್ತು ವಿಪತ್ತೀ ಮೂಲಕವೂ ಆಗಿದೆ. ಈ ಚಿಹ್ನೆಯು ಅರ್ಥ ಗುಣವನ್ನು ಕತ್ತರಿಸುವುದೇ ಆಗಿದೆ. ಆದ್ದರಿಂದ ಈ ಚಿಹ್ನೆ ಇರುವ ವ್ಯಕ್ತಿ ಜೀವನ ಪೂರ್ತಿ ಸುಖಿಯಾಗಿರಲಾರ. ಶೀರ್ಷ ರೇಖೆಯ ಕೆಳಗೆ ಕ್ರಾಸ್ ಇದ್ದರೆ ಅದು ಅವ್ಯವಹಾರಿಕ, ನಿರಂಕುಶ ಮತ್ತು ಹಠಗಾರನನ್ನಾಗಿ ಮಾಡುತ್ತದೆ.

ಚಿಕ್ಕದಾದ ಕ್ರಾಸ್ ಕಡಿಮೆ ಮತ್ತು ದೊಡ್ಡ ಕ್ರಾಸ್ ಹೆಚ್ಚು

ಅವಗುಣಗಳಿರುವುದನ್ನು ಪ್ರಕಟಪಡಿಸುತ್ತದೆ. ದೊಡ್ಡ ಕ್ರಾಸ್ ಇದ್ದರೆ ವ್ಯಕ್ತಿ ಛಿದ್ರಾನ್ವೇಷಿಯು, ಮೋಸದ ಪ್ರಪಂಚದವನು, ವಿಶ್ವಾಸಘಾತಿಯು, ಸುಳ್ಳನೂ, ಅನೈತಿಕನೂ ಆಗಿರುತ್ತಾನೆ.

ಚಂದ್ರರೇಖೆ ಅಥವಾ ಚಂದ್ರಕ್ಷೇತ್ರದ ಮೇಲೆ ಕ್ರಾಸ್ ಚಿಹ್ನೆ ವ್ಯಕ್ತಿಗೆ ಕಫ, ವಾತ, ಮೂತ್ರರೋಗ, ಅಂಡಕೋಶ ವೃದ್ಧಿರೋಗ, ಕರುಳು ರೋಗ, ಉದರ ರೋಗ ಮತ್ತು ಅಜೀರ್ಣ ರೋಗವನ್ನು ನೀಡುತ್ತದೆ.

ಮಂಗಳ ಕ್ಷೇತ್ರದ ಮೇಲೆ ಕ್ರಾಸ್ ಚಿಹ್ನೆ ಶಕ್ತಿಯುತ ಶತ್ರುದಂಡವನ್ನು ಉತ್ಪನ್ನ ಮಾಡುತ್ತದೆ. ಆದರೆ ಪ್ರಥಮ ಕ್ಷೇತ್ರದ ಮೇಲೆ ಶತ್ರುಗಳನ್ನು ಮತ್ತಷ್ಟು ಹೆಚ್ಚು ಮಾಡುತ್ತದೆ. ದ್ವಿತೀಯ ಕ್ಷೇತ್ರದ ಮೇಲಿದ್ದರೆ ಭಯಂಕರ ನಾಶ ಉಂಟಾಗುತ್ತದೆ. ಉಚ್ಚಮಂಗಳನ ಜೊತೆ ಇದು ಹೆಚ್ಚು ಜಗಳವಾಡುವಂತೆ ಮಾಡಿಸುತ್ತದೆ. ಆರೋಗ್ಯದ ದೃಷ್ಟಿಯಿಂದ ದುರ್ಬಲನು, ಮಾನಸಿಕ ಸಂತುಲನವನ್ನು ಕಳೆದುಕೊಂಡವನು ಮತ್ತು ಹೇಡಿಯೂ ಆಗುವಂತೆ ಇದು ಮಾಡುತ್ತದೆ.

ಬುಧನ ಮೇಲೆ ಕ್ರಾಸ್ ಚಿಹ್ನೆ ವ್ಯಕ್ತಿಯನ್ನು ಮಿಥ್ಯಾವಾದಿ, ಮನೆ ಮತ್ತು ಕುಟುಂಬದ ದ್ವೇಷಿ, ಕಳ್ಳ ಹಾಗೂ ಅಪರಾಧಿಯನ್ನಾಗಿ ಮಾಡುತ್ತದೆ. ಆರೋಗ್ಯದ ದೃಷ್ಟಿಯಿಂದ ರಕ್ತದಲ್ಲಿ ನ್ಯೂನತೆ ಉಂಟು ಮಾಡುತ್ತದೆ.

ಬೃಹಸ್ಪತಿ ಕ್ಷೇತ್ರದ ಮೇಲೆ ಕ್ರಾಸ್ ಚಿಹ್ನೆ ಬಹಳ ಕಡಿಮೆ ಕೆಟ್ಟ ಪ್ರಭಾವವನ್ನು ನೀಡುತ್ತದೆ. ಒಂದು ವೇಳೆ ಇದು ಸ್ವತಂತ್ರ ರೇಖೆಗಳಿಂದ ನಿರ್ಮಿತವಾಗಿದ್ದರೆ ಪ್ರೇಮ ವಿವಾಹವಾಗುತ್ತದೆ ಅಥವಾ ಗೃಹಸ್ಥ ಜೀವನ ಪ್ರೇಮಮಯವಾಗಿ ಕಳೆಯುತ್ತದೆ. ಸುಖ ಮತ್ತು ಗೌರವ ದೊರೆಯುತ್ತದೆ. ಇದರ ಜೊತೆಯಲ್ಲೇ ಒಂದು ವೇಳೆ ಭಾಗ್ಯರೇಖೆಯ ಆರಂಭ ಚಂದ್ರನಿಂದ ಆಗಿದ್ದರೆ ವ್ಯಕ್ತಿ ಮತ್ತಷ್ಟು ಹೆಚ್ಚು ಆನಂದವನ್ನು ಪಡೆಯುತ್ತಾನೆ.

ಜೀವನ ರೇಖೆಯ ಯಾವುದಾದರೂ ಶಾಖೆ ಈ ಕ್ಷೇತ್ರದ ಮೇಲೆ ತಲುಪಿದ್ದರೆ ಮತ್ತು ಅನ್ಯರೇಖೆಯಿಂದ ಕತ್ತರಿಸಲ್ಪಟ್ಟು ಕ್ರಾಸ್ ನಿರ್ಮಿತವಾದರೆ ಶುಭಲಕ್ಷಣವಾಗುವುದಿಲ್ಲ. ಇದರಿಂದ ಪ್ರೇಮ ಸಂಬಂಧಗಳಲ್ಲಿ ವಿಘ್ನಗಳು ಉಂಟಾಗುತ್ತವೆ.

ಹೃದಯ ರೇಖೆಯ ಯಾವುದಾದರೂ ಶಾಖೆ ಅಲ್ಲಿಗೆ ತಲುಪಿ ಯಾವುದಾದರೂ ಅನ್ಯರೇಖೆಯಿಂದ ಕತ್ತರಿಸಲ್ಪಟ್ಟು ಕ್ರಾಸ್ ನಿರ್ಮಿತವಾಗಿದರೆ ಪ್ರಣಯದಲ್ಲಿ ನಿರಾಶೆಯೇ ಉಂಟಾಗುತ್ತದೆ.

ಆರೋಗ್ಯದ ದೃಷ್ಟಿಯಿಂದ ಗುರು ಕ್ಷೇತ್ರದ ಮೇಲೆ ಕ್ರಾಸ್ ಚಿಹ್ನೆ

ಉದರ ರೋಗ ನೀಡುತ್ತದೆ. ದೊಡ್ಡ ಗುರುತು ರೋಗವನ್ನು ದೀರ್ಘ ಎಳೆಯುವುದರ ದ್ಯೋತಕವಾಗಿದೆ. ಆದರೆ ಗುರುಕ್ಷೇತ್ರ ದೊಡ್ಡದಾಗಿದ್ದರೆ ಅವಗುಣಗಳು ಸ್ವಲ್ಪ ಕಡಿಮೆಯಾಗುತ್ತವೆ.

ಶುಕ್ರ ಕ್ಷೇತ್ರದ ಮೇಲೆ ಕ್ರಾಸ್ ಚಿಹ್ನೆ ಪ್ರೇಮದ ವಿಚಾರಗಳಲ್ಲಿ ಸಫಲತೆ ನೀಡುತ್ತದೆ. ಆಳವಾದ ಕ್ರಾಸ್ ಪುರುಷನ ಸ್ನೇಹದ ಕಾರಣ ಕಷ್ಟ ಆಹ್ವಾನಿಸುವ ಪರಿಚಯ ನೀಡುತ್ತದೆ.

ಆರೋಗ್ಯದ ದೃಷ್ಟಿಯಿಂದ ಶುಕ್ರಕ್ಷೇತ್ರದ ಮೇಲೆ ಈ ಚಿಹ್ನೆ ತಲೆ ನೋವು ಅಥವಾ ಶೂಲರೋಗದ ಪರಿಚಾಯಕವಾಗಿದೆ. ಪುರುಷ ಮತ್ತು ಸ್ತ್ರೀ ಗುಪ್ತಾಂಗರೋಗದಿಂದ ಪೀಡಿತರಾಗಿರುತ್ತಾರೆ.

ಶನಿಕ್ಷೇತ್ರದ ಮೇಲೆ ಕ್ರಾಸ್ ಚಿಹ್ನೆ ಶುಭವಾದುದಲ್ಲ. ಇದು ದುರ್ಘಟನೆ ಅಥವಾ ಯಾವುದಾದರೂ ರೋಗದ ಕಾರಕವಾಗಿದೆ. ಆರೋಗ್ಯ ಬಲಹೀನವಾಗುತ್ತದೆ ಮತ್ತು ಪೌರುಷ ಹೀನತೆ ಉಂಟಾಗುತ್ತದೆ. ಸಂತಾನ ರೇಖೆಗಳು ಸಫಲವಾಗಿರದಿದ್ದರೆ ಸಂತಾನೋತ್ಪತ್ತಿಯಲ್ಲಿ ತೊಂದರೆ ಉತ್ಪನ್ನವಾಗುತ್ತದೆ.

ಈ ಚಿಹ್ನೆ ಸೂರ್ಯಕ್ಷೇತ್ರದ ಮೇಲಿದ್ದರೆ ಹೆಚ್ಚು ಅಶುಭವಾಗುತ್ತದೆ. ಇದರಿಂದಾಗಿ ವ್ಯಕ್ತಿಗೆ ಯಾವುದೇ ಕಾರ್ಯದಲ್ಲೂ ಸಫಲತೆ ದೊರೆಯುವುದಿಲ್ಲ. ಧನಹಾನಿಯಿಂದ ನಿರಾಶೆ ಉಂಟಾಗುತ್ತದೆ. ಸೂರ್ಯಕ್ಷೇತ್ರ ಹೂತುಕೊಂಡಿದ್ದರೆ ಇನ್ನೂ ಹೆಚ್ಚು ಅಶುಭ ಉಂಟಾಗುತ್ತದೆ.

## 65. ದ್ವೀಪ

ದ್ವೀಪದ ಚಿಹ್ನೆ ಯಾವ ಕ್ಷೇತ್ರದ ಮೇಲಿರುತ್ತದೋ ಇದು ಅದರ ಶಕ್ತಿಯನ್ನೇ ಗ್ರಹಿಸುತ್ತದೆ.

ಈ ಚಿಹ್ನೆ ಸೂರ್ಯ ಕ್ಷೇತ್ರದ ಮೇಲಿದ್ದರೆ ಮಾನಸಿಕ ಶಕ್ತಿ ಕ್ಷೀಣಿಸುತ್ತಾ ಬಲಹೀನವಾಗುತ್ತದೆ. ಈ ದ್ವೀಪದ ಕಾರಣದಿಂದಾಗಿ ಸೂರ್ಯನ ಶ್ರೇಷ್ಠ ಗುಣ ಮನುಷ್ಯನಿಗೆ ಅಹಿತವಾಗತೊಡಗುತ್ತವೆ. ವ್ಯಕ್ತಿಯಲ್ಲಿ ದ್ವೇಷಭಾವನೆಯ ಜೊತೆಯಲ್ಲಿ ಅಪರಾಧಿ ವೃತ್ತಿಯೂ ಉಂಟಾಗುತ್ತದೆ ಮತ್ತು ಆಗ ಅವನಿಗೆ ಕರ್ತವ್ಯ ಮತ್ತು ಅಕರ್ತವ್ಯದ ತಿಳುವಳಿಕೆ ಇರುವುದಿಲ್ಲ.

ಈ ಚಿಹ್ನೆ ಒಂದು ವೇಳೆ ಚಂದ್ರ ಕ್ಷೇತ್ರದ ಮೇಲಿದ್ದರೆ ಮನುಷ್ಯ ಬಹಳ ಸಂವೇದನಾಶೀಲನಾಗಿರುತ್ತಾನೆ. ಕ್ಷೇತ್ರದ ಪ್ರಭಾವದಿಂದ ಕಲ್ಪನೆಯು

ಅಧಿಕತೆ ಉಂಟಾಗುತ್ತದೆ. ಆದರೆ ದ್ವೀಪ ಇರುವುದರಿಂದ ವ್ಯಕ್ತಿಯು ಕಲ್ಪನೆಯ ಹಾರಾಟ ನಿಂತುಹೋಗುತ್ತದೆ. ಅವನಲ್ಲಿ ಹೇಡಿತನ, ಅಂಜುಗುಳಿತನ, ಆಲಸ್ಯ ಮತ್ತು ಅವ್ಯವಹಾರಿಕತೆಯ ಸಮಾವೇಶ ಉಂಟಾಗುತ್ತದೆ.

ಮಂಗಳದ ಮೇಲೆ ಈ ಚಿಹ್ನೆ ಇದ್ದರೆ ವ್ಯಕ್ತಿ ತನ್ನ ಶಕ್ತಿಯನ್ನು ಕಳೆದುಕೊಂಡು ನಿರ್ಬಲನಾಗುತ್ತಾನೆ. ಅವನು ಹೇಡಿ, ಅಂಜುಪುರಕ ಮತ್ತು ಅಸ್ಥಿರನಾಗುತ್ತಾನೆ. ಮನುಷ್ಯ ತನ್ನಲ್ಲೇ ಅನೇಕ ದುರ್ಗುಣ ಮತ್ತು ದುರ್ವ್ಯಸನ ಹುಟ್ಟುವಂತೆ ಮಾಡಿಕೊಳ್ಳುತ್ತಾನೆ. ಅಪರಾಧಿ ಮನೋಭಾವ ವೃದ್ಧಿಯಾಗುತ್ತದೆ. ಅವನ ಸಾಹಸ ಅವನನ್ನು ತಪ್ಪು ದಾರಿಗೆ ಕೊಂಡೊಯ್ಯುತ್ತದೆ. ಅಪರಾಧದ ಮೇಲೆ ಅಪರಾಧ ಮಾಡುತ್ತಾ ಅವನು ಹಿಂಸಕವನ ಪಶುವಿನಂತೆ ವ್ಯವಹಾರ ಮಾಡತೊಡಗುತ್ತಾನೆ. ಶಾರೀರಿಕ ದೋಷ ಮತ್ತು ಚಾರಿತ್ರ್ಯಿಕ ದೋಷ ಉತ್ಪನ್ನವಾಗುತ್ತವೆ.

ಬುಧ ಕ್ಷೇತ್ರದ ಮೇಲೆ ಈ ಚಿಹ್ನೆ ಇದ್ದರೆ ವ್ಯಕ್ತಿಗೆ ಪ್ರತಿದಿನ ಬುದ್ಧಿಹೀನತೆ, ಬುದ್ಧಿನಾಶ, ಅಸ್ಥಿರತೆ, ತಪ್ಪು ಕಾರ್ಯಗಳ ಕಡೆಗೆ ಸಾಗುವುದು ಉಂಟಾಗುತ್ತದೆ ಮತ್ತು ಬೃಹಸ್ಪತಿಯ ಸ್ಥಾನದ ಮೇಲೆ ಕ್ರಾಸ್ ಇದ್ದರೆ ವ್ಯಕ್ತಿ ವ್ಯರ್ಥ ಶಕ್ತಿವಂತನು, ಸುಳ್ಳು ಅಭಿಮಾನಿಯು ಮತ್ತು ತಾನೇ ದೊಡ್ಡವನಾಗಬೇಕೆಂಬ ತಪ್ಪು ಭಾವನೆ ಪ್ರಬಲವಾಗುತ್ತದೆ. ಮೋಸ ವಂಚನೆಯಿಂದ ತನ್ನ ಕಾರ್ಯ ಸಾಧಿಸಲು ವ್ಯಕ್ತಿ ಮುಂದಾಗುತ್ತಾನೆ. ರಾಜನೀತಿಕ ಕ್ಷೇತ್ರದಲ್ಲಿ ಒಮ್ಮೆಗೆ ಬಹು ಎತ್ತರಕ್ಕೆ ಎಗರಿ ಮುಂದಕ್ಕೆ ಬರಬೇಕೆಂದು ವಿಫಲಯತ್ನ ನಡೆಸುತ್ತಾನೆ.

ಶುಕ್ರ ಕ್ಷೇತ್ರದ ಮೇಲೆ ದ್ವೀಪದ ಚಿಹ್ನೆ ಮತ್ತು ಕ್ರಾಸ್ ಚಿಹ್ನೆ ಮನುಷ್ಯನ ಏಳ್ಗೆಯನ್ನು ತಡೆದುಬಿಡುತ್ತವೆ. ರಕ್ತ ಸಂಸ್ಥಾನ ದೂಷಿತವಾಗುವುದರಿಂದ ಉತ್ಸಾಹ, ಸ್ಫೂರ್ತಿ ಮತ್ತು ಉಲ್ಲಾಸ ನಷ್ಟವಾಗುತ್ತದೆ. ಗುಪ್ತಾಂಗ ರೋಗದ ಯಾತನೆ ನೀಡುತ್ತದೆ. ವಿರುದ್ಧ ಲಿಂಗದ ಪ್ರತಿ ಆಕರ್ಷಣೆಯ ಭಾವನೆ ಹೆಚ್ಚಾಗುತ್ತದೆ. ಶಾರೀರಿಕ ಸುಖದ ಪ್ರಬಲತೆಯ ಕಾರಣದಿಂದಾಗಿ ವ್ಯಕ್ತಿ ತಪ್ಪು ಮಾರ್ಗವನ್ನು ತನ್ನದಾಗಿಸಿಕೊಂಡು ಹೇಗೆಂದರೆ ಹಾಗೆ ಕಾರ್ಯ ಮಾಡುವುದರಿಂದ ಅಪಮಾನಿತನಾಗಬೇಕಾಗುತ್ತದೆ.

ಶನಿ ಕ್ಷೇತ್ರದ ಮೇಲೆ ದ್ವೀಪ ಚಿಹ್ನೆ ಶನಿದೋಷಗಳನ್ನು ಪ್ರಭಾವಿತಗೊಳಿಸುವ ಸ್ಥಾನದಲ್ಲಿದ್ದರೆ ಅಶುಭವೆಂದು ತಿಳಿದುಕೊಳ್ಳುವ

ಪ್ರಶ್ನೆಯೇ ಇಲ್ಲಾ. ಆದರೆ ಕೆಲವರು ಇದನ್ನು ಶುಭವೆಂದು ಒಪ್ಪಿಕೊಳ್ಳುವುದಿಲ್ಲ. ಮನುಷ್ಯ ಅಸ್ವಾಭಾವಿಕ ಪ್ರಯತ್ನದಿಂದ ಕೂಡಿ ಮತ್ತು ತನ್ನವರೆಗಷ್ಟೇ ಕೇಂದ್ರಿತನಾಗಿರುವವನಾಗುತ್ತಾನೆ.

## 66. ಬಲೆ (ಜಾಲ)

ಅನೇಕ ಸೂಕ್ಷ್ಮ ರೇಖೆಗಳು ನೇರ ಮತ್ತು ಅಡ್ಡವಾಗಿ ಎಳೆಯಲ್ಪಟ್ಟು ಬಲೆಯಂತಹ ಚಿಹ್ನೆಯಾಗುತ್ತದೆ. ಈ ಚಿಹ್ನೆ ಪ್ರಾಯಃ ಗ್ರಹಕ್ಷೇತ್ರಗಳ ಮೇಲೆ ಕಾಣಿಸುತ್ತವೆ. ಕೆಲವು ವಿದ್ವಾಂಸರು ಈ ಚಿಹ್ನೆಯನ್ನು ವ್ಯೂಹರೇಖೆ ಎಂದು ಹೇಳುತ್ತಾರೆ. ಇದರ ಅಶುಭ ಪ್ರಭಾವ ಮುಖ್ಯವಾಗಿ ದುರ್ಘಟನೆ ಅಥವಾ ಆಕಸ್ಮಾತ್ ಬರುವ ಕಷ್ಟದ ರೂಪದಲ್ಲಿ ಪ್ರಕಟಗೊಳ್ಳುತ್ತವೆ.

ಚಂದ್ರ ಕ್ಷೇತ್ರದ ಮೇಲೆ ಬಲೆಯ ಚಿಹ್ನೆ ಇದ್ದರೆ ಮಾನಸಿಕ ಅಸ್ಥಿರತೆ ಮತ್ತು ಚಂಚಲತೆಯ ಕಾರಣದಿಂದಾಗಿ ಪ್ರತಿಯೊಂದು ಕಾರ್ಯದಲ್ಲಿ ಅಸಫಲತೆ, ವಿಫಲತೆಯ ಕಾಮವಾಂಛೆಯ ವ್ಯೂಹದಲ್ಲಿ ಸಿಲುಕಿ ತನ್ನವರು ಬೇರೆಯವರು ಎಂಬ ವ್ಯತ್ಯಾಸವೇ ಇರುವುದಿಲ್ಲ. ಕೀರ್ತಿ, ಅಪಕೀರ್ತಿಯ ಅರಿವೇ ಇರುವುದಿಲ್ಲ. ಒಂದು ವೇಳೆ ಈ ಚಿಹ್ನೆ ಯಾವುದಾದರೂ ಸ್ತ್ರೀಯ ಕೈನಲ್ಲಿದ್ದರೆ ಸನ್ನಿರೋಗ ಪದೇ ಪದೇ ಕಷ್ಟಕೊಡುತ್ತದೆ.

ಮಂಗಳ ಕ್ಷೇತ್ರದ ಮೇಲೆ ಬಲೆಯ ಚಿಹ್ನೆ ಇದ್ದರೆ ರಕ್ತ ನ್ಯೂನತೆ ಅಥವಾ ಯಾವುದಾದರೂ ಕಾರಣದಿಂದ ರಕ್ತಸ್ರಾವ ಉಂಟಾಗುತ್ತದೆ. ಒಂದು ವೇಳೆ ಸ್ತ್ರೀಯಾದರೂ ರಕ್ತ ಪ್ರದರ ರೋಗ ಅಥವಾ ಮಾಸಿಕ ಮುಟ್ಟಿನ ಸಂಬಂಧದ ಖಾಯಿಲೆ ಇರುತ್ತದೆ. ಮಂಗಳ ಕ್ಷೇತ್ರ ಅಧಿಕವಾಗಿರುವ ಅವಸ್ಥೆಯಲ್ಲಿ ಅವನ ಮೂಲಕ ಬೇರೆಯವರ ಹಿಂಸೆ ಆಗುತ್ತದೆಂಬ ಅನುಮಾನವಿರುತ್ತದೆ. ಹಲವು ವಿದ್ವಾಂಸರ ಅಭಿಪ್ರಾಯದಲ್ಲಿ ಈ ಚಿಹ್ನೆ ದುರ್ಘಟನೆ ಅಥವಾ ಆತ್ಮಹತ್ಯೆಯ ಪರಿಚಾಯಕವಾಗಿದೆ.

ಬುಧಕ್ಷೇತ್ರದ ಮೇಲೆ ಇದರ ಇರುವಿಕೆ ಬೇರೆಯವರ ಹಣದ ಮೇಲೆ ನಿಯತ್ತು ಕೆಡಿಸುವಂತಹದಾಗಿದೆ. ಉಚಿತ, ಅನುಚಿತದ ಗಮನವಿಲ್ಲದಷ್ಟು ಮನಸ್ಸಿನ ಉದ್ವೇಗ ಮತ್ತು ಚಂಚಲತೆ ಹೆಚ್ಚಾಗಿಬಿಡುತ್ತದೆ. ಇಂತಹ ವ್ಯಕ್ತಿಗೆ ನ್ಯಾಯಾಲಯದ ಮೂಲಕ ದಂಡನೆ ಉಂಟಾಗುತ್ತದೆ.

ಗುರುಕ್ಷೇತ್ರದ ಮೇಲೆ ಈ ಚಿಹ್ನೆ ಇದ್ದರೆ ಪ್ರೇಮ ಅಥವಾ ಪರಿಣಯದಲ್ಲಿ ಅಡಚಣೆ ಅಥವಾ ಅದರ ಪರಿಣಾಮ ಸ್ವರೂಪವಾಗಿ ಕಷ್ಟ ಅಥವಾ ನಿರಾಶೆ ಉಂಟಾಗುತ್ತದೆಂದು ವ್ಯಕ್ತಪಡಿಸುತ್ತದೆ. ಇಂತಹ ವ್ಯಕ್ತಿ ದಯೆ, ಪರೋಪಕಾರ, ಧರ್ಮ ಮುಂತಾದವುಗಳನ್ನು ಸ್ವಲ್ಪವೂ

ತಿಳಿದುಕೊಳ್ಳದೆ ಕ್ಷುದ್ರ ಆಯುಧಗಳಿಂದ ಕೆಲಸ ತೆಗೆದುಕೊಳ್ಳುತ್ತಾನೆ. ಈ ಲಕ್ಷಣವುಳ್ಳ ಹೆಚ್ಚು ಜನಗಳು ಜೀವನದಲ್ಲಿ ಸೌಭಾಗ್ಯದಿಂದ ವಂಚಿತರಾಗಿರುತ್ತಾರೆ.

ಶುಕ್ರ ಕ್ಷೇತ್ರದ ಮೇಲೆ ಈ ಚಿಹ್ನೆ ಇಚ್ಛೆಯ ಅಧಿಕತೆಯನ್ನು ಪ್ರಕಟಪಡಿಸುತ್ತದೆ. ಇಂತಹ ವ್ಯಕ್ತಿ ನೈಸರ್ಗಿಕ ಪ್ರೇಮಕ್ಕೆ ಮಹತ್ವ ಕೊಡದೆ ವ್ಯಭಿಚಾರದ ಕಡೆಗೆ ಹೆಚ್ಚು ಪ್ರವೃತ್ತನಾಗುತ್ತಾನೆ. ಒಂದು ವೇಳೆ ಈ ಚಿಹ್ನೆ ಹೆಚ್ಚು ದೊಡ್ಡದಾಗಿದ್ದರೆ ಬಲಾತ್ಕಾರದಂತಹ ಕರ್ಮದಲ್ಲಿ ಕ್ರೂರ ಪ್ರವೃತ್ತಿಯನ್ನು ಪ್ರದರ್ಶಿಸುತ್ತಾನೆ.

ಶನಿಕ್ಷೇತ್ರದ ಮೇಲೆ ಬಲೆ ನಿರ್ಮಿತವಾಗಿದ್ದರೆ ಅದು ಅಭಾಗ್ಯದ ಸೂಚಕವಾಗಿದೆ. ಇಂತಹ ವ್ಯಕ್ತಿಯಲ್ಲಿ ಬುದ್ಧಿಯ ಅಭಾವವಿದ್ದೇ ಇರುತ್ತದೆ. ಅವರ ಜೊತೆಯಲ್ಲೇ ಅಪರಾಧಿ ಪ್ರವೃತ್ತಿಯವನನ್ನಾಗಿ ಮಾಡುವುದರಿಂದ ಅವನು ಅಪಕೀರ್ತಿಯನ್ನು ಪಡೆಯುತ್ತಾನೆ. ಸ್ತ್ರೀ ಆಗಲಿ ಅಥವಾ ಪುರುಷನಾಗಲೀ ಈ ಚಿಹ್ನೆ ಇದ್ದರೆ ಅಂತಹವರು ತಮ್ಮ ಕೈಹಿಡಿದವರನ್ನೇ ಅನುಮಾನಿಸುತ್ತಾರೆ. ಇದರ ಕಾರಣದಿಂದಾಗಿ ಮನೆಯಲ್ಲಿ ಕಲಹ ಆಗುತ್ತಲೇ ಇರುತ್ತದೆ.

ಸೂರ್ಯಕ್ಷೇತ್ರದ ಮೇಲೆ ಈ ಚಿಹ್ನೆ ಮಿಥ್ಯಾಭಿಮಾನವನ್ನು ಸೃಷ್ಟಿ ಮಾಡುತ್ತದೆ. ಎಲ್ಲರೂ ತನಗೆ ಗೌರವ ನೀಡಬೇಕು, ತಾನೇ ಸರ್ವಶ್ರೇಷ್ಠನೆಂದು ಭಾವಿಸಿ ತನ್ನ ಆಜ್ಞೆಯನ್ನು ಪಾಲಿಸಬೇಕು. ಎಲ್ಲರು ತನ್ನ ತುಳಿತವನ್ನು ಸ್ವೀಕರಿಸಬೇಕೆಂಬ ಹಂಬಲವುಳ್ಳ ಇಂತಹ ವ್ಯಕ್ತಿಯ ಆಕಾಂಕ್ಷೆ ಎಂದಿಗೂ ಈಡೇರುವುದಿಲ್ಲ. ಏಕೆಂದರೆ ಅವನಲ್ಲಿ ವಿಶ್ವಾಸದ ಭಾವನೆ ಇರುವುದಿಲ್ಲ.

## 67. ಸ್ತ್ರೀಯ ಕೈನಲ್ಲಿರುವ ಹಲವು ಚಿಹ್ನೆಗಳ ಫಲ ಕಥನ

ಸ್ತ್ರೀಯರ ಕೈನಲ್ಲಿ ಮೀನಿನ ಆಕಾರ ಪೂರ್ಣ ಸೌಭಾಗ್ಯ ದಯಪಾಲಿಸುತ್ತದೆ.

ಸ್ತ್ರೀಯರ ಕೈನಲ್ಲಿ ಸ್ವಾಸ್ತಿಕ ಚಿಹ್ನೆ ಸೌಭಾಗ್ಯ, ಕೀರ್ತಿ, ಧನ, ಐಶ್ವರ್ಯ ಮತ್ತು ಗೃಹಸ್ಥ ಸುಖದ ದ್ಯೋತಕವಾಗಿದೆ.

ಸ್ತ್ರೀಯರ ಕೈನಲ್ಲಿ ಕಮಲ ಚಿಹ್ನೆ ಮಹಾರಾಣಿಯಾಗುವ, ಶ್ರೇಷ್ಠ ಸಂತಾನವಾಗುವ ಮತ್ತು ಪೂರ್ಣ ಸುಖ ದೊರೆಯುವುದರ ಪರಿಚಾಯಕವಾಗಿದೆ.

ಸ್ತ್ರೀಯರ ಕೈನಲ್ಲಿ ಅರಮನೆಯಂತಹ ಚಿಹ್ನೆ ರಾಣಿ ಸಮಾನ ಸುಖ

ಮತ್ತು ಐಶ್ವರ್ಯ ಭೋಗಿಸುವುದರ ಪ್ರತೀಕವಾಗಿದೆ.

ಒಂದು ವೇಳೆ ಯಾವುದಾದರೂ ಸ್ತ್ರೀಯು ಕೈಲಿ ಶಂಖ, ಛತ್ರಿ ಅಥವಾ ಆಮೆಯು ಚಿಹ್ನೆ ಇದ್ದರೆ ಅವಳು ರಾಜಮಾತೆಯಾಗುತ್ತಾಳೆ.

ಸ್ತ್ರೀಯರ ಕೈಲಿ ತಕ್ಕಡಿಯು ಚಿಹ್ನೆ ನ್ಯಾಯಾಧೀಶ ಅಥವಾ ಉದ್ಯಮಿಯು ಪತ್ನಿಯಾಗುವುದರ ಪ್ರತೀಕವಾಗಿದೆ.

ಸ್ತ್ರೀಯು ಕೈಲಿ ಒಂದು ವೇಳೆ ಆನೆ, ಕುದುರೆ, ಎತ್ತು, ಗುವಿ, ವಜ್ರ ಮುಂತಾದವುಗಳ ಚಿಹ್ನೆ ಇದ್ದರೆ ಅಂತಹ ಸ್ತ್ರೀ ಶಾಸ್ತ್ರಗಳನ್ನು ಬಲ್ಲವಳು, ಶ್ರೇಷ್ಠ ಪುತ್ರರಿಗೆ ಜನ್ಮ ಕೊಡುವವಳು, ತೀರ್ಥಾಟನೆ, ವ್ರತ, ಉಪವಾಸ ಮಾಡುವಂಥವಳಾಗಿರುತ್ತಾಳೆ.

ಒಂದು ವೇಳೆ ಯಾವುದಾದರೂ ಸ್ತ್ರೀಯ ಕೈಲಿ ಎತ್ತಿನ ಗಾಡಿಯು ರೀತಿಯು ಚಿಹ್ನೆ ಇದ್ದರೆ ಅವಳು ರೈತನ ಪತ್ನಿಯಾಗುತ್ತಾಳೆ.

ಸ್ತ್ರೀಯ ಕೈಲಿ ಚಾಮರ, ಅಂಕುಶ ಅಥವಾ ಧನುಸ್ಸಿನಂತಹ ಚಿಹ್ನೆ ರಾಜಪತ್ನಿಯಾಗುವುದರ ಸಂಕೇತ ನೀಡುತ್ತದೆ.

ಯಾವುದಾದರೂ ಸ್ತ್ರೀಯಳ ಕೈಲಿ ತ್ರಿಶೂಲ, ಕತ್ತಿ, ಗದೆ, ಶಕ್ತಿ ಅಥವಾ ಗಾರಿಯ ಚಿಹ್ನೆ ಇದ್ದರೆ ಅವಳು ದಾನವೀರಳು, ಕೀರ್ತಿಮಯಿಯೂ ಆಗುತ್ತಾಳೆ.

ಒಂದು ವೇಳೆ ಯಾವುದಾದರೂ ಸ್ತ್ರೀಯಳ ಕೈಲಿ ಬಿಳಿ ಹದ್ದು, ಕಪ್ಪೆ, ನರಿ, ಚೇಳು, ಸೂರ್ಯ ಅಥವಾ ಬೆಕ್ಕಿನ ರೀತಿಯ ಚಿಹ್ನೆ ಇದ್ದರೆ ಅಂತಹ ಸ್ತ್ರೀ ದುರ್ಭಾಗ್ಯಶಾಲಿಯೂ, ಪರಜನರಿಗೆ ಕಷ್ಟ ಕೊಡುವವಳು ಮತ್ತು ಸ್ವತಃ ನತದೃಷ್ಟಳಾಗಿರುತ್ತಾಳೆ.

ಒಂದು ವೇಳೆ ಯಾವುದಾದರೂ ಸ್ತ್ರೀಯಳ ಕೈನಲ್ಲಿ ಒಂಟೆ, ಕತ್ತೆ ಮುಂತಾದ ಚಿಹ್ನೆ ಇದ್ದರೆ ಅಂತಹ ಸ್ತ್ರೀ ದುರ್ಭಾಗ್ಯಶಾಲಿಯೂ, ನತದೃಷ್ಟಳು, ಕರ್ಕಶಸ್ವರದವಳೂ, ಕಷ್ಟಕಾರಿಯೂ, ದುಷ್ಟಳೂ, ಜಗಳಗಂಟಿಯೂ ಆಗುತ್ತಾಳೆ.

## ಅಧ್ಯಾಯ 7

# ಕೈನ ಮುದ್ರೆ (ಪ್ರಿಂಟ್) ತೆಗೆದುಕೊಳ್ಳುವುದು

ಕೆಲವು ಜನಗಳು ತಮಗೆ ಬೇಕಾದ ಹಸ್ತ ಸಾಮುದ್ರಿಕ ಶಾಸ್ತ್ರಜ್ಞರಿಂದ ತಮ್ಮ ಭೂತ, ಭವಿಷ್ಯ, ವರ್ತಮಾನಗಳನ್ನು ಪತ್ರದ ಮಾಧ್ಯಮದಿಂದ ತಿಳಿದುಕೊಳ್ಳಲು ಬಯಸುತ್ತಾರೆ. ಆದರೆ ಅವರಿಗೆ ತಮ್ಮ ಕೈನ ಮುದ್ರೆ ಯಾವ ರೀತಿ ಕಳಿಸಬೇಕೆಂದು ತಿಳಿದಿರುವುದಿಲ್ಲ. ಅಂಥವರಿಗಾಗಿ ನಾನು ಕೆಲವು ಸರಳ ವಿಧಾನಗಳನ್ನು ತಿಳಿಸುತ್ತಿದ್ದೇನೆ.

ಆದರೆ ಹಲವು ಹಸ್ತ ಸಾಮುದ್ರಿಕ ವಿದ್ವಾಂಸನು ಕೈನ ಪ್ರಿಂಟ್‌ನಿಂದ ಫಲ ಕಥನ ಹೇಳುವುದು ಉತ್ತಮವೆಂದು ಭಾವಿಸುವುದಿಲ್ಲ. ಏಕೆಂದರೆ ಅನೇಕ ಬಾರಿ ಪರ್ವತ ಎದ್ದಿರುವುದು ಅಥವಾ ಆಕೃತಿ, ಬಾಗುವಿಕೆ ಅಥವಾ ಬೀಳುವಿಕೆಯ ಸರಿಯಾದ ಜ್ಞಾನ ಚಿತ್ರದಿಂದ ಉಂಟಾಗುವುದಿಲ್ಲ. ಇದೇ ಮಾತು ರೇಖೆಗಳು ಅನ್ಯ ಚಿಹ್ನೆಗಳು ಮತ್ತು ಬಣ್ಣಗಳಿಗೂ ಅನ್ವಯಿಸುತ್ತವೆ.

### 1. ಫೋಟೋ ಸ್ಟುಡಿಯೋದಿಂದ

ಯಾವುದಾದರೂ ಫೋಟೋ ಸ್ಟುಡಿಯೋಗೆ ಹೋಗಿ ಎರಡು ಕೈಗಳ ಭಾವಚಿತ್ರ ತೆಗೆಸಿಕೊಳ್ಳುವುದು ಸರಳ ವಿಧಾನವಾಗಿದೆ. ಗ್ರಹಗಳ ಉಬ್ಬುವಿಕೆಯ ಜ್ಞಾನ ಇದರಿಂದಲೂ ಆಗುತ್ತದೆ ಮತ್ತು ಚಿಕ್ಕ, ಸೂಕ್ಷ್ಮ ತೆಳು ರೇಖೆಗಳ ಜ್ಞಾನವೂ ಸಹ ಉಂಟಾಗುತ್ತದೆ. ಏಕೆಂದರೆ ಕ್ಯಾಮರಾದ ದಿವ್ಯ ದೃಷ್ಟಿಯಿಂದ ಯಾವ ರೇಖೆಯೂ ತಪ್ಪಿಸಿಕೊಳ್ಳಲಾಗುವುದಿಲ್ಲ.

### 2. ಕರ್ಪೂರದ ಹೊಗೆಯಿಂದ

ಕರ್ಪೂರದ ಒಂದು ದೊಡ್ಡ ಬಿಲ್ಲೆಯನ್ನು ತೆಗೆದುಕೊಳ್ಳಿ. ನಂತರ ಒಂದು ದಪ್ಪನಾದ, ಬಿಳಿಯದಾದ, ನುಣುಪಾದ, ಅಂಗೈಗಿಂತ ದೊಡ್ಡದಾದ ಕಾಗದವನ್ನು ತೆಗೆದುಕೊಳ್ಳಿ. ನಂತರ ಕರ್ಪೂರವನ್ನು ಹೊತ್ತಿಸಿರಿ. ಕಾಗದವನ್ನು ಎಚ್ಚರಿಕೆಯಿಂದ ಹೊಗೆಯ ಮೇಲೆ ಹಿಡಿದು ಕಾಗದದ ಮೇಲೆ ಶೇಖರವಾದ ನಂತರ ಅದನ್ನು ಒಂದು ಮೇಜಿನ ಮೇಲೆ ಕಪ್ಪು ಪದರ ಮೇಲ್ಮುಖವಾಗಿರುವಂತೆ ಇಡಿ. ನಂತರ ಇನ್ನೊಂದು ಶುದ್ಧವಾದ ಕಾಗದವನ್ನು ತೆಗೆದುಕೊಳ್ಳಿ. ಹೊಗೆ ಒಟ್ಟುಗೂಡಿರುವ ಕಾಗದದ ಮೇಲೆ ನಿಮ್ಮ ಅಂಗೈಯನ್ನು ಇಟ್ಟು ಭದ್ರವಾಗಿ ಅದುಮಿ. ಕರಿಯ ಹೊಗೆ ಚೆನ್ನಾಗಿ

ಕೈಗೆ ಅಂಟಿಕೊಂಡ ನಂತರ ಕೈಯನ್ನು ಅಲ್ಲಾಡಿಸದೆ ಮೇಲಕ್ಕೆತ್ತಿ. ಅನಂತರ ಇನ್ನೊಂದು ಬಿಳಿಯ ಕಾಗದದ ಮೇಲೆ ಕೈಯನ್ನು ಇಟ್ಟು ಮತ್ತೊಂದು ಕೈನಿಂದ ಅದುಮಿ, ತರುವಾಯ ನಿಧಾನವಾಗಿ ಕೈಯನ್ನು ಮೇಲೆತ್ತಿ. ಈಗ ನಿಮ್ಮ ಕೈನ ಶುದ್ಧತಮ ಚಿತ್ರ ಕಾಗದದ ಮೇಲೆ ಮೂಡಿರುತ್ತದೆ. ಅನಂತರ ಇದರ ಮೇಲೆ ನಿಮ್ಮ ಹೆಸರು, ವಿಳಾಸ ಮತ್ತು ಹುಟ್ಟಿದ ತಾರೀಖನ್ನು ಬರೆದು ನೀವು ಬಯಸಿದ ಜ್ಯೋತಿಷಿಗೆ ಕಳುಹಿಸಿಕೊಡಿ. ನೀವು ಕೈನ ಮುದ್ರೆ ತೆಗೆದುಕೊಳ್ಳುವುದಕ್ಕೆ ಮುಂಚೆ ಕೈಯನ್ನು ಚೆನ್ನಾಗಿ ತೊಳೆದುಕೊಂಡು ಒರೆಸಿಕೊಂಡಿರಬೇಕು.

### 3. ಮುದ್ರಣಾಲಯದ ಇಂಕ್‌ನಿಂದ

ಮುದ್ರಣಾಲಯದಲ್ಲಿ ರೋಲರ್ ಇರುತ್ತದೆ. ಅದರ ಮೇಲೆ ಇಂಕ್ ಹಾಕಲಾಗಿರುತ್ತದೆ. ರೋಲರ್ ಸ್ವಲ್ಪ ಮುದ್ರಣಕಾರ್ಯವನ್ನು ಮಾಡಿದ ನಂತರ ಅದರಲ್ಲಿರುವ ಇಂಕ್ ಸ್ವಲ್ಪ ತೆಳುವಾಗಿರುತ್ತದೆ. ಆಗಲೇ ನೀವು ನಿಮ್ಮ ಕೈನ ಮುದ್ರೆ ತೆಗೆದುಕೊಳ್ಳಲು ಇದನ್ನು ಉಪಯೋಗಿಸಬೇಕು. ಒಂದು ಮೇಜಿನ ಮೇಲೆ ಬಿಳಿಯ ಕಾಗದವನ್ನು ಹರಡಿ. ಕಾಗದದ ಕೆಳಗೆ ಒಂದು ಚಿಕ್ಕದಾದ ರುಮಾಲನ್ನು ಹರಡಿ. ಈಗ ನೀವು ನಿಮ್ಮ ಬಲಗೈಯನ್ನು ರೋಲರ್‌ಗೆ ಅಂಟಿಸಿ. ಪೂರ್ಣ ಕೈಗೆ ಸ್ಯಾಂಡಿ (ಇಂಕು) ಮೆತ್ತಿಕೊಂಡಿರುವುದನ್ನು ಖಾತರಿಪಡಿಸಿಕೊಂಡ ನಂತರ ಬಿಳಿಯ ಕಾಗದದ ಮೇಲೆ ಎಚ್ಚರಿಕೆಯಿಂದ ಕೈಯನ್ನಿಟ್ಟು ಅದುಮಿ ನಂತರ ನಿಧಾನವಾಗಿ ಕೈಯನ್ನು ಮೇಲೆತ್ತಿ. ಇಂಕು ಒಣಗಿದ ನಂತರ ನಿಮ್ಮ ಹೆಸರು ವಿಳಾಸ, ಹುಟ್ಟಿದ ತಾರೀಖನ್ನು ಬರೆದು ನೀವು ಇಚ್ಛಿಸಿದ ಹಸ್ತರೇಖಾ ವಿಶೇಷಜ್ಞನಿಗೆ ಕಳುಹಿಸಿಕೊಡಿ.

### 4. ಕೋರ್ಟ್ ಇಂಕ್‌ನಿಂದ

ಕೋರ್ಟ್–ಕಛೇರಿಗಳಲ್ಲಿ ಅಪರಾಧಿಗಳ ಫಿಂಗರ್ ಪ್ರಿಂಟ್ ತೆಗೆದುಕೊಳ್ಳಲು ಒಂದು ವಿಶೇಷ ರೀತಿಯ ಇಂಕ್‌ನ್ನು ಉಪಯೋಗಿಸಲಾಗುತ್ತದೆ. ಅಂತಹ ಇಂಕನ್ನು ತೆಗೆದುಕೊಂಡು ಕೈಗೆ ತೆಳುವಾಗಿ ಲೇಪಿಸಿ ಬಿಳೀ ಕಾಗದದ ಮೇಲೆ ಕೈನ ಮುದ್ರೆ ತೆಗೆದುಕೊಳ್ಳಿ. ನಂತರ ಹೆಸರು, ವಿಳಾಸ, ಹುಟ್ಟಿದ ತಾರೀಖು ಬರೆದು ನೀವು ಬಯಸಿದ ಹಸ್ತರೇಖಾ ವಿಶೇಷಜ್ಞನಿಗೆ ಕಳುಹಿಸಿಕೊಡಿ.

### 5. ಇಂಕ್ ಪ್ಯಾಂಡ್‌ನಿಂದ

ಕೈಯನ್ನು ಇಂಕ್ ಪ್ಯಾಡ್‌ಗೆ ಒತ್ತಿ ಇಂಕು ಕೈಗೆ ಸರಿಯಾಗಿ ಅಂಟಿಕೊಂಡಿರುವುದನ್ನು ಗಮನಿಸಿ ನಂತರ ಬಿಳಿಯ ಕಾಗದದ ಮೇಲೆ ಕೈನ ಮುದ್ರೆ ತೆಗೆದುಕೊಳ್ಳಿ.

ಎರಡೂ ಕೈಗಳ ಮುದ್ರೆಯನ್ನು ತೆಗೆದುಕೊಳ್ಳುವುದು ಆವಶ್ಯಕ.

# ಅಧ್ಯಾಯ 8

# ಕೈ ಪರೀಕ್ಷೆ ಮಾಡುವ ರೀತಿ

ಪ್ರಶ್ನೆ ಕೇಳುವ ವ್ಯಕ್ತಿ ಮತ್ತು ಜ್ಯೋತಿಷಿಗಳಿಬ್ಬರ ಮನಸಲ್ಲಿ ಸ್ಥಿರತೆ, ಗಂಭೀರತೆ, ಶಾಂತಿ ಇರಬೇಕು. ಪ್ರಾತಃಕಾಲದಲ್ಲಿ ಕೈಯನ್ನು ನೋಡಬೇಕು. ಪ್ರಶ್ನೆ ಕೇಳುವ ವ್ಯಕ್ತಿ ನಿತ್ಯ ಕರ್ಮಾದಿಗಳನ್ನು ಮುಗಿಸಿಕೊಂಡು ಸ್ನಾನ ಮಾಡಿ ಶುಚಿಯಾಗಿ ಜ್ಯೋತಿಷಿಯ ಒಳಗೆ ಬರಬೇಕು. ಆದರೆ ಊಟ ಮಾಡಿಕೊಂಡು ಬರಬಾರದು.

ಯಾವುದಾದರೂ ಕಾರಣದಿಂದ ಬೆಳಗಿನ ಸಮಯದಲ್ಲಿ ಕೈ ನೋಡಲಾಗದಿದ್ದರೆ ಮಧ್ಯಾಹ್ನದ ಸಮಯದಲ್ಲಿ ನೋಡಬಹುದು. ಆದರೆ ಸಂಧ್ಯಾಸಮಯದಲ್ಲಿ ಆಗಲೀ, ರಾತ್ರಿ ವೇಳೆಯಾಗಲೀ ಕೈ ನೋಡಬಾರದು.

ಹೆಚ್ಚು ಬಿಸಿಲು • ಅಥವಾ ಅಧಿಕ ಚಳಿಯ ಸಮಯದಲ್ಲೂ ಕೈ ನೋಡುವುದು ಸರಿಯಲ್ಲ.

ಮುಟ್ಟಿನ ಕಾಲದಲ್ಲಿ, ಭೋಗಿಸಿದ ಮೂರು ದಿನಗಳಲ್ಲಿ ಸ್ತ್ರೀ ತನ್ನ ಕೈಯನ್ನು ತೋರಿಸಬಾರದು.

ಕೈಯನ್ನು ನೋಡಲು ಸತತ ಅಭ್ಯಾಸದ ಅವಶ್ಯಕತೆ ಇದೆ. ಹಸ್ತ ಸಂಬಂಧಿತ ಗ್ರಂಥಗಳನ್ನು ಪೂರ್ಣವಾಗಿ ಅಧ್ಯಯನ ಮನನ ಮಾಡಿದ ನಂತರ, ಅನೇಕ ಕೈಗಳ ಅಧ್ಯಯನ ನಡೆಸಿದ ನಂತರ ಗ್ರಹಗೋಚರ ಮತ್ತು ರೇಖೆಗಳ ಅಧ್ಯಯನದ ನಂತರ, ಹೆಬ್ಬೆರಳು ಬೆರಳು, ಉಗುರು, ಕೈನ ಪೃಷ್ಠಭಾಗ, ಅಂಗೈನ ಆಕಾರ ಪ್ರಕಾರ, ರೂಪ ಬಣ್ಣಗಳನ್ನು ನೋಡಿದ ನಂತರವೇ ಮುಂದುವರೆಯಬೇಕು.

ಇದಲ್ಲದೆ ವ್ಯಕ್ತಿ ಆಕೃತಿ, ರೂಪಬಣ್ಣ ವೇಷ ಭೂಷಣ, ಊಟ ತಿಂಡಿ, ಅವಯವ, ನಡಿಗೆಯ ಮೇಲೂ ಗಮನ ಕೊಡಬೇಕು. ಶರೀರ ಲಕ್ಷಣ, ಚಾರಿತ್ರ್ಯ, ಸ್ವಭಾವವನ್ನು ಸಹ ಗಮನಿಸಬೇಕು.

ಹಸ್ತರೇಖೆ ವಿಶೇಷಜ್ಞನು ಬೇರೆಯವರಿಗೆ ಆಘಾತವಾಗುವಂತಹ ಕಟುಸತ್ಯವನ್ನೂ ಸಹ ಹೇಳಬಾರದು. ಏಕೆಂದರೆ ಯಾರದೇ ಆಸೆಯನ್ನು ನಷ್ಟ ಮಾಡುವ ಅಧಿಕಾರ ನಿಮಗಿರುವುದಿಲ್ಲ.

ಮೊದಲು ಶುಭ ಫಲ ಮತ್ತು ಸುಖದಾಯಕ ಘಟನೆಗಳ ವಿಷಯದಲ್ಲಿ ಪ್ರಶ್ನಕರ್ತನಿಗೆ ತಿಳಿಸಬೇಕು. ವ್ಯಕ್ತಿಗೆ ಸಮಾಧಾನವಾಗುವಂತಹ ಸಾಹಸ ಹೆಚ್ಚಿಸುವಂತಹ ಶಬ್ದಗಳನ್ನು ಮಾತಿನಲ್ಲಿ ಪ್ರಯೋಗಿಸಬೇಕು. ಅನಿಷ್ಟ ಫಲಗಳ ಪರಿಣಾಮವನ್ನು ವ್ಯಕ್ತಿಗೆ

ತಿಳಿಸಿ ಅದರ ನಿವಾರಣೆಗೆ ಉಪಾಯವನ್ನೂ ತಿಳಿಸಿ.

ಕುತರ್ಕ ಮಾಡುವವನ, ಶ್ರದ್ಧಾಹೀನನ, ಅಸತ್ಯವಾದಿಯ, ನಾಸ್ತಿಕನ ಕೈ ಪರೀಕ್ಷೆ ಎಂದಿಗೂ ಮಾಡಬಾರದು.

ಮೊಟ್ಟಮೊದಲು ಕೈಯನ್ನು ಮುಟ್ಟದೇ ಕೈಯನ್ನು ಪರೀಕ್ಷಿಸಬೇಕು. ಸ್ಪರ್ಶ ಮಾಡಿದರೆ ಬೆರಳು ಮುಂತಾದ ಅವಯವಗಳ ಸ್ವಾಭಾವಿಕ ರಚನೆ, ಅಂಗೈನ ಬಣ್ಣದಲ್ಲಿ ಸ್ವಲ್ಪ ವ್ಯತ್ಯಾಸ ಉಂಟಾಗುತ್ತದೆ. ಅಂಗೈನ ಪೃಷ್ಠಭಾಗ, ಉಗುರು, ಬಣ್ಣ ನೋಡಿ. ನಂತರ ಬೆರಳುಗಳ ರಚನೆ, ಭಾಗ, ತೀಕ್ಷ್ಣತನ ಗಮನಿಸಿ.

ಕೈನ ಹಿಂಬದಿಯ ಪೃಷ್ಠಭಾಗವನ್ನು ನೋಡಿದ ನಂತರ ಅಂಗೈನ ಭಾಗವನ್ನು ನೋಡಿ. ಅಂಗೈನ ಮುಖ್ಯ ಮತ್ತು ಸೂಕ್ಷ್ಮ ರೇಖೆಗಳು, ಬಣ್ಣ ಆಳ, ಎತ್ತರ, ಪರ್ವತ, ಗ್ರಹ ಮತ್ತು ಗ್ರಹಕ್ಷೇತ್ರಗಳ ಸ್ಥಿತಿಯನ್ನು ನೋಡಿ. ಪರ್ವತ ಮತ್ತು ಅವುಗಳ ಸಂಧಿ, ಬೆರಳುಗಳ ಮೇಲೆ ರೇಖೆಗಳು ಮತ್ತು ಗಂಟುಗಳನ್ನು ನೋಡಿ. ಅನಂತರ ಚಿಹ್ನೆ ಮತ್ತು ಪರ್ವಗಳನ್ನು ನೋಡಿ.

ಹಸ್ತರೇಖೆಯ ವಿದ್ವಾಂಸರ ಅಭಿಪ್ರಾಯದಲ್ಲಿ ಪುರುಷರ ಬಲಗೈಯನ್ನು, ಸ್ತ್ರೀಯರ ಎಡಗೈಯನ್ನು ನೋಡಬೇಕು.

ಆದರೆ ಪುರುಷ ಅಥವಾ ಸ್ತ್ರೀಯರ ಎರಡು ಕೈಗಳನ್ನೂ ನೋಡಿ ಫಲ ಕಥನ ಹೇಳುವುದು ಸೂಕ್ತವಾಗಿರುತ್ತದೆ. ಯಾವ ಲಕ್ಷಣಗಳು ಎರಡೂ ಕೈಗಳಲ್ಲಿ ಸ್ಪಷ್ಟವಾಗಿ ಮತ್ತು ದೃಢವಾಗಿ ತಿಳಿದುಬರುವುದೋ ಆಗಲೇ ಫಲ ಕಥನ ಹೇಳಬೇಕು.

ಆದರೆ ಯಾವಾಗ ಮನುಷ್ಯನ ಎಡಗೈ ಹೆಚ್ಚು ಕ್ರಿಯಾಶೀಲವಾಗಿರುತ್ತದೋ ಅಂದರೆ ಎಡಗೈನಿಂದ ಬರೆದರೆ ಮತ್ತು ಎಡಗೈನಿಂದಲೇ ಮಹತ್ವಪೂರ್ಣ ಕಾರ್ಯವನ್ನು ನಿರ್ವಹಿಸಿದರೆ ಆಗ ಎಡಗೈಯನ್ನು ನೋಡಿಯೇ ಫಲ ಹೇಳಬೇಕು. ಇದರಿಂದಾಗಿ ಫಲಕಥನ ಹೆಚ್ಚು ಸತ್ಯವಾಗಿರುತ್ತದೆ.

ಕೈ ಮತ್ತು ಕೈನ ಪ್ರಿಂಟ್ (ಮುದ್ರೆ) ಎರಡನ್ನೂ ಜೊತೆಯಲ್ಲಿಟ್ಟುಕೊಂಡು ಫಲಾದೇಶ ನೀಡಿದರೆ ಉತ್ತಮವಾಗಿರುತ್ತದೆ.

16 ವರ್ಷದವರೆಗೆ ಬಾಲಕ ಅಥವಾ ಬಾಲಕಿ ಪರಾಧೀನವಾಗಿರುತ್ತಾರೆ. ಆದ್ದರಿಂದ ಅಂತಹವರ ರೇಖೆಗಳು ಪುಷ್ಟವಾಗಿರುವುದಿಲ್ಲ. ಆದ್ದರಿಂದ ಇಂತಹವರ ಕೈ ಪರೀಕ್ಷೆ ಮಾಡಬಾರದು.

ಪರಾವಲಂಬಿಗಳು, ಹೇಡಿಗಳು, ಹೆಣ್ಣಿನಂತೆ ಸ್ವಭಾವವುಳ್ಳ ವ್ಯಕ್ತಿಗಳ

ಕೈ ನೋಡುವ ಹಾಗಿದ್ದರೆ ಎಡಗೈಗೇ ಪ್ರಾಧಾನ್ಯತೆ ಕೊಡಬೇಕು. ಆದರೆ ಸ್ವಾವಲಂಬಿ, ಸ್ವತಂತ್ರ ಮತ್ತು ಪುರುಷರಂತೆ ಸ್ವಭಾವವಿರುವ ಸ್ತ್ರೀಯು ಬಲಗೈಯನ್ನು ನೋಡಬೇಕು.

ಬಲಗೈ ಮನುಷ್ಯನ ಈ ಜನ್ಮದ ಕಾರ್ಯಗಳ ಸಾಕ್ಷಿ ಮತ್ತು ಎಡಗೈ ಪೂರ್ವ ಜನ್ಮದ ಸಂಚಿತ ಕಾರ್ಯಗಳ ಪರಿಚಾಯಕವೆಂದು ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದ್ದರಿಂದ ಪುರುಷರಾಗಲೀ ಅಥವಾ ಸ್ತ್ರೀಯರಾಗಲೀ ಅವರ ವರ್ತಮಾನವನ್ನು ತಿಳಿದುಕೊಳ್ಳಲು ಯಾವಾಗಲೂ ಬಲಗೈಯನ್ನೇ ನೋಡಬೇಕು ಮತ್ತು ಪೂರ್ವಜನ್ಮದ ಅರ್ಜಿತ ಕರ್ಮಗಳ ಫಲಗಳನ್ನು ತಿಳಿದುಕೊಳ್ಳಲು ಎಡಗೈಯನ್ನು ನೋಡಬೇಕು.

ಇನ್ನೂ ಕೆಲವು ವಿದ್ವಾಂಸರ ಅಭಿಪ್ರಾಯದಲ್ಲಿ ಪುರುಷನ ಬಲಗೈ ಅವನ ಯತಾರ್ಥ ಚಾರಿತ್ರ್ಯ, ಸ್ವಭಾವ, ವ್ಯಕ್ತಿತ್ವ, ಸ್ವರೂಪ ಭೂತ-ಭವಿಷ್ಯದ ಪರಿಚಯ ನೀಡುತ್ತದೆಂದು ಮತ್ತು ಅವನ ಎಡಗೈ ಅವನ ಪತ್ನಿಯ ಚಾರಿತ್ರ್ಯ, ಸ್ವಭಾವ, ಭೂತ-ಭವಿಷ್ಯ ಮುಂತಾದವುಗಳ ದ್ಯೋತಕವೆಂದಾಗಿದೆ. ಇದೇ ರೀತಿ ಸ್ತ್ರೀಯು ಎಡಗೈನಿಂದ ಯತಾರ್ಥ ಚಾರಿತ್ರ್ಯ, ಸ್ವಭಾವ, ಭೂತ-ಭವಿಷ್ಯ ಗೊತ್ತಾಗುತ್ತದೆ. ಬಲಗೈನಿಂದ ಆ ಸ್ತ್ರೀಯ ಪತಿಯ ಚಾರಿತ್ರ್ಯ, ಸ್ವಭಾವ, ಭೂತ-ಭವಿಷ್ಯದ ಪತ್ತೆಯಾಗುತ್ತದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಆದ್ದರಿಂದ ಪುರುಷರಾಗಲೀ ಅಥವಾ ಸ್ತ್ರೀಯರಾಗಲೀ ಅವರ ಎರಡೂ ಕೈಗಳನ್ನು ಪರೀಕ್ಷೆ ಮಾಡುವುದು ಸೂಕ್ತವಾಗಿರುತ್ತದೆ. ಆದರೆ ಪುರುಷನ ಬಲಗೈಗೆ ಮತ್ತು ಸ್ತ್ರೀಯ ಎಡಗೈಗೆ ಹೆಚ್ಚು ಪ್ರಾಧಾನ್ಯತೆ ಕೊಡಬೇಕು. ಪುರುಷನ ಎಡಗೈಯನ್ನು ಬಲಗೈನ ಸಹಾಯಕವೆಂದು ಭಾವಿಸಬೇಕು.

ಪುರುಷರ ಬಲಗೈಲಿ ಮತ್ತು ಸ್ತ್ರೀಯರ ಎಡಗೈಲಿ ಪ್ರಭಾವ ರೇಖೆಗಳು, ಮುಖ್ಯ ರೇಖೆಗಳು, ಕೈನ ಚಿಹ್ನೆಗಳಲ್ಲಿನ ಸ್ವರೂಪದಲ್ಲಿ ಪರಿವರ್ತನೆ ಅಥವಾ ಕಡಿಮೆ ಹೆಚ್ಚು ಅಧಿಕವಾಗಿರುತ್ತದೆ. ಆದ್ದರಿಂದ ಪುರುಷನ ಬಲಗೈಯನ್ನು ಮತ್ತು ಸ್ತ್ರೀಯ ಎಡಗೈಯನ್ನು ಮುಖ್ಯ ರೂಪದಿಂದ ಪರೀಕ್ಷೆ ಮಾಡುವುದು ಸೂಕ್ತವಾಗಿರುತ್ತದೆ.

ಪುರುಷನ ಬಲಗೈನಲ್ಲಿ ಯಾವ ಲಕ್ಷಣಗಳು ಕಾಣಿಸುತ್ತವೆಯೋ ಅವೇ ಲಕ್ಷಣಗಳು ಅವನ ಎಡಗೈನಲ್ಲಿ ಇದ್ದರೆ ಅದರ ಸಮರ್ಥನೆಯನ್ನು ತೆಗೆದುಕೊಳ್ಳಬೇಕು. ಇದೇ ರೀತಿ ಸ್ತ್ರೀಯು ಎಡಗೈನಲ್ಲಿ ಯಾವ ಲಕ್ಷಣಗಳು

ಕಾಣಿಸುತ್ತವೆಯೋ ಅವು ಬಲಗೈನಲ್ಲೂ ಕಾಣಿಸಿದರೆ ಅವುಗಳನ್ನೂ ಸಮರ್ಥನೆಯೆಂದು ಒಪ್ಪಿಕೊಳ್ಳಬೇಕು.

ಒಂದು ಕೈನಲ್ಲಿ ಯಾವುದಾದರೂ ರೇಖೆ ಅಥವಾ ಚಿಹ್ನೆ ಇದ್ದರೆ ಮತ್ತು ಮತ್ತೊಂದು ಕೈನಲ್ಲಿ ಅವುಗಳು ಇಲ್ಲದೇ ಹೋದರೆ ಅವನ ಪರಿಣಾಮ ಸಂಶಯಾತ್ಮಕವೆಂದು ತಿಳಿದುಕೊಳ್ಳಬೇಕು. ಆದರೆ ಒಂದು ವೇಳೆ ಎರಡೂ ಕೈಗಳಲ್ಲಿ ಒಂದೇ ರೀತಿಯ ರೇಖೆ ಅಥವಾ ಚಿಹ್ನೆ ಇದ್ದರೆ ಅವನ ಪರಿಣಾಮ ನಿಶ್ಚಯಾತ್ಮಕವೆಂದು ತಿಳಿದುಕೊಳ್ಳಬೇಕು.

**ಅಂಗೈ ಮತ್ತು ಅದರ ಚರ್ಮ:** ಅಂಗೈನ ಚರ್ಮದ ಬಗ್ಗೆ ತಿಳುವಳಿಕೆಯೂ ಸಹ ಕೈ ನೋಡಲು ಅತ್ಯಂತ ಆವಶ್ಯಕ. ಇದರಿಂದ ಅನೇಕ ಮಹತ್ವಪೂರ್ಣ ನಿಷ್ಕರ್ಷೆ ಮಾಡಬಹುದು.

ಚರ್ಮ ' ನುಣುಪಾಗಿರುವುದೆ ? ಒರಟಾಗಿರುವುದೆ ? ರಕ್ತಾಂಬವಾಗಿದೆಯೆ ? ಹಳದಿ ಬಣ್ಣದಿಂದಿರುವುದೆ ? ಕಡಿಮೆ ರೇಖೆಗಳಿರುವುದೆ ? ರೇಖೆ ಬಲೆಯಿಂದ ಕೂಡಿರುವ ಚರ್ಮವೆ ? ಎಂಬ ಪ್ರಶ್ನೆಗಳಿಗೆ ದೊರಕುವ ಪರಿಣಾಮ ಬೇರೆ ಬೇರೆಯಾಗಿರುತ್ತದೆ.

, ಹೆಚ್ಚು ನುಣುಪಾಗಿರುವ, ಮೃದುವಾಗಿರುವ, ಕೋಮಲವಾಗಿರುವ ಚರ್ಮ ಸರಳತೆ, ಶುದ್ಧತೆ, ಭಾವುಕತೆ, ಸಂವೇದನ ಶೀಲತೆ, ದಯಾಳುತನ ಮುಂತಾದವುಗಳ ಪ್ರತೀಕವಾಗಿದೆ. ಇಂತಹ ವ್ಯಕ್ತಿಗಳ ಮನಸ್ಸು, ಮಸ್ತಿಷ್ಕದಲ್ಲಿ ಕಲ್ಪನೆಗಳ ಭೂಕಂಪ ಉಕ್ಕುತ್ತಿರುತ್ತದೆ; ಆದ್ದರಿಂದ ಅಂತಹವನು ಚಂಚಲನು, ಅಸ್ಥಿರನು, ಡೋಲಾಯಮಾನನು ಆಗಿರುತ್ತಾನೆ.

ಒರಟಾಗಿರುವ ಮತ್ತು ದಪ್ಪವಾಗಿರುವ ಚರ್ಮ ದೃಢತೆ, ಕಠೋರತೆ, ಸ್ಥಿರತೆ, ದೃಢ ಮನೋಬಲ, ಕ್ರೂರತೆ, ತೀವ್ರತೆಯ ಪರಿಚಾಯಕವಾಗಿದೆ.

ಸಾಮಾನ್ಯ ರೀತಿಯ ಚರ್ಮ ಅಂದರೆ ಹೆಚ್ಚು ಕಠೋರವಾಗಿರದೆ, ಹೆಚ್ಚು ಮೃದುವಾಗಿರದ, ಹೆಚ್ಚು ನುಣುಪಾಗಿರದ, ಹೆಚ್ಚು ಒರಟಾಗಿರದ ಚರ್ಮ ಸಾತ್ವಿಕತೆ, ತೀವ್ರ ಬುದ್ಧಿ, ಸಾಮಾನ್ಯ ದೃಢತೆ, ವಿದ್ವತ್ತು, ಸಂತುಲಿತ ಅನುಶಾಸಿತ ಮನಸ್ಸು-ಮಸ್ತಿಷ್ಕ, ಕೀರ್ತಿ, ಲಾಭ, ಜಾಗರೂಕತೆ, ಭವಿಷ್ಯದ ಪ್ರತಿ ಹೊಂದಿರುವ ಎಚ್ಚರಿಕೆಯ ಪ್ರತೀಕವಾಗಿರುತ್ತದೆ. ಇಂತಹ ವ್ಯಕ್ತಿ ಪ್ರತಿಯೊಂದು ಕಾರ್ಯದ ಜಯ-ಪರಾಜಯ, ಹಾನಿ-ಲಾಭ, ಕೀರ್ತಿ-ಅಪಕೀರ್ತಿಯ ಗಮನ ಮಾಡುತ್ತಾನೆ.

**ಅಂಗೈ ಪರೀಕ್ಷೆಯ ಹಲವು ನಿಯಮಗಳು**

1. ಸರ್ವ ಪ್ರಥಮವಾಗಿ ಪ್ರಶ್ನಕರ್ತನ ಎರಡೂ ಅಂಗೈಗಳನ್ನು ಸ್ವಲ್ಪ

ಆದುದರಿಂದ ಅದರ ಮಾಂಸವನ್ನು ಗಮನಿಸಬೇಕು.

2. ದಪ್ಪ ದಪ್ಪ ರೇಖೆಗಳ ಹರಡಿಕೊಂಡಿರುವಿಕೆ, ಆಳ, ಉದ್ದ, ತಿರುವು, ಅನ್ಯಾಯ ನ್ಯಾಯ ರೇಖೆಗಳೊಂದಿಗಿರುವ ಸಂಬಂಧವನ್ನು ನೋಡಬೇಕು.
3. ಅಂಗೈನಲ್ಲಿರುವ ಚಿಹ್ನೆಗಳನ್ನು ಗಮನವಿಟ್ಟು ನೋಡಬೇಕು.
4. ಅಂಗೈನ ಮಾಂಸದ ಗಂಟುಗಳು, ಕಠೋರತೆ, ಮೃದು, ನುಣುಪು, ಒರಟುತನವನ್ನು ಗಮನಿಸಬೇಕು.
5. ಅಂಗೈಯನ್ನು ಅಮುಕುವುದರಿಂದ ಕೆಂಪು ಬಣ್ಣ ಹೆಚ್ಚಾಗುತ್ತದೆಯೋ ಮತ್ತು ಹತ್ತಿಯಂತೆ ಮೃದುವಾಗಿರುವುದೇ ಎಂಬುದನ್ನು ಗಮನಿಸಬೇಕು.
6. ಗಟ್ಟಿಯಾದ, ಕಠೋರ ಅಂಗೈ ಶಾರೀರಿಕ ಶ್ರಮದ ಅಧಿಕತೆಯನ್ನು ವ್ಯಕ್ತಪಡಿಸುತ್ತದೆ. ಇವರಲ್ಲಿ ಬೌದ್ಧಿಕ ಸಾಮರ್ಥ್ಯ ಕಡಿಮೆ ಕಂಡು ಬರುತ್ತದೆ. ಆದರೆ ಶಾರೀರಿಕ ಶಕ್ತಿ ಹೆಚ್ಚಾಗಿರುತ್ತದೆ. ಇವರ ವಿಚಾರಶಕ್ತಿ, ಕಲ್ಪನೆಗಳು, ಭಾವನೆಗಳು ಸ್ವತಂತ್ರವಾಗಿರುವುದಿಲ್ಲ. ಆದರೆ ಬೇರೆಯವರ ಮೂಲಕ ಸಂಚಾಲಿತವಾಗುತ್ತದೆ. ಕೂಲಿಗಳು, ರೈತರು, ಕಮ್ಮಾರರು ಮತ್ತು ದೈಹಿಕ ಶ್ರಮ ಪಡುವ ವ್ಯಕ್ತಿಗಳ ಕೈ ಇದೇ ರೀತಿ ಇರುತ್ತದೆ.
7. ಹೆಚ್ಚು ಕೋಮಲ, ಮಾಂಸದ ಕೈ ಉಳ್ಳ ವ್ಯಕ್ತಿಗಳು ವ್ಯಾವಹಾರಿಕತೆಯ ಬೆಲೆಯನ್ನು ತಿಳಿದುಕೊಳ್ಳುವುದಿಲ್ಲ. ಇವರಲ್ಲಿ ಕಲ್ಪನಾಶಕ್ತಿ ಪ್ರಬಲವಾಗಿರುತ್ತದೆ. ಆದರೆ ಇಂತಹವರು ಹಗಲುಗನಸು ಕಾಣುತ್ತಿರುತ್ತಾರೆ. ಕಲ್ಪನೆಯನ್ನು ಸಾಕಾರಗೊಳಿಸುವ ಸಾಮರ್ಥ್ಯ ಇವರಲ್ಲಿ ಇರುವುದಿಲ್ಲ. ಗಾಳಿಯಲ್ಲೇ ಅರಮನೆ ಕಟ್ಟುತ್ತಾ ಬೀಳಿಸುತ್ತಾ ಇರುತ್ತಾರೆ. ಮೌಲಿಕತೆ ಇವರಲ್ಲಿ ಶೂನ್ಯ. ಇವರು ಭೋಗ ಪ್ರಧಾನರು, ಸುಖಭೋಗ ಲುಪ್ತರು ಮತ್ತು ವಾಚಾಳಿಗಳೂ ಆಗಿರುವುದರಿಂದ ಬಹಳ ಸೋಮಾರಿಗಳಾಗಿರುತ್ತಾರೆ. ಲಕ್ಷ್ಯಹೀನರಾದ ಇಂತಹ ವ್ಯಕ್ತಿಗಳು ಅಕರ್ಮಣ್ಯರಾಗಿ ಜೀವನ ಕಳೆಯುತ್ತಾರೆ.

ಬಳುಕುವ ಅಂಗೈ ಇರುವ ವ್ಯಕ್ತಿಗಳು ಕೇವಲ ಕಲ್ಪನಾಲೋಕದಲ್ಲಿ ವಿಹರಿಸುವುದಷ್ಟೇ ಅಲ್ಲದೇ ಅದನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಪರಿಣಿತರಾಗಿರುತ್ತಾರೆ. ಇಂತಹ ವ್ಯಕ್ತಿಗಳು ಕರ್ತವ್ಯದ ಪ್ರತಿ ಅತ್ಯಂತ

ಜಾಗರೂಕರಾಗಿರುತ್ತಾರೆ ಮತ್ತು ಸಮಾಜದಲ್ಲಿ ತಮ್ಮ ಉತ್ತರದಾಯಿತ್ವವನ್ನು ಚೆನ್ನಾಗಿ ಅರಿತಿರುತ್ತಾರೆ. ಇವರಲ್ಲಿ ಸದ್ಗುಣಗಳ ಪ್ರಾಧಾನ್ಯತೆ ಇರುತ್ತದೆ.

ಬಿಳಿ ಮತ್ತು ಗುಲಾಬಿ ಬಣ್ಣದ ಚರ್ಮದ ವ್ಯಕ್ತಿಗಳು ಸದಾ ಚಿಂತಿತರಾಗಿರುತ್ತಾರೆ. ಇವರು ಶಾರೀರಿಕ ದೃಷ್ಟಿಯಿಂದ ದುರ್ಬಲರು, ಹೃದಯರೋಗದವರು, ಕಫ ವಾತ ರೋಗಗಳಿಂದ ಪೀಡಿತರು ಮತ್ತು ವಾಯುಪ್ರಕೋಪದಿಂದ ಪೀಡಿತರು ಆಗಿರುತ್ತಾರೆ. ಕಫ ಇವರಲ್ಲಿ ಹೆಚ್ಚಾಗಿರುತ್ತದೆ. ಪ್ರಾಯಃ ತಲೆನೋವು ಇರುತ್ತದೆ. ಇವರು ಶಾರೀರಿಕ ಶ್ರಮವನ್ನು ಪಡಲಾರರು. ಆಲಸ್ಯ ಪ್ರಧಾನರು, ಕಲ್ಪನಾ ಪ್ರಧಾನರು, ಸರಿ ನಿರ್ಣಯ ತೆಗೆದುಕೊಳ್ಳುವುದರಲ್ಲಿ ಅಸಫಲರು, ರಹಸ್ಯ, ರೋಮಾಂಚ, ಭೋಗ ಕಾಮುಕತೆಯಲ್ಲಿ ಹೆಚ್ಚು ಆಸಕ್ತಿ ಉಳ್ಳವರು ಇವರಾಗಿರುತ್ತಾರೆ.

ಗುಲಾಬಿ ಬಣ್ಣದ ಅಂಗೈ ಶ್ರೇಷ್ಠ ವ್ಯಕ್ತಿತ್ವದ ಪರಿಚಾಯಕವಾಗಿದೆ. ಸ್ವಚ್ಛ ವ್ಯಕ್ತಿತ್ವದವರೂ, ಶೀಘ್ರ ನಿರ್ಣಯ ತೆಗೆದುಕೊಳ್ಳುವವರು, ವಾಚಾಳಿಗಳು, ಭಾಷಣ ಕಲೆಯಲ್ಲಿ ದಕ್ಷರು, ಜನ ಮುಖಂಡರು ಇವರಾಗಿರುತ್ತಾರೆ.

8. ಹೆಚ್ಚು ದಟ್ಟವಾದ ಕೆಂಪು ಬಣ್ಣ ಅಂತಹ ಶ್ರೇಷ್ಠ ಲಕ್ಷಣವಲ್ಲ. ದಟ್ಟವಾದ ಕೆಂಪು ಬಣ್ಣ ರಕ್ತ ಪ್ರವಾಹದ ತೀವ್ರತೆ ಮತ್ತು ಅಧಿಕತೆಯ ಪರಿಚಾಯಕವಾಗಿದೆ. ಇದರಿಂದ ರಕ್ತ ಪ್ರವಾಹ ಅಸಂತುಲಿತವಾಗಿರುತ್ತದೆ. ಇಂತಹ ವ್ಯಕ್ತಿಗಳು ಯಾವುದಾರೂ ರೋಗದಿಂದ ಪೀಡಿತರಾಗಿರುತ್ತಾರೆ. ಇದರಿಂದ ರಕ್ತ ಒತ್ತಡದಂತಹ ರೋಗ ಉಂಟಾಗುತ್ತದೆ. ಕ್ರೋಧದ ತೀವ್ರತೆ, ರೇಗುವ ಸ್ವಭಾವ, ಆತುರದ ಸ್ವಭಾವ, ಶೀಘ್ರ ನಿರ್ಣಯ ತೆಗೆದುಕೊಂಡು ಪಶ್ಚಾತ್ತಾಪ ಪಡುವ ಸ್ವಭಾವದವರಾಗಿರುತ್ತಾರೆ. ಇವರು ಅವಿವೇಕಿಗಳು, ಎಲ್ಲಾ ಕಾರ್ಯಗಳನ್ನು ಅತಿ ಮಾಡಿಕೊಳ್ಳುವವರೂ ಆಗಿರುತ್ತಾರೆ.

9. ಅಂಗೈನ ಬಣ್ಣ ಹಳದಿಯಾಗಿದ್ದರೆ ಪಿತ್ತ ಇವರಲ್ಲಿ ಹೆಚ್ಚಾಗಿರುತ್ತದೆ ಮತ್ತು ಪಿತ್ತಜನ್ಯ ರೋಗವೇ ಇವರನ್ನು ಆವರಿಸಿಕೊಂಡು ಆಲಸ್ಯ ಹೆಚ್ಚಾಗುವಂತೆ ಮಾಡುತ್ತದೆ. ಇವರಿಗೆ ಯಾವ ಕೆಲಸ ಮಾಡುವುದಕ್ಕೂ ಮನಸ್ಸಿರುವುದಿಲ್ಲ. ಮುಖದ ಮೇಲೆ ಉದಾಸತನ, ಆಳವಾಗಿ ಹೂತುಕೊಂಡಿರುವ ಕಣ್ಣುಗಳು, ಅಸ್ವಸ್ಥತೆ ಮತ್ತು ವಿಕಾರದ ಲಕ್ಷಣಗಳನ್ನು ಪ್ರಕಟಿಸುತ್ತವೆ.

10. ಕೆಲವು ಅಂಗೈಗಳಲ್ಲಿ ನೀಲಿ ಬಣ್ಣ ಅಥವಾ ಬದನೆ ಬಣ್ಣದ ಕಾಂತಿಯ ಆಭಾಸವಾಗುತ್ತದೆ. ಇದು ದೂಷಿತ ಬಣ್ಣದ ಪರಿಚಾಯಕವಾಗಿದೆ. ಈ ಜನಗಳು ಚರ್ಮರೋಗದಿಂದ ಪೀಡಿತರಾಗಿರುತ್ತಾರೆ ಮತ್ತು ಮಾನಸಿಕ ಚಿಂತೆಯಲ್ಲಿ ಮುಳುಗಿರುತ್ತಾರೆ.
11. ಅನೇಕ ಬಣ್ಣಗಳಿಂದ ಮಿಶ್ರಿತವಾದ ವಿವರ್ಣ ಅಂಗೈ ಉಳ್ಳ ವ್ಯಕ್ತಿಗಳು ಕಷ್ಟ, ರೋಗ, ಭಿನ್ನ ಭಿನ್ನ ಚರ್ಮ ರೋಗಗಳಿಂದ ಪೀಡಿತರಾಗಿರುತ್ತಾರೆ.

# ಅಧ್ಯಾಯ 9
# ಕೆಲವು ವಿಶೇಷ ಕೈಗಳ ಪರಿಚಯ

## 1. ಉದ್ಯಮಿ

ಈ ವ್ಯಕ್ತಿ ವ್ಯಾಪಾರ ಅಥವಾ ಉದ್ಯಮ ಮಾಡುತ್ತಾನೆ. ಇವನ ಕೈನ ಹೆಬ್ಬೆರಳು ನೇರವಾಗಿ ಮತ್ತು ಹಿಂಬದಿಗೆ ಸ್ವಲ್ಪ ಬಾಗಿರುವಂತಿರುತ್ತದೆ.



ಇದರ ಜೊತೆಯಲ್ಲೇ ಅಂಗೈನಲ್ಲಿ ಮಸ್ತಿಷ್ಕರೇಖೆ ನೇರವಾಗಿ ಮತ್ತು ಸ್ಪಷ್ಟವಾಗಿ ಇರುತ್ತದೆ ಮತ್ತು ಬುಧ ಪರ್ವತ ಸಾಮಾನ್ಯ ರೀತಿಯಲ್ಲಿ ಉಬ್ಬಿಕೊಂಡಿರುತ್ತದೆ. ಇದರ ಮೇಲೆ ಯಾವುದೇ ರೀತಿಯ ಬಲೆಯ ಚಿಹ್ನೆ ಇರುವುದಿಲ್ಲ. ಬುಧನ ಬೆರಳು ಅಂದರೆ ಕಿರುಬೆರಳು ಸ್ವಲ್ಪ ಉದ್ದವಾಗಿರುತ್ತದೆ.

ಬುಧ ಪರ್ವತದ ಕಡೆಗೆ ಒಂದು ವೇಳೆ ಮಸ್ತಿಷ್ಕ ರೇಖೆಯ ಯಾವುದಾದರೂ ಶಾಖೆ ಬರುತ್ತಿದ್ದರೆ ಇಂತಹ ವ್ಯಕ್ತಿ ತನ್ನ ಕ್ಷೇತ್ರದಲ್ಲಿ ಪೂರ್ಣ ಸಫಲನಾಗುತ್ತಾನೆಂದು ತಿಳಿದುಕೊಳ್ಳಬೇಕು.

## 2. ಲಕ್ಷಾಧಿಪತಿ

ಯಾರ ಕೈನಲ್ಲಿ ಸೂರ್ಯ ರೇಖೆ ತನ್ನಷ್ಟಕ್ಕೆ ತಾನೇ ಪ್ರಬಲವಾಗಿದ್ದರೆ ಜೊತೆಯಲ್ಲಿ ಶುಕ್ರಪರ್ವತ ವಿಕಸಿತವಾಗಿದ್ದರೆ ಮತ್ತು ಅದರ ಮೇಲೆ ಯಾವುದೇ ಪ್ರಕಾರದ ಜಾಲ ಅಥವಾ ಮುರಿದು ಹೋಗಿರುವ ರೇಖೆ ಇಲ್ಲದಿದ್ದರೆ ಇಂತಹ ವ್ಯಕ್ತಿ ಆರ್ಥಿಕ ದೃಷ್ಟಿಯಿಂದ ಅನುಕೂಲನೆಂದು ತಿಳಿದು ಕೊಳ್ಳಬೇಕು. ಆದರೆ ಯಾವಾಗ ಭಾಗ್ಯರೇಖೆ ನೇರವಾಗಿ ಸ್ಪಷ್ಟವಾಗಿ ಮತ್ತು ಕೆಂಪು ಬಣ್ಣದಿಂದ ಕೂಡಿಕೊಂಡು ಹಾಗೂ ಅದರ



ಯಾವುದಾದರೊಂದು ಶಾಖೆ ಸೂರ್ಯಪರ್ವತದ ಕಡೆಗೆ ಹೋಗುತ್ತಿದ್ದರೆ ಮತ್ತು ಮಸ್ತಿಷ್ಕರೇಖೆ ಪೂರ್ಣವಾಗಿ ವಿಕಸಿತವಾಗಿದ್ದರೆ ವ್ಯಕ್ತಿ ಖಂಡಿತಾ

ಲಕ್ಷಾಧಿಪತಿಯಾಗುತ್ತಾನೆ ಮತ್ತು ಆರ್ಥಿಕ ದೃಷ್ಟಿಯಿಂದ ಪೂರ್ಣ ಅನುಕೂಲತೆ ಪಡೆದುಕೊಂಡು ಪೂರ್ಣ ಸುಖ ಭೋಗಿಸುತ್ತಾನೆ.

### 3. ಅಕೌಂಟೆಂಟ್ (ಲೆಕ್ಕ ಬರೆಯುವವನು)

ಇಂತಹ ವ್ಯಕ್ತಿಯ ಬುಧ ಪರ್ವತ ತನ್ನೊಳಗೇ ವಿಕಸಿತವಾಗಿರುತ್ತದೆ ಮತ್ತು ಮೇಲಕ್ಕೆ ಎದ್ದಿರುತ್ತದೆ. ಜೊತೆಯಲ್ಲಿ ಇವನ ಸೂರ್ಯ ಪರ್ವತವೂ ಉಬ್ಬಿರುತ್ತದೆ ಮತ್ತು ಅದರ ಮೇಲೆ ಸೂರ್ಯರೇಖೆ ಪೂರ್ಣವಾಗಿ ಕಂಡುಬರುತ್ತದೆ. ಭಾಗ್ಯರೇಖೆ ಎಲ್ಲಿಯೂ ಕತ್ತರಿಸಲ್ಪಡದೆ ಮಧ್ಯದ ಬೆರಳಿನ ಮೂಲದಲ್ಲಿ ಸ್ಥಿತ ಶನಿ ಪರ್ವತದ ಮೇಲೆ ಸಫಲತೆಯಿಂದ ಹೋಗಿರುತ್ತದೆ.



### 4. ನ್ಯಾಯಾಧೀಶ

ಯಾವ ವ್ಯಕ್ತಿಯ ಕೈನಲ್ಲಿ ತೋರು ಬೆರಳು ಉಂಗುರದ ಬೆರಳಿಗಿಂತ ಸ್ವಲ್ಪ ಉದ್ದವಾಗಿರುತ್ತದೋ ಮತ್ತು ಕಿರುಬೆರಳು ಉಂಗುರದ ಬೆರಳಿನ ಮೂರನೇ ಭಾಗದಿಂದ ಸ್ವಲ್ಪ ಮೇಲಕ್ಕೆ ಇರುತ್ತದೋ ಜೊತೆಯಲ್ಲೇ ಎಲ್ಲಾ ಬೆರಳುಗಳು ಸುಂದರವಾಗಿರುತ್ತದೋ ಮತ್ತು ಗುರು ಪರ್ವತ ಪೂರ್ಣವಾಗಿ ವಿಕಸಿತವಾಗಿರುತ್ತದೋ ಮತ್ತು ಅದರ ಮೇಲೆ ಕ್ರಾಸ್ ಚಿಹ್ನೆ ಇರುತ್ತದೋ ಅಂತಹ ವ್ಯಕ್ತಿ ವಿಖ್ಯಾತ ವಕೀಲನಾಗುತ್ತಾನೆ. ಈ ಮೇಲೆ ಹೇಳಿದ ಗುಣಗಳ ಜೊತೆಯಲ್ಲಿ ಒಂದು ವೇಳೆ ವ್ಯಕ್ತಿಯ ಅಂಗೈನಲ್ಲಿ ಭಾಗ್ಯರೇಖೆ ನಿರ್ದೋಷವಾಗಿ, ತೆಳುವಾಗಿ ಮತ್ತು ಸ್ಪಷ್ಟವಾಗಿ ಇದ್ದರೆ ಜೊತೆಯಲ್ಲಿ ಸೂರ್ಯ ಪೂರ್ಣ ಪ್ರಭಾವಯುಕ್ತನಾಗಿದ್ದರೆ ಮತ್ತು ಹೆಬ್ಬೆರಳು ಉದ್ದವಾಗಿ ಮತ್ತು ಹಿಂಬದಿಯ ಕಡೆಗೆ ಬಾಗಿದ್ದರೆ ಆ ವ್ಯಕ್ತಿ ನಿಶ್ಚಯವಾಗಿ ಸಫಲ ನ್ಯಾಯಾಧೀಶನಾಗುತ್ತಾನೆ. ಮೇಲೆ ತಿಳಿಸಿದ ಗುಣಗಳಿರುವುದರಿಂದ ಜೊತೆಗೆ



ಒಂದು ವೇಳೆ ಭಾಗ್ಯರೇಖೆಯಿಂದ ಯಾವುದಾದರೂ ಶಾಖೆ ಗುರು ಪರ್ವತದ ಮೇಲೆ ತಲುಪಿದರೆ ಅಂತಹ ವ್ಯಕ್ತಿ ಖಂಡಿತವಾಗಿ ಮುಖ್ಯ ನ್ಯಾಯಾಧೀಶನಾಗುತ್ತಾನೆ.

**5. ಶಿಲ್ಪಕಾರ**

ಒಂದು ವೇಳೆ ಕೈನ ಬೆರಳುಗಳು ಉದ್ದವಾಗಿದ್ದರೆ ಮತ್ತು ಮೇಲಿನ ತುದಿ ಚೌಕೋನಾಕಾರವಾಗಿದ್ದರೆ ಮತ್ತು ಸೂರ್ಯರೇಖೆ ಪೂರ್ಣ ವಿಕಸಿತವಾಗಿ, ಸ್ಪಷ್ಟವಾಗಿ, ದಟ್ಟವಾಗಿದ್ದರೆ ಹಾಗೂ ಶನಿ ಕ್ಷೇತ್ರದ ಮೇಲೆ ಯಾವುದೇ ಪ್ರಕಾರದ ಬಾಧಕ ರೇಖೆಗಳು ಇರದೇ ಹೋದರೆ ಮತ್ತು ಅವನ ಹೆಬ್ಬೆರಳು ತೆಳುವಾಗಿ ಮತ್ತು ಸ್ವಲ್ಪ ಉದ್ದಕ್ಕಿದ್ದರೆ ಇಂತಹ ವ್ಯಕ್ತಿ ಖಂಡಿತವಾಗಿ ಸಫಲ ಮೂರ್ತಿಕಾರ ಅಥವಾ ಶಿಲ್ಪಕಾರನಾಗುತ್ತಾನೆ.



**6. ಸೈನಿಕ**

ಯಾವ ವ್ಯಕ್ತಿಯ ಶರೀರ ಸ್ವಸ್ಥವಾಗಿ, ಪುಷ್ಟವಾಗಿ, ಪ್ರಬಲವಾಗಿ ಮತ್ತು ಉದ್ದವಾಗಿರುವುದೋ ಮತ್ತು ಅವನ ಕೈ ಸಾಮಾನ್ಯ ಉದ್ದವಾಗಿರುವುದೋ ಅಂಥವನಲ್ಲಿ ಸೈನಿಕನ ಚಿಹ್ನೆಗಳು ನೋಡಲು ದೊರೆಯುತ್ತವೆ.

ಇದರ ಜೊತೆಗೆ ಇಂತಹ ವ್ಯಕ್ತಿಯ ಅಂಗೈನಲ್ಲಿ ಒಂದು ವೇಳೆ ಮಂಗಳ ಕ್ಷೇತ್ರ ವಿಸ್ತಾರವಾಗಿದ್ದರೆ ಮತ್ತು ಮಂಗಳದ ಮೇಲೆ ಉಜ್ವಲ ನಕ್ಷತ್ರದ ಚಿಹ್ನೆ ಇದ್ದರೆ ಮತ್ತು ಇವನ ಭಾಗ್ಯರೇಖೆ ವಿಕಸಿತವಾಗಿ ಹಾಗೂ ಸ್ಪಷ್ಟವಾಗಿದ್ದರೆ ಅಂತಹ ವ್ಯಕ್ತಿ ಖಂಡಿತಾ ಓರ್ವ ಸಫಲ ಸೈನಿಕನಾಗುತ್ತಾನೆ.



ಮೇಲೆ ಹೇಳಿದ ಗುಣಗಳ ಜೊತೆಯಲ್ಲಿ ಎರಡು ಮಂಗಳಗಳು

ಅಂಗೈನಲ್ಲಿ ಬಹಳ ಅಧಿಕ ವಿಕಸಿತವಾಗಿದ್ದರೆ ಮತ್ತು ಸೂರ್ಯ ಪರ್ವತದ ಮೇಲೆ ಸೂರ್ಯ ರೇಖೆ ಸ್ಪಷ್ಟವಾಗಿ ಮತ್ತು ನಿರ್ದೋಷವಾಗಿ ಅಂಕಿತವಾಗಿದ್ದರೆ ಮತ್ತು ಹೆಬ್ಬೆರಳು ದೃಢವಾಗಿ ಉದ್ದವಾಗಿದ್ದರೆ ಮತ್ತು ಸಾಮಾನ್ಯ ರೀತಿಯಲ್ಲಿ ಹಿಂಬದಿಗೆ ಬಾಗಿಕೊಂಡಿದ್ದರೆ ಅಂತಹ ವ್ಯಕ್ತಿ ನಿಶ್ಚಯವಾಗಿ ಜನರಲ್ ಅಥವಾ ಬ್ರಿಗೆಡಿಯರ್ ಆಗುತ್ತಾನೆ.

ಮೇಲೆ ಹೇಳಿರುವ ಗುಣಗಳ ಜೊತೆಗೆ ಒಂದು ವೇಳೆ ಸೂರ್ಯ ರೇಖೆಯ ಮೇಲೆ ಸುಂದರ ತ್ರಿಕೋನದ ಚಿಹ್ನೆ ಇದ್ದರೆ ಮತ್ತು ಎಲ್ಲಾ ಬೆರಳುಗಳು ತಮ್ಮ ತಮ್ಮಲ್ಲೇ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಅವಶ್ಯವಾಗಿ ಸ್ಥಳ ಸೇನಾಧ್ಯಕ್ಷನಾಗುತ್ತಾನೆ.

**7. ಐ.ಎ.ಎಸ್.**



ಯಾರ ಕೈಗಳಲ್ಲಿ ಬುಧನ ಬೆರಳು ಅಂದರೆ ಕಿರುಬೆರಳು ಉದ್ದವಾಗಿದ್ದರೆ ಮತ್ತು ಅದರ ತುದಿ ಉಂಗುರದ ಬೆರಳಿನ ಮೂರನೇ ಭಾಗದಿಂದ ಮುಂದಕ್ಕೆ ಅಂದರೆ ಅರ್ಧಕ್ಕಿಂತ ಹೆಚ್ಚು ಭಾಗದವರೆಗೆ ತಲುಪಿದ್ದರೆ ಮತ್ತು ಇದರ ಜೊತೆಯಲ್ಲೇ ಸೂರ್ಯರೇಖೆ ಉಚ್ಛವಾಗಿದ್ದರೆ ಅಂತಹ ವ್ಯಕ್ತಿ ಐ.ಎ.ಎಸ್. ಅಧಿಕಾರಿಯಾಗುತ್ತಾನೆ.

ಒಂದು ವೇಳೆ ಸೂರ್ಯರೇಖೆಯಲ್ಲಿ ಬಲಹೀನತೆ ಇದ್ದರೆ ಅಥವಾ ಕತ್ತರಿಸಲ್ಪಟ್ಟಿದ್ದರೆ ಅಂತಹ ವ್ಯಕ್ತಿ ಕೇವಲ ಐ.ಎ.ಎಸ್. ಅಧಿಕಾರಿಯಾಗಿ ಮಾತ್ರ ಉಳಿಯುತ್ತಾನೆ.

ಒಂದು ವೇಳೆ ಕಿರುಬೆರಳು ಉದ್ದವಾಗಿದ್ದರೆ ಮತ್ತು ಸೂರ್ಯ ರೇಖೆ ತನ್ನಲ್ಲೇ ಪುಷ್ಟವಾಗಿದ್ದರೆ ಮತ್ತು ಮಸ್ತಿಷ್ಕರೇಖೆ ಪೂರ್ಣ ವಿಕಸಿತವಾಗಿದ್ದರೆ ಮತ್ತು ಅದರ ಜೊತೆಯಲ್ಲೇ ಭಾಗ್ಯರೇಖೆ ಉದ್ದವಾಗಿ, ನಿರ್ದೋಷವಾಗಿ ಮತ್ತು ಪೂರ್ಣವಾಗಿದ್ದರೆ ವ್ಯಕ್ತಿ ಕೇಂದ್ರ ಸರಕಾರದಲ್ಲಿ ಉಚ್ಛ ಪದವಿಯ ಅಧಿಕಾರಿಯಾಗುತ್ತಾನೆ.

ಭಾಗ್ಯರೇಖೆ ಮತ್ತು ಗುರುಪರ್ವತ ಹೆಚ್ಚು ಶ್ರೇಷ್ಠವಾಗಿದ್ದರೆ ವ್ಯಕ್ತಿ ನಿಶ್ಚಯವಾಗಿ ಕೇಂದ್ರ ಸರಕಾರದಲ್ಲಿ ಸೆಕ್ರೆಟ್ರಿ ಅಥವಾ ಅತ್ಯಂತ ಉಚ್ಛ ಪದವಿಯನ್ನು ಪಡೆಯುತ್ತಾನೆ.

**8. ನಾವಿಕ (ನೇವಿ ಅಧಿಕಾರಿ)**

ಶ್ರೇಷ್ಠ ಮತ್ತು ಕುಶಲ ಜಲಸೇನೆಯ ನಾಯಕನ ಕೈ ಪೂರ್ಣ ಉದ್ದವಾಗಿರುತ್ತದೆ ಮತ್ತು ಅದರ ಮೇಲೆ ಚಂದ್ರ ಪರ್ವತ ಪೂರ್ಣ ವಿಕಸಿತ ಅವಸ್ಥೆಯಲ್ಲಿರುತ್ತದೆ. ಯಾರ ಕೈಲಿ ಚಂದ್ರ ಪರ್ವತ ವಿಕಸಿತವಾಗಿರುತ್ತದೋ ಮತ್ತು ಅದರಿಂದ ರೇಖೆ ಹೊರಟು ಸೂರ್ಯನ ಕಡೆಗೆ ಹೋಗುತ್ತಿದ್ದರೆ ಮತ್ತು ಭಾಗ್ಯ ರೇಕೆ ಹಾಗೂ ಮಸ್ತಿಷ್ಕ ರೇಖೆ ತಮ್ಮತಮ್ಮಲ್ಲೇ ಪೂರ್ಣ ವಿಕಸಿತವಾಗಿದ್ದರೆ ವ್ಯಕ್ತಿ ನಿಸ್ಸಂದೇಹವಾಗಿ ಜಲಸೇನೆಯ ಅಧ್ಯಕ್ಷನಾಗುತ್ತಾನೆ.



ಒಂದು ವೇಳೆ ಚಂದ್ರಪರ್ವತ ಕಡಿಮೆ ಉಬ್ಬಿದ್ದರೆ ಅಥವಾ ಚಂದ್ರ ರೇಖೆ ಬಲಹೀನವಾಗಿದ್ದರೆ ಮತ್ತು ಉಳಿದ ಎಲ್ಲಾ ಗುಣಗಳು ಅಂಗೈನಲ್ಲಿದ್ದರೆ ಅಂತವನು ನೇವಿಯಲ್ಲಿ ಉಚ್ಚಪದವಿಯ ಕಾರ್ಯ ನಿರ್ವಹಿಸುವವನಾಗಿರುತ್ತಾನೆ.

ಒಂದು ವೇಳೆ ಚಂದ್ರ ಪರ್ವತ ಹೆಚ್ಚು ಹೂತುಹೋಗಿದ್ದರೆ ಮತ್ತು ಭಾಗ್ಯರೇಖೆ ಬಲಹೀನವಾಗಿದ್ದರೆ ಅವನು ಕೇವಲ ದೋಣಿ ಅಥವಾ ಹಡಗು ನಡೆಸುವ ನಾವಿಕನಾಗಿರುತ್ತಾನೆ.

**9. ಡಾಕ್ಟರ್**

ಯಾರ ಕೈಲಿ ಬುಧ ಪರ್ವತ ಪೂರ್ಣ ವಿಕಸಿತವಾಗಿರುತ್ತದೋ ಮತ್ತು ಕಿರುಬೆರಳು ಉದ್ದವಾಗಿರುತ್ತದೋ ಮತ್ತು ಇದರ ತುದಿ ಉಂಗುರದ ಬೆರಳಿನ ಮೇಲಿನ ಭಾಗದ ಮಧ್ಯದವರೆಗೆ ಹೋಗುತ್ತದೋ ಮತ್ತು ಬುಧಕ್ಷೇತ್ರದ ಮೇಲೆ ಮೂರು ನಿಂತಿರುವ ರೇಖೆಗಳಿರುವುದೋ ಅಂತಹ ವ್ಯಕ್ತಿ ಓರ್ವ ಸಫಲ ಡಾಕ್ಟರ್ ಆಗುತ್ತಾನೆ.



ಮೇಲೆ ತಿಳಿಸಿದ ಗುಣಗಳ ಜೊತೆಗೆ ಮಂಗಳ ಪರ್ವತ ಹೆಚ್ಚು ವಿಕಸಿತವಗಿದ್ದರೆ ಮತ್ತು ಮಂಗಳ ರೇಖೆಯೂ ಸಹ ಪುಷ್ಟವಾಗಿ ಮತ್ತು ಪ್ರಬಲವಾಗಿದ್ದರೆ

ಅಂತಹ ವ್ಯಕ್ತಿ ಓರ್ವ ಸಫಲ ಸರ್ಜನ್ ಆಗುತ್ತಾನೆ.

ಒಂದು ವೇಳೆ ಮಂಗಳ ಪರ್ವತ ಹೂತುಹೋಗಿದ್ದರೆ ಇದರ ಹೊರತು ಅಂಗೈನಲ್ಲಿ ಉಳಿದ ಎಲ್ಲಾ ಗುಣಗಳಿದ್ದರೆ ಮತ್ತು ಬೃಹಸ್ಪತಿ ಪೂರ್ಣ ವಿಕಸಿತವಾಗಿದ್ದರೆ ಹಾಗೂ ಅದರ ಮೇಲೆ ವರ್ಗದ ಚಿಹ್ನೆ ಇದ್ದರೆ ಆ ವ್ಯಕ್ತಿ ಪ್ರಖ್ಯಾತ ವೈದ್ಯನಾಗುತ್ತಾನೆ.

## 10. ಇಂಜನಿಯರ್ (ವೈಜ್ಞಾನಿಕ ಮತ್ತು ಮೆಕ್ಯಾನಿಕ್)

ಯಾವ ಮನುಷ್ಯನ ಎಲ್ಲಾ ಬೆರಳುಗಳು ಉದ್ದವಾಗಿರುತ್ತದೋ ಮತ್ತು ಶನಿಪರ್ವತ ವಿಕಸಿತವಾಗಿರುತ್ತದೋ ಹಾಗೂ ಅದರ ಮೇಲೆ ಭಾಗ್ಯರೇಖೆ ನಿರ್ದೋಷ ರೂಪದಿಂದ ಬಂದು ನಿಂತಿದ್ದರೆ ಮತ್ತು ಪರ್ವತದ ಮೇಲೆ ಮೂರ್ನಾಕು ನಿಂತಿರುವ ರೇಖೆಗಳಿದ್ದರೆ ಅಂತಹ ವ್ಯಕ್ತಿ ಸಫಲ ವೈಜ್ಞಾನಿಕನಾಗುತ್ತಾನೆ.



ಮೇಲೆ ತಿಳಿಸಿದ ಗುಣಗಳ ಜೊತೆಗೆ ಬೃಹಸ್ಪತಿ ಪರ್ವತ ಬಲಹೀನವಾಗಿದ್ದರೆ ಅಂತಹ ವ್ಯಕ್ತಿ ಸಫಲ ಇಂಜಿನಿಯರ್ ಆಗುತ್ತಾನೆ. ಈ ರೀತಿಯ ಇಂಜಿನಿಯರ್ ಚಿಹ್ನೆ ಇದ್ದು ಜೊತೆಗೆ ಚಂದ್ರಪರ್ವತ ಶ್ರೇಷ್ಠವಾಗಿದ್ದರೆ ಆ ವ್ಯಕ್ತಿ ವಾಟರ್ ವರ್ಕ್ಸ್‌ನಲ್ಲಿ ಇಂಜಿನಿಯರ್ ಆಗುತ್ತಾನೆ.

ಮೇಲೆ ಹೇಳಿದ ಚಿಹ್ನೆ ಅಂಗೈನಲ್ಲಿದ್ದು ಜೊತೆಗೆ ಮಸ್ತಿಷ್ಕ ರೇಖೆ ಮತ್ತು ಶನಿ ರೇಖೆ ಪೂರ್ಣ ವಿಕಾಸವಾಗಿದ್ದರೆ ಅಂತಹ ವ್ಯಕ್ತಿ ಓರ್ವ ಸಫಲ ವಿಮಾನ ಚಾಲಕನಾಗುತ್ತಾನೆ. ಆದರೆ ಇದರಲ್ಲಿ ಚಂದ್ರ ಪರ್ವತ ಮತ್ತು ಚಂದ್ರ ರೇಖೆ ಅತ್ಯಂತ ಶ್ರೇಷ್ಠವಾಗಿರಬೇಕಾದುದು ಆವಶ್ಯಕ.

## 11. ಧರ್ಮಗುರು

ಯಾವುದಾದರೂ ಮನುಷ್ಯನ ಅಂಗೈಲಿ ತೋರು ಬೆರಳು ಉಂಗುರದ ಬೆರಳಿಗಿಂತ ಉದ್ದವಾಗಿದ್ದರೆ ಮತ್ತು ಗುರು ಪರ್ವತ ಪೂರ್ಣ ವಿಕಾಸವಾಗಿದ್ದರೆ ಮತ್ತು ಅದರ ಮೇಲೆ ಕ್ರಾಸ್ ಚಿಹ್ನೆ ಇದ್ದರೆ ಅಂತಹ ವ್ಯಕ್ತಿ ಖಂಡಿತವಾಗಿ ಓರ್ವ ಸಫಲ ಪುರೋಹಿತ ಅಥವಾ ಧಾರ್ಮಿಕ ವ್ಯಕ್ತಿ ಆಗುತ್ತಾನೆ.

ಮೇಲೆ ಹೇಳಿದ ಚಿಹ್ನೆಯ ಜೊತೆಗೆ ಸೂರ್ಯ ಪರ್ವತ ಮತ್ತು



ಸೂರ್ಯ ರೇಖೆ ಹೆಚ್ಚು ವಿಕಸಿತವಾಗಿದ್ದರೆ ವ್ಯಕ್ತಿ ಪ್ರಸಿದ್ಧ ಉಪದೇಶಕ ಅಥವಾ ಧರ್ಮಗುರು ಆಗುತ್ತಾನೆ.

ಮೇಲೆ ತಿಳಿಸಿದ ಚಿಹ್ನೆಗಳ ಜೊತೆಗೆ ಜೀವನರೇಖೆ ಕತ್ತರಿಸಿಹೋಗಿದ್ದರೆ ಅಂತಹ ವ್ಯಕ್ತಿ ಅವಶ್ಯವಾಗಿ ಸನ್ಯಾಸಿಯಾಗುತ್ತಾನೆ. ಸನ್ಯಾಸಿ ಆದನಂತರ ಈತನಿಗೆ ಕೀರ್ತಿ ಗೌರವ ದೊರೆಯುತ್ತದೆ.

## 12. ಕಲಾಕಾರ

ಯಾವುದಾದರೂ ವ್ಯಕ್ತಿಯ ಬೆರಳುಗಳು ಪೂರ್ಣ ಉದ್ದವಾಗಿದ್ದರೆ ಮತ್ತು ಗಂಟುಗಳಿಂದ ಕೂಡಿರದಿದ್ದರೆ ಹಾಗೂ ಬೆರಳುಗಳು ಇಳಿಜಾರಾಗಿದ್ದರೆ ಮತ್ತು ಬೆರಳುಗಳ ತುದಿ ಚೂಪಾಗಿದ್ದರೆ ಅಂತಹ ವ್ಯಕ್ತಿ ಓರ್ವ ಸಫಲ ಕಲಾಕಾರನಾಗುತ್ತಾನೆ.



ಮೇಲೆ ತಿಳಿಸಿದ ಗುಣಗಳ ಜೊತೆಗೆ ಚಂದ್ರ ಪರ್ವತ ಪೂರ್ಣ ವಿಕಸಿತವಾಗಿದ್ದರೆ ಅಂತಹ ವ್ಯಕ್ತಿ ಶ್ರೇಷ್ಠ ಚಿತ್ರಕಾರನಾಗುತ್ತಾನೆ.

ಒಂದು ವೇಳೆ ಬುಧ ಪರ್ವತ ವಿಕಸಿತವಾಗಿದ್ದರೆ ಮತ್ತು ಬುಧರೇಖೆ ಪೂರ್ಣ ಉದ್ದವಾಗಿ, ನಿರ್ದೋಷವಾಗಿ ಮುಂದುವರೆದಿದ್ದರೆ ಅಂತಹ ವ್ಯಕ್ತಿ ಸಫಲ ಸಂಗೀತಜ್ಞನಾಗುತ್ತಾನೆ. ಮೇಲೆ ಹೇಳಿದ ಗುಣಗಳಿದ್ದು ಜೊತೆಗೆ ಶುಕ್ರ ಪರ್ವತ ಪೂರ್ಣ ವಿಕಾಸವಾಗಿದ್ದರೆ ಮತ್ತು ಅದರ ಕ್ಷೇತ್ರ ಅತ್ಯಂತ ಹರಡಿಕೊಂಡಿದ್ದರೆ ವ್ಯಕ್ತಿ ಸಫಲ ನೃತ್ಯಕಾರನಾಗಿ ಪ್ರಸಿದ್ಧಿ ಪಡೆಯುತ್ತಾನೆ.

## 13. ಸಾಹಿತ್ಯಕಾರ

ಯಾವ ವ್ಯಕ್ತಿಯ ಕೈಲಿ ಗುರು ಪರ್ವತ ಮತ್ತು ಚಂದ್ರ ಪರ್ವತ ಪೂರ್ಣವಾಗಿ ಉಬ್ಬಿಕೊಂಡಿರುವುದೋ ಮತ್ತು ಸೂರ್ಯನ ಬೆರಳು ತೋರು ಬೆರಳಿಗಿಂತ ಉದ್ದವಾಗಿದ್ದರೆ ಮತ್ತು ಬೆರಳುಗಳಲ್ಲಿ ಗಂಟುಗಳಿಲ್ಲದೆ

ಹೋದರೆ ಅಂತಹ ವ್ಯಕ್ತಿ ಓರ್ವ ಸಫಲ ಸಾಹಿತ್ಯಕಾರನಾಗುತ್ತಾನೆ.



ಇದರ ಜೊತೆಯಲ್ಲಿ ಸೂರ್ಯರೇಖೆ ಉದ್ದವಾಗಿದ್ದರೆ, ನಿರ್ದೋಷವಾಗಿದ್ದರೆ ಮತ್ತು ಸೂರ್ಯ ಪರ್ವತ ತನ್ನ ಸ್ಥಾನದ ಮೇಲಿದ್ದರೆ ಅಂತಹ ವ್ಯಕ್ತಿ ಲೇಖನ ಮಾಧ್ಯಮದಿಂದ ಪ್ರಸಿದ್ಧಿ ಪಡೆದು ಕೊಳ್ಳುತ್ತಾನೆ.

ಮೇಲೆ ತಿಳಿಸಿದ ಗುಣಗಳ ಜೊತೆಗೆ ಚಂದ್ರ ರೇಖೆ ಧನುಸ್ಸಿನ ರೂಪದಲ್ಲಿ ಬುಧ ಪರ್ವತದ ಕಡೆಗೆ ಬರುತ್ತಿದ್ದರೆ ಅಂತಹ ವ್ಯಕ್ತಿ ಓರ್ವ ಸಫಲ ಕವಿಯಾಗುತ್ತಾನೆ.

ಇದರ ಜೊತೆಯಲ್ಲಿ ಭಾಗ್ಯರೇಖೆ ಮತ್ತು ಮಸ್ತಿಷ್ಕ ರೇಖೆ ಪೂರ್ಣ ವಿಕಸಿತವಾಗಿ ಸ್ಪಷ್ಟವಾಗಿದ್ದರೆ ವ್ಯಕ್ತಿ ನಿಶ್ಚಯವಾಗಿ ತನ್ನ ಕ್ಷೇತ್ರದಲ್ಲಿ ಕೀರ್ತಿ, ಗೌರವ ಮತ್ತು ಪ್ರಸಿದ್ಧಿ ಪಡೆದುಕೊಳ್ಳುತ್ತಾನೆ.

### 14. ನಟ – ನಟಿ



ಒಂದು ವೇಳೆ ಕೈನ ಎಲ್ಲಾ ಬೆರಳುಗಳು ಕೋಮಲವಾಗಿದ್ದರೆ ಮತ್ತು ಇಳಿಜಾರಾಗಿದ್ದರೆ ಮತ್ತು ಸೂರ್ಯನ ಬೆರಳು ವಿಶೇಷ ಉದ್ದವಾಗಿದ್ದರೆ ಮತ್ತು ಮೇಲಿನ ತುದಿ ಮೊನಚಾಗಿದ್ದರೆ ಮತ್ತು ಮಸ್ತಿಷ್ಕರೇಖೆ ಹಾಗೂ ಭಾಗ್ಯರೇಖೆ ಪೂರ್ಣ ಉದ್ದವಾಗಿದ್ದರೆ ಅಂತಹ ವ್ಯಕ್ತಿ ಸಫಲ ಅಭಿನೇತ್ರ ಅಥವಾ ಅಭಿನೇತ್ರಿಯಾಗುತ್ತಾರೆ.

ಸೂರ್ಯರೇಖೆ ವಿಶೇಷ ಸುಂದರವಾಗಿ, ಉದ್ದವಾಗಿ, ಸ್ಪಷ್ಟವಾಗಿ, ಮೃದುವಾಗಿ ಮತ್ತು ನಿರ್ದೋಷ ರೂಪದಲ್ಲಿ ಉದ್ದವಾಗಿದ್ದರೆ ಅವರು ಅದ್ವಿತೀಯ ಕಲಾಕಾರರಾಗುತ್ತಾರೆ.

ಒಂದು ವೇಳೆ ಸೂರ್ಯ ರೇಖೆಯ ಮೇಲೆ ನಕ್ಷತ್ರದ ಚಿಹ್ನೆ ಇದ್ದರೆ ಅಂತಹ ನಟ ಅಥವಾ ನಟಿ ವಿಶ್ವವಿಖ್ಯಾತರಾಗುತ್ತಾರೆ.

## 15. ಶಿಕ್ಷಕ



ಯಾರ ಕೈಲಿ ಜೀವನ ರೇಖೆ, ಭಾಗ್ಯರೇಖೆ ಮತ್ತು ಸೂರ್ಯರೇಖೆ ವಿಕಸಿತವಾಗಿರುತ್ತದೋ ಮತ್ತು ಗುರು ಪರ್ವತವೂ ಸಹ ವಿಕಸಿತವಾಗಿದ್ದು ಅದರ ಮೇಲೆ ಕ್ರಾಸ್ ಚಿಹ್ನೆ ಇರುತ್ತದೋ ಹಾಗೂ ಉಂಗುರದ ಬೆರಳಿಗಿಂತ ತೋರು ಬೆರಳು ಉದ್ದವಾಗಿರುತ್ತದೋ ಅವರು ಸಫಲ ಶಿಕ್ಷಕರಾಗುತ್ತಾರೆ.

# ದಿನಕ್ಕೊಂದು ಮಕ್ಕಳ ಕಥೆ

ಎಂಬ ಪುಸ್ತಕವು ಜನವರಿ ತಿಂಗಳಿಂದ ಡಿಸೆಂಬರ್ ತಿಂಗಳಿನವರೆಗೆ 12 ಪುಸ್ತಕಗಳು ಬಹಳ ಅಂದವಾಗಿ ಆಫ್‌ಸೆಟ್ ಮುದ್ರಣದಲ್ಲಿ ಒಳಪುಟಗಳೂ ಹಾಗೂ ಅಂದವಾದ ಬಹು ವರ್ಣಗಳ ರಕ್ಷಾಪುಟವನ್ನು ಹೊಂದಿ, ಒಟ್ಟು 366 (ಒಂದು ವರ್ಷದಲ್ಲಿ ದಿನಕ್ಕೊಂದು ಕಥೆಯಂತೆ) ಮಕ್ಕಳ ಉತ್ತಮ ಲೇಖನಗಳನ್ನೊಂದಿಕೊಂಡು ಉತ್ತಮವಾಗಿದೆ.

## ಲೇಖಕರು : ಕೃ. ನಾರಾಯಣರಾವ್

**ಜನವರಿ ತಿಂಗಳಿನಿಂದ ಡಿಸೆಂಬರ್ ತಿಂಗಳಿನ**
**ಪ್ರತಿ ತಿಂಗಳಿನ ಪುಸ್ತಕದ**

## ಮೂಲ ಬೆಲೆ ರೂ. 10-00